# ನವಕರ್ನಾಟಕ ಪ್ರಕಾಶನದಿಂದ ಲೋಕಾರ್ಪಣೆಗೊಳ್ಳಲಿರುವ ಕೃತಿಗಳು

✣ ಪುಸ್ತಕಗಳ ಲೋಕಾರ್ಪಣೆ : 19-5-2013ರಂದು ಬೆಳಗ್ಗೆ 10 ಕ್ಕೆ ✣ ಸ್ಥಳ : ನಯನ ಸಭಾಂಗಣ, ಜೆ. ಸಿ. ರಸ್ತೆ, ಬೆಂಗಳೂರು

ಅಧ್ಯಕ್ಷತೆ ಹಾಗೂ ಪುಸ್ತಕಗಳ ಲೋಕಾರ್ಪಣೆ : ಪ್ರೊ|| ಎಸ್. ಜಿ. ಸಿದ್ಧರಾಮಯ್ಯ

**ಸಾಹಿತ್ಯಾಭಿಮಾನಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕಾಗಿ ಕೋರಿಕೆ**




## ← ವಿಶ್ವ ಕಥಾವಾಹಿನಿ (ಬೆಲೆ : ₹ 200)

ಜಗತ್ತಿನ ಶ್ರೇಷ್ಠ ಕಥೆಗಳನ್ನು ಸಂಗ್ರಹಿಸಿ 25 ಸಂಪುಟಗಳಲ್ಲಿ ನೀಡಿದ 'ವಿಶ್ವ ಕಥಾ ಕೋಶ' ಕರ್ನಾಟಕದಲ್ಲಂತೂ ಮನೆಮಾತಾಗಿದೆ. ಸಂಪಾದಕ ನಿರಂಜನರ ಪ್ರತಿ ಸಂಪುಟದಲ್ಲಿನ ಅಮೂಲ್ಯ ಪ್ರಸ್ತಾವನೆಗಳಂತೂ ಜಗತ್ತಿನ ಸಾಹಿತ್ಯ ಚರಿತ್ರೆಯ ಕಿರುಪರಿಚಯವನ್ನೇ ಹೊಂದಿರುವಂಥವು. ಅವೆಲ್ಲವನ್ನೂ ಒಟ್ಟಾಗಿಸಿ ಒಂದು ಪ್ರತ್ಯೇಕ ಪುಸ್ತಕ ಹೊರತರಲೇಬೇಕೆಂಬ ಓದುಗರ ಒತ್ತಾಯ, ಹಂಬಲ ಅಂದಿನಿಂದಲೇ ಬಲವಾಗಿತ್ತು. ಅದೀಗ ಪ್ರೊ|| ಎಂ. ಎಚ್. ಕೃಷ್ಣಯ್ಯ ಅವರ ಮುನ್ನುಡಿಯೊಂದಿಗೆ ಸಾಕಾರಗೊಂಡು ವಿಶ್ವ ಕಥಾವಾಹಿನಿಯಾಗಿ ಹರಿದು ಬರುತ್ತಿದೆ. 96 ದೇಶ ಪ್ರದೇಶಗಳ ಕಥೆ ಓದುವುದಕ್ಕೆ ಮುನ್ನ ಒಂದು ಪ್ರವೇಶಿಕೆ.

## ಶಾಂತಿಗೊಂದು ಸವಾಲು (ಬೆಲೆ : ₹ 100) →




ಹಿರಿಯ ಕವಿ ಬಿ. ಎ. ಸನದಿಯವರ ಕವನಗಳೆಂದರೆ ಸಾಮಾನ್ಯ ಜನರ ಪರವಾಗಿರುವ ದನಿಗಳಾಗಿವೆ. ಅಲ್ಲಿ ದಯಾರ್ದ್ರ ಭಾವನೆಯೊಂದಿಗೆ ಮಾನವೀಯತೆ ತಲೆ ಎತ್ತಿ ನಿಂತಿದೆ. ಅಸಮಾನತೆ, ಶೋಷಣೆ, ಅನ್ಯಾಯದ ವಿರುದ್ಧ ಆಕ್ರೋಶವಿದೆ. ಒಂದು ಸಿದ್ಧಾಂತದ ಬದ್ಧತೆಗೆ ಒಡ್ಡಿಕೊಂಡು ಜೀವನಾನುಭವ ಕಲಿಸಿದ ನಿಜದ ರೂಪಕಗಳು. ಕವನಗಳನ್ನು ಸಂಗ್ರಹಿಸಿ ಪ್ರಸ್ತಾವನೆಯನ್ನು ಬರೆದಿರುವವರು ಪ್ರೊ|| ಎಸ್. ಜಿ. ಸಿದ್ಧರಾಮಯ್ಯ. ಮೂರು ಭಾಗಗಳಲ್ಲಿ ಸುಮಾರು 92 ಕವನಗಳಿದ್ದು ಓದಲು ನಿಮ್ಮನ್ನು ಆಹ್ವಾನಿಸುತ್ತವೆ...




## ← ಅಲೆಮಾರಿಯ ಅಂತರಂಗ (ಬೆಲೆ : ₹ 125)

ಬಾಲ್ಯಕಾಲವನ್ನು ಸ್ಮರಿಸುತ್ತಾ ಪ್ರಾಮಾಣಿಕವಾಗಿ ನಿರೂಪಿಸಿದ ಲೇಖಕರ ಆತ್ಮಕಥನ. ಕುಲ ಕಸುಬನ್ನೇ ನೆಚ್ಚಿದ, ನಿಲ್ಲಲು ನೆಲೆಯಿಲ್ಲದ, ಪದಗಳನ್ನು ಹಾಡಿಕೊಂಡು ಊರೂರು ತಿರುಗಿ ಅಲೆಮಾರಿ ಜೀವನ ಸಾಗಿಸುತ್ತಿದ್ದ ದೊಂಬಿದಾಸರೆಂಬ ಜನಾಂಗದ ಜೀವನ ದರ್ಶನವೂ ಇಲ್ಲಿದೆ. ಅಂಥ ಕುಟುಂಬದಲ್ಲಿ ಜನಿಸಿ ಅಕ್ಷರ ಕಲಿತು ಮುಂದೆ ವಿದ್ಯಾವಂತರಾಗಿ, ಉದ್ಯೋಗ ಗಳಿಸಿ ಒಂದೆಡೆ ನೆಲೆಕಂಡು ಬದುಕು ರೂಪಿಸಿಕೊಂಡ ಒಂದು ನೈಜ ಘಟನೆ. ತನ್ನ ಬಾಲ್ಯದ ಬದುಕನ್ನು ಯಾವುದೇ ಅತಿರಂಜನೆ ಇಲ್ಲದೆ ಮನಬಿಚ್ಚಿ ಹೇಳಿಕೊಂಡಿದ್ದಾರೆ, ಶ್ರೀ ಕುಪ್ಪೆ ನಾಗರಾಜ. ಅರ್ಥಪೂರ್ಣ ಮುಖಪುಟ, ಬರಗೂರರ ಮುನ್ನುಡಿ – ಪುಸ್ತಕದ ಶೋಭೆಯನ್ನು ಹೆಚ್ಚಿಸಿವೆ...

## ಗುರಜಾಡರ ಕಥೆಗಳು (ಬೆಲೆ : ₹ 45) →




ಕನ್ನಡದಲ್ಲಿ ಸಣ್ಣಕಥೆಗಳ ಜನಕ ಎಂದು ಮಾಸ್ತಿಯವರು ಹೇಗೆ ಪ್ರಸಿದ್ಧರೋ ತೆಲುಗು ಕಥಾ ಸಾಹಿತ್ಯದಲ್ಲೂ ಗುರಜಾಡ ಅಪ್ಪಾರಾವ್ ಅವರಿಗೆ ಅದೇ ಆದರ, ಗೌರವ. ಸ್ತ್ರೀಪರ ದನಿಯಾಗಿದ್ದು, ಆಧುನಿಕ ಚಿಂತನೆಗಳನ್ನು ಮೈಗೂಡಿಸಿಕೊಂಡವರು. ಕನ್ನಡದಲ್ಲಿ ಮಾಸ್ತಿಯವರ ಮೊದಲ ಕಥೆ ಪ್ರಕಟವಾದ ವರ್ಷವೇ ಗುರಜಾಡರ ಕಥೆಯೂ ಪ್ರಕಟವಾದದ್ದು ವಿಶೇಷ. ಇಬ್ಬರೂ ಸಮಕಾಲೀನರು. ಅಲ್ಲಲ್ಲಿ ಚದುರಿಹೋಗಿದ್ದ ಕಥೆಗಳು ಸ. ರಘುನಾಥ ಅವರಿಂದ ಕನ್ನಡಕ್ಕೆ ಅನುವಾದಗೊಂಡು ಇದೀಗ ಒಂದೇ ಸಂಕಲನದಲ್ಲಿ ಲಭ್ಯ.




## ← ಅಕಾಲ ಮಳೆ ಸುರಿದಾಗಿನ ಕಥೆ (ಬೆಲೆ : ₹ 90)

ಅಕಾಲವೃಷ್ಟಿ – ಅನಾವೃಷ್ಟಿ – ಅತಿವೃಷ್ಟಿ ಮೂರೂ ರೈತರಿಗೆ ಮಾರಕವೇ. ಇಂದಿನ ಜಾಗತೀಕರಣದ ಭರಾಟೆಯಲ್ಲಿ ಕೃಷಿಗೆ ಸಂಬಂಧಿಸಿದ್ದು ಯಾವುದೂ ಕೈ ಹತ್ತುತ್ತಿಲ್ಲ, ಸಾಲ–ಸೋಲ–ಬಾಧೆ. ಮಳೆ–ಬೆಳೆ ಕೈ ಕೊಟ್ಟಾಗ ನಿರುಪಾಯನಾಗಿ ಆತ್ಮಹತ್ಯೆಗೆ ಶರಣು. ಇದರ ಮಧ್ಯೆ ಅನೇಕ ಮೂಢನಂಬಿಕೆಗಳು. ಪ್ರಕೃತಿಯ ವಿದ್ಯಮಾನಗಳೆಲ್ಲವಕ್ಕೂ ಒಳಿತು – ಕೆಡುಕಿನ ಆರೋಪ – ನಾಯಿ ಊಳಿಡಬಾರದು, ಕಾಗೆಗಳು ಕಿರುಚಬಾರದು... ಈ ಕಾದಂಬರಿಯಲ್ಲಿ ಮಾನವನ ಸ್ವಾರ್ಥಕ್ಕಾಗಿ ಮೂಕ ಪ್ರಾಣಿಗಳನ್ನು ಹಿಂಸಿಸುವುದು ಮತ್ತು ಮನಸಾಕ್ಷಿಗೆ ಉತ್ತರಿಸಲಾಗದೆ ಹತಾಶನಾಗುವುದು ಚೆನ್ನಾಗಿ ಚಿತ್ರಿತವಾಗಿದೆ. ಮರಾಠಿ ಲೇಖಕ ಆನಂದ ವಿಂಗಕರ ಅವರ ಅತ್ಯುತ್ತಮ ಕಾದಂಬರಿಯನ್ನು ಶ್ರೀ ಚಂದ್ರಕಾಂತ ಪೋಕಳೆ ಕನ್ನಡಕ್ಕೆ ಅನುವಾದಿಸಿದ್ದಾರೆ.




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕೆ. ಪಿ. ಪೂರ್ವ, ಬೆಂಗಳೂರು – 560 001. ದೂರವಾಣಿ : 30578022, 22203580

ಫ್ಯಾಕ್ಸ್ : 30578023. e-mail : navakarnataka@gmail.com URL : www.navakarnataka.com

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




**ಚಿತ್ರಗಳು :** ವಿ. ಆರ್. ಸಿ. ಶೇಖರ್, ಜಿ. ಎಂ. ಬೊ., ಗೋಪಿ, ಸಂತೋಷ್ ಸಸಿಹಿತ್ಲು, ವಿ. ಗೋಪಾಲ್, ರವಿ ಹೆಗ್ಗಡಿ, ಉಮೇಶ್ ಹಿರೇಮಠ, ಶ್ರೀಹರಿ, ಕಮಲಂ ಅರಸು, ಪ್ರತೀಕ್ ಸಿನ್ಹಾ

**ಮುಖಚಿತ್ರ :** ಮೇ ದಿನಾಚರಣೆ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಮಾರ್ಚ್ ಕಡೆಯ ವಾರದಲ್ಲಿ ದೆಹಲಿಗೆ ಅಮೆರಿಕಾದ ಯಾವುದೋ ಸಚಿವನ ಪ್ರತಿನಿಧಿಯಂತೆ ಒಬ್ಬ ವ್ಯಕ್ತಿ ಬಂದಿಳಿದ. ಆತ ಶಸ್ತ್ರಾಸ್ತ್ರ ತಯಾರಿಕೆ, ಮಾರಾಟ, ಇತ್ಯಾದಿ ಬಾಬ್ತುಗಳನ್ನು ನಿರ್ದೇಶಿಸುವ ಸ್ಥಾನದಲ್ಲಿದ್ದಾನೆ. ದಿನಬೆಳಗಾದರೆ ಯಾರಾದರೂ ಅಮೆರಿಕಾದ ''ಪ್ರತಿಷ್ಠಿತ ಪರಿಣತರು'' ಭಾರತಕ್ಕೆ ದಯಮಾಡಿಸಿ ಮನಮೋಹನ ಸಿಂಗ್ ಸರ್ಕಾರಕ್ಕೆ ಉಪದೇಶ ನೀಡುವುದು, ತಾಕೀತು ಮಾಡುವುದು, ಗುಟ್ಟಾಗಿ ಬೆದರಿಕೆ ಹಾಕುವುದು, ಇತ್ಯಾದಿ ನಡೆಯುತ್ತಲೇ ಇರಬೇಕಾದ್ದು ಈಚಿನ ವರ್ಷಗಳ ಅಘೋಷಿತ ನಿಯಮ. ಈ ಶಸ್ತ್ರಾಸ್ತ್ರ ತಯಾರಕ - ಮಾರಾಟಗಾರ ಹೇಳಿದ್ದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಅದು ಭಾಗಶಃ ಹೀಗಿತ್ತು. ''...ಇದು ವಿದೇಶಿ ಬಂಡವಾಳದ ನೇರ ಹೂಡಿಕೆಯ ಸಂದರ್ಭ. ವಿಶ್ವದಲ್ಲಿ ಪ್ರಜಾಪ್ರಭುತ್ವದ ರಕ್ಷಣೆಗೆ ಇದು ಶ್ರೀರಕ್ಷೆ, ಇದು ಅವಶ್ಯಕ. ಭಾರತದಲ್ಲಿ ಶಸ್ತ್ರಾಸ್ತ್ರ ತಯಾರಿಕೆಯ ಕ್ಷೇತ್ರದಲ್ಲಿ ವಿದೇಶಿ ಬಂಡವಾಳದ ನೇರ ಹೂಡಿಕೆ ಬಹಳ ಕಡಿಮೆ ಇದೆ. ಇದು ವಿಸ್ತರಣೆಗೊಳ್ಳಬೇಕು. ಶಸ್ತ್ರಾಸ್ತ್ರ ತಯಾರಿಕೆಯ ಘಟಕಗಳಲ್ಲಿ ಕನಿಷ್ಠ ಶೇಕಡ ೭೪ರಷ್ಟು ವಿದೇಶಿ ಬಂಡವಾಳದ ನೇರ ಹೂಡಿಕೆ ಆಗಬೇಕು. ಭಾರತವು ಶಸ್ತ್ರಾಸ್ತ್ರ ತಯಾರಿಕೆಯಲ್ಲಿ ಸ್ವಾವಲಂಬನೆ ಸಿದ್ಧಿಸಿಕೊಳ್ಳಲು ಇದು ಅತ್ಯಂತ ಪರಿಣಾಮಕಾರಿಯಾಗಿರುತ್ತದೆ.'' ನಮ್ಮ ಓದುಗರಿಗೆ ಈ ದ್ವಂದ್ವಗಳ ಸೂತ್ರ ಅರ್ಥವಾಗಿದ್ದರೆ ಅವರೇ ಸ್ವತಃ ಹೇಳಿಕೆಯ ''ಪರಮಸತ್ಯ''ವನ್ನು ಅರಿತುಕೊಳ್ಳಲಿ. ''ವಿದೇಶಿ ಬಂಡವಾಳದ ನೇರ ಹೂಡಿಕೆಯಿಂದ ಸ್ವಾವಲಂಬನೆಗೆ ಹಾದಿ'' ಎಂಬ ಹೊಸ ಪ್ರೌಢ ಪ್ರಬಂಧ ಬರೆದು ಯಾರಾದರೂ ಅರ್ಥಶಾಸ್ತ್ರ ವಿದ್ಯಾರ್ಥಿಗಳು ಒಂದೆರಡು ಪಿಎಚ್.ಡಿ. ಪದವಿಗಳನ್ನು ಪಡೆದುಕೊಂಡು ಮೋಂಟೆಕ್ ಸಿಂಗ್ ಅಹ್ಲುವಾಲಿಯ ಅವರಂತೆ ದೇಶವನ್ನು ''ಮುನ್ನಡೆಸಲಿ'' ಎಂದು ಹಾರೈಸೋಣವೆ ?

* * *

ಮುಂಬೈ ಸರಣಿ ಬಾಂಬ್ ಸ್ಫೋಟದ ಅಪರಾಧಿಗಳಲ್ಲಿ ಹಿಂದಿ ಚಿತ್ರನಟ ಸಂಜಯ ದತ್ ಕೂಡ ಒಬ್ಬ. ವರ್ಷಾನುಗಟ್ಟಳೆ ಎಳೆದಾಡಿದ ಈ ಪ್ರಕರಣದ ಮೊಕದ್ದಮೆಯ ಅಂತಿಮ ತೀರ್ಪು ಬಂದದ್ದು ಕೆಲದಿನಗಳ ಹಿಂದೆ. ಪ್ರಕರಣಕ್ಕೆ ಸಂಬಂಧಪಟ್ಟವರೆಲ್ಲ ಪ್ರಕರಣದ ರೂವಾರಿ ಅಂತರರಾಷ್ಟ್ರೀಯ ಭಯೋತ್ಪಾದಕ ದಾವೂದ್ ಇಬ್ರಾಹಿಮ್‌ನ ಭಂಟರು. ದಾವೂದ್ ಇಬ್ರಾಹಿಮ್ ಮತ್ತು ಹಿಂದಿ ಚಿತ್ರರಂಗದ ನಂಟು ಬಹಳ ಹಿಂದಿನದು. ಸಂಜಯ ದತ್ ಮುಂಬೈ ಸರಣಿ ಸ್ಫೋಟದಲ್ಲಿ ಬಳಸಿದ ಶಸ್ತ್ರಸಾಮಗ್ರಿಗಳನ್ನು ಒಪ್ಪ ಮಾಡಿದ್ದನೆಂದು ಆರೋಪ. ಈತನ ಬಳಿ ಅಕ್ರಮವಾಗಿರಿಸಿಕೊಂಡಿದ್ದ ಎ ಕೆ ೫೬ ಬಂದೂಕು ಇತ್ತು. ಸಂಜಯ ದತ್ ಪ್ರಸಿದ್ಧ ಸಿನಿಮಾ ತಾರೆ ನರ್ಗೀಸ್-ಸುನೀಲ್ ದತ್ತರ ಪುತ್ರ. ಸುನೀಲ್ ದತ್ ಕಾಂಗ್ರೆಸ್ಸಿನ ಲೋಕಸಭಾ ಸದಸ್ಯ. ಈಗ ಆತನ ಪುತ್ರಿ ಸದಸ್ಯೆ. ವಿಚಾರಣೆಗಾಗಿ ಸಂಜಯನನ್ನು ಬಂಧಿಸಿದಾಗಲೇ ಮುಂಬಯಿ ಚಿತ್ರರಂಗದಲ್ಲಿ ಕೋಲಾಹಲ ಉಂಟುಮಾಡಿತ್ತು. ಆತನನ್ನು ಹಿಂದಿಟ್ಟುಕೊಳ್ಳುವವರಿಗೆ ಕಮ್ಮಿ ಏನಿರಲಿಲ್ಲ, ಆತನನ್ನು ಅನ್ಯಾಯವಾಗಿ ಪ್ರಕರಣದಲ್ಲಿ ಎಳೆತರಲಾಗಿದೆ, ಕೂಡಲೇ ಬಿಡುಗಡೆ ಮಾಡಬೇಕು ಎಂದು ಒತ್ತಾಯ ಬಂತು. ಕಡೆಗೆ ಜಾಮೀನಿನ ಮೇಲೆ ಹೊರಬಂದ ದತ್ ಈಗ ಅಪರಾಧಿಯೆಂದು ಸಾಬೀತಾಗಿ ಶಿಕ್ಷೆಗೆ ಗುರಿಯಾಗಿದ್ದಾನೆ. ಇನ್ನೂ ಒಂದು ತಿಂಗಳು ಕಾರಾಗೃಹಕ್ಕೆ ಹೋಗದೆ ಹೊರಗಿರಲು ಪರವಾನಗಿ ಪಡೆದುಕೊಂಡಿದ್ದಾನೆ.

ಶಿಕ್ಷೆಗೆ ಗುರಿಯಾಗುತ್ತಿದ್ದ ಹಾಗೆ ಸಂಜಯ ದತ್‌ನ ಬೆಂಬಲಕ್ಕೆ ನಿಂತಿದ್ದು ಮುಂಬಯಿ ಸಿನಿಮಾ ಮಂದಿ. ಇದರ ಜೊತೆಗೆ ದೃಶ್ಯಮಾಧ್ಯಮಗಳಲ್ಲಿ ಸುದೀರ್ಘ ಚರ್ಚೆಗಳೂ ನಡೆದುವು. ಈತ ಅಪರಾಧಿ ಎಂದು ದೇಶದ ಶ್ರೇಷ್ಠ ನ್ಯಾಯಾಲಯ ಸುಪ್ರೀಮ್ ಕೋರ್ಟು ಕೂಡ ಹೇಳಿರುವಾಗ ಈತ ನಿರಪರಾಧಿ ಎಂಬ ಬೊಬ್ಬೆ ಏಕೆ ಅರ್ಥವಾಗುತ್ತಿಲ್ಲ. ಮಹಾರಾಷ್ಟ್ರ ರಾಜ್ಯಪಾಲ ಶಿಕ್ಷಣವನ್ನು ಮನ್ನಾ ಮಾಡಬೇಕೆಂದು ಅರ್ಜಿ ಸಲ್ಲಿಸುವವರಲ್ಲಿ ಭಾರತದ ಪ್ರೆಸ್ ಕೌನ್ಸಿಲ್‌ನ ಅಧ್ಯಕ್ಷ ನ್ಯಾಯಮೂರ್ತಿ ಮಾರ್ಕಂಡೇಯ ಖಟ್ಜು ಅವರೂ ಇರುವುದು ಅಚ್ಚರಿಯ ಸಂಗತಿ. ಹಲವು ವಿಚಾರಗಳಲ್ಲಿ ಮೂಗುತೂರಿಸುವುದು ಇವರ ಪ್ರವೃತ್ತಿ. ಸಿನಿಮಾ ನಟನೊಬ್ಬನ ಬಗ್ಗೆ ಅವರ ಈ ಅನುಕಂಪ ಯಾರಿಗೂ ಅರ್ಥವಾಗದ್ದು. ಟೆಲಿವಿಷನ್ ಚರ್ಚೆಯೊಂದರಲ್ಲಿ ಭಾಗವಹಿಸಿದ್ದ ಇವರು ದತ್ತನ ಪರವಾಗಿ ಮಂಡಿಸಿದ ವಾದ ನ್ಯಾಯಮೂರ್ತಿಗಳ ಸ್ಥಾನಕ್ಕೆ ಗೌರವ ತರುವಂಥದ್ದಾಗಿರಲಿಲ್ಲ. ಕೋಟಿಗಟ್ಟಳೆ ಸಂಪಾದಿಸಿರುವ ಸಿನಿಮಾ ನಟನ ಬಗ್ಗೆ ಇಷ್ಟೊಂದು ಅನುಕಂಪವೇ ? ಅರ್ಥವಾಗದು. ಶ್ರೀಮಂತರಿಗೊಂದು ನ್ಯಾಯ ಬಡವರಿಗೊಂದು ನ್ಯಾಯವೆ ಈ ದೇಶದಲ್ಲಿ ?


*(೭ನೇ ಪುಟಕ್ಕೆ)*




ಸಂಪುಟ-೧೪ ಸಂಚಿಕೆ-೧೦ ಮೇ ೨೦೧೩

**ಗೌರವ ಸಂಪಾದಕ**
ಜಿ. ರಾಮಕೃಷ್ಣ

**ಸಂಪಾದಕ**
ಸಿದ್ದನಗೌಡ ಪಾಟೀಲ

**ಸಹಸಂಪಾದಕರು**
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೪
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯೪, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**

# ಚುನಾವಣಾ ಪದ್ಧತಿಗೇ ಪರ್ಯಾಯಬೇಕು




ಭಾರತದ ಪ್ರಜಾಸತ್ತೆ ಸುಸ್ತಾಗಿದೆ. ೧೯೫೦ ಮತ್ತು ೧೯೫೧ರಲ್ಲಿ ನಮ್ಮ ದೇಶದ ಸಂವಿಧಾನದಲ್ಲಿ ಪ್ರಜಾ ಪ್ರತಿನಿಧಿ ಅಧಿನಿಯಮ ರಚನೆಯಾಗುವಾಗ ನಮ್ಮ ಸಂವಿಧಾನ ತಜ್ಞರು ಈ ವ್ಯವಸ್ಥೆ ಇಷ್ಟು ಬೇಗ ಇಷ್ಟು ದುರ್ಬಲವಾಗುತ್ತದೆ ಎಂದು ಕಲ್ಪಿಸಿರಲಿಲ್ಲ. ೧೯೫೦ ಜನವರಿ ೨೫ರಿಂದ ಅಸ್ತಿತ್ವಕ್ಕೆ ಬಂದಿರುವ ನಮ್ಮ ಚುನಾವಣಾ ಆಯೋಗ ೧೯೫೨ರಿಂದ ಇಂದಿನ ತನಕ ಹಲವಾರು ಚುನಾವಣೆಗಳನ್ನು ನಡೆಸಿದೆ. ಭಾರತದಂಥ ವಿಶಾಲ ಭೂಪ್ರದೇಶ, ವಿವಿಧ ಜಾತಿ, ಭಾಷೆ, ಸಂಸ್ಕೃತಿ, ಜನಸಂಖ್ಯಾ ಬಾಹುಳ್ಯ, ನಾಯಿಕೊಡೆಗಳಂತೆ ಬೆಳೆದ ಅಸಂಖ್ಯ ರಾಜಕೀಯ ಪಕ್ಷಗಳು ಇವನ್ನೆಲ್ಲ ನಿಭಾಯಿಸಿ ಈ ದೇಶದಲ್ಲಿ ಚುನಾವಣೆಗಳನ್ನು ನಡೆಸುತ್ತಿರುವ ಚುನಾವಣಾ ಆಯೋಗದ ಶಕ್ತಿಯನ್ನು ಮೆಚ್ಚಲೇಬೇಕು. ಆದರೆ ಚುನಾವಣೆಗಳು ನಡೆಯುತ್ತಿವೆ ಎಂಬುದಷ್ಟೇ ಮುಖ್ಯವಲ್ಲ, ಹೇಗೆ ನಡೆಯುತ್ತಿವೆ ಎಂಬುದು ಮುಖ್ಯ. ಇದು ಚುನಾವಣಾ ಆಯೋಗಕ್ಕೆ ಸಂಬಂಧಿಸಿದ್ದಲ್ಲ ಚುನಾವಣಾ ವ್ಯವಸ್ಥೆಗೆ, ಪದ್ಧತಿಗೆ ಸಂಬಂಧಿಸಿದ ವಿಷಯ. ನಮ್ಮ ದೇಶದ ಈಗಿರುವ ಚುನಾವಣಾ ಮಾದರಿಯನ್ನು ನಮ್ಮ ಸಂವಿಧಾನ ರಚನೆಕಾರರು ಉತ್ತಮವೆಂದುಕೊಂಡರೂ ಮೂಲದಲ್ಲಿಯೇ ಇದು ಅಲ್ಪಮತದ ಪ್ರಜಾಪ್ರತಿನಿಧಿ ಪ್ರಜಾಪ್ರಭುತ್ವದ ಅಧಿಕಾರ ನಡೆಸುವ ವ್ಯವಸ್ಥೆಯಾಗಿದೆ. ಉದಾಹರಣೆಗೆ ಒಂದು ಲಕ್ಷ ಮತದಾರರಿದ್ದರೆ ಇಂದು ನಮ್ಮ ದೇಶದಲ್ಲಿ ಮತದಾನ ಶೇಕಡಾ ೫೫ರಿಂದ ೬೫ರವರೆಗೆ ಮಾತ್ರ ಆಗುತ್ತದೆ. ಸರಾಸರಿ ಶೇಕಡ ೬೦ ಅಂತ ಹಿಡಿದರೂ ಒಂದು ಲಕ್ಷ ಮತದಾರರಲ್ಲಿ ೬೦ ಸಾವಿರ ಪ್ರಜೆಗಳು ಮಾತ್ರ ಮತದಾನ ಮಾಡಿರುತ್ತಾರೆ. ಈ ಅರವತ್ತು ಸಾವಿರ ಮತದಾರರ ಬೆಂಬಲ ಪಡೆಯಲು ಕನಿಷ್ಠ ನಾಲ್ಕು ರಾಜಕೀಯ ಪಕ್ಷಗಳಿವೆಯೆಂದುಕೊಂಡರೂ ಅವರು ಈ ೬೦ ಸಾವಿರ ಮತಗಳನ್ನು ಹಂಚಿಕೊಳ್ಳುತ್ತಾರೆ. ಇದರಲ್ಲಿ ೨೦ರಿಂದ ೨೫ ಸಾವಿರ ಮತ ಪಡೆದವನು ಆಯ್ಕೆಯಾಗುತ್ತಾನೆ. ಅಂದರೆ ಈ ಅಭ್ಯರ್ಥಿ ಒಟ್ಟು ಮತದಾರರಲ್ಲಿ ಶೇಕಡ ೭೫-೮೦ ಜನರ ಆಯ್ಕೆಯಲ್ಲ. ವಾಸ್ತವದಲ್ಲಿ ಇತ್ತೀಚೆಗೆ ನಾನಾ ಕಾರಣಗಳಿಗೆ ಚುನಾವಣೆಗೆ ಸ್ಪರ್ಧಿಸುವವರ ಸಂಖ್ಯೆ ಹೆಚ್ಚಿದೆ. ಈ ಬಾರಿ ನಡೆಯುತ್ತಿರುವ ವಿಧಾನಸಭಾ ಚುನಾವಣೆಯ ಅಭ್ಯರ್ಥಿಗಳ ಸಂಖ್ಯೆಯನ್ನೇ ಗಮನಿಸಿದರೆ ಇದರ ಸ್ವರೂಪ ತಿಳಿಯುತ್ತದೆ. ಬಳ್ಳಾರಿ ನಗರ ವಿಧಾನಸಭಾ ಕ್ಷೇತ್ರದಲ್ಲಿ ೩೦ ಅಭ್ಯರ್ಥಿಗಳಿದ್ದಾರೆ. ಮೈಸೂರು ಜಿಲ್ಲೆಯ ವರುಣ ಕ್ಷೇತ್ರದಲ್ಲಿ ೨೭ ಜನ ಅಭ್ಯರ್ಥಿಗಳು ಸ್ಪರ್ಧಿಸಿದ್ದಾರೆ. ಕೆಲವೇ ಕ್ಷೇತ್ರಗಳಲ್ಲಿ ಕನಿಷ್ಠ ೬ ಜನ ಸ್ಪರ್ಧಿಸಿದ್ದಾರೆ. ಉಳಿದ ಬಹುತೇಕ ಕ್ಷೇತ್ರಗಳಲ್ಲಿ ಸ್ಪರ್ಧಿಗಳ ಸಂಖ್ಯೆ ೧೦ನ್ನು ಮೀರಿದೆ. ಈ ಬಾರಿ ಒಟ್ಟು ೪,೩೬,೧೪,೧೯೫ ಮತದಾರರಿದ್ದು ಅವರಿಗೆ ೫೮೩೭ ನಾಮಪತ್ರಗಳ ಸಲ್ಲಿಕೆಯಾಗಿ, ಈಗ ಕಣದಲ್ಲಿ ೩೦೦೦ಕ್ಕೂ ಹೆಚ್ಚಿನ ಅಭ್ಯರ್ಥಿಗಳಿದ್ದಾರೆ. ಇಂಥ ಚುನಾವಣೆಯಲ್ಲಿ ಹೆಚ್ಚು ಮತ ಪಡೆದ ಅಭ್ಯರ್ಥಿ ನಮ್ಮನ್ನಾಳುವ ನಾಯಕನಾಗುತ್ತಾನೆ. ವಾಸ್ತವವಾಗಿ ಅವನು ಬಹುಮತ ಪಡೆಯದೇ, ಬಹುಮತದ ವಿರೋಧ ಹೊಂದಿರುತ್ತಾನೆ.

ಈಗಿರುವ ಚುನಾವಣಾ ಪದ್ಧತಿಯಲ್ಲಿ ಹೆಚ್ಚು ಮತ ಪಡೆದು ಕಡಿಮೆ ಸ್ಥಾನ, ಕಡಿಮೆ ಮತ ಪಡೆದು ಹೆಚ್ಚು ಸ್ಥಾನ ಹೊಂದುವ ಸಾಧ್ಯತೆ ಇದೆ. ಕಳೆದ ಬಾರಿ ಕರ್ನಾಟಕ ವಿಧಾನಸಭೆಯ ಉದಾಹರಣೆಯನ್ನೇ ತೆಗೆದುಕೊಂಡರೆ ಬಿಜೆಪಿ ಶೇಕಡ ೩೪ರಷ್ಟು ಮತಪಡೆದು ೧೧೦ ಸ್ಥಾನ ಗಳಿಸಿತ್ತು. ಆದರೆ ಕಾಂಗ್ರೆಸ್ ಶೇಕಡ ೩೫ರಷ್ಟು ಮತ ಪಡೆದು ೮೦ ಸ್ಥಾನಗಳಲ್ಲಿ ಆಯ್ಕೆಯಾಗಿ ಅಧಿಕಾರದಿಂದ ದೂರವಾಯಿತು. ಜೆ.ಡಿ.ಎಸ್. ಶೇಕಡ ೧೯ರಷ್ಟು ಮತಪಡೆದು ೨೮ ಸ್ಥಾನ ಪಡೆದಿತ್ತು. ಈ ವ್ಯವಸ್ಥೆಯಲ್ಲಿ ಮತ ಗಳಿಕೆಗೂ, ಪಡೆಯುವ ಸ್ಥಾನಕ್ಕೂ ಯಾವುದೇ ಸಂಬಂಧವಿಲ್ಲ. ಒಟ್ಟು ಮತಗಳಲ್ಲಿ ಮತದಾನವಾಗಿದ್ದೇ ಕಡಿಮೆ. ಅದರಲ್ಲೇ ಕಡಿಮೆ ಮತ ಪಡೆದವರು ಅಧಿಕಾರದ ಚುಕ್ಕಾಣಿ ಹಿಡಿಯುತ್ತಾರೆ. ಇಂಥ ಚುನಾವಣಾ ವ್ಯವಸ್ಥೆ ೧೯೬೦ರಿಂದಲೇ ಟೀಕೆಗೆ ಒಳಗಾಗಿದೆ. ಈ ಚುನಾವಣಾ ಪದ್ಧತಿಯನ್ನು ಬದಲಾಯಿಸಬೇಕು ಅಥವಾ ಸುಧಾರಿಸಬೇಕು ಎಂಬ ಅಭಿಪ್ರಾಯಗಳು ಕೇಳಿಬಂದಿವೆ. ಇದನ್ನು ಸರಕಾರವು, ಗಂಭೀರವಾಗಿ ಪರಿಗಣಿಸದೇ ಇರಲು ಸಾಧ್ಯವಾಗಿಲ್ಲ. ಅದಕ್ಕಾಗಿ ೧೯೯೦ರಿಂದಲೇ ಅಧಿಕೃತ ಚಾಲನೆ ದೊರೆತಿದೆ. ೧೯೯೦ರಲ್ಲಿ ಗೋಸ್ವಾಮಿ ಸಮಿತಿ, ೧೯೯೩ರ ವೋಹ್ರಾ ಸಮಿತಿ, ೧೯೯೮ರ ಇಂದ್ರಜಿತ ಗುಪ್ತಾ ಸಮಿತಿ ಹೀಗೆ ಹಲವಾರು ಸಮಿತಿಗಳು, ೨೦೦೮ರವರೆಗೆ ಹಲವಾರು ಆಯೋಗಗಳು ಈ ಚುನಾವಣಾ ಪದ್ಧತಿಯ ಸುಧಾರಣೆಗೆ, ಬದಲಾವಣೆಗೆ ಹಲವಾರು ಸಲಹೆ ಸೂಚನೆ ಕೊಟ್ಟಿವೆ. ಈ ಚರ್ಚೆ ಸಂವಿಧಾನ ರಚನಾ ಸಮಿತಿಯ ಮಧ್ಯೆ ಆಗಲೇ ನಡೆದಿದೆ. ಒಟ್ಟಿನಲ್ಲಿ ಈ ಚುನಾವಣಾ ಪದ್ಧತಿ ತನ್ನ ಪ್ರಸ್ತುತತೆಯನ್ನು ಕಳೆದುಕೊಳ್ಳುತ್ತಿದೆ.

ಈ ಚುನಾವಣಾ ಪದ್ಧತಿಯ ವಿಮರ್ಶೆ ಏನೇ ಇದ್ದರೂ ನಮ್ಮ ದೇಶದ ರಾಜಕೀಯ ಪಕ್ಷಗಳು ಈ ಚುನಾವಣಾ ಪದ್ಧತಿಯ ದುರುಪಯೋಗಪಡೆದುಕೊಳ್ಳುತ್ತಿವೆ. ಈಗಿರುವ ವ್ಯವಸ್ಥೆಯಲ್ಲಿ ಚುನಾವಣಾ ಆಯೋಗ ಎಷ್ಟೇ ಕಟ್ಟುನಿಟ್ಟಿನ ಕ್ರಮಗಳನ್ನು ಅನುಸರಿಸಿದರೂ ನಮ್ಮ ರಾಜಕೀಯ ಪಕ್ಷಗಳು ತಮ್ಮ ನೀತಿರಹಿತ ರಾಜಕಾರಣವನ್ನು ಅನ್ಯಮಾರ್ಗಗಳ ಮೂಲಕ ಜಾರಿಗೆ ತಂದಿವೆ. ಇಂದು ನೀತಿರಹಿತ ರಾಜಕಾರಣ ತಾಂಡವವಾಡುತ್ತಿದೆ. ಎಷ್ಟೇ ರಾಜಕೀಯ ಪಕ್ಷಗಳಿದ್ದರೂ ಎಡ ಪಕ್ಷಗಳನ್ನು ಹೊರತುಪಡಿಸಿ ಉಳಿದ ರಾಜಕೀಯ ಪಕ್ಷಗಳಲ್ಲಿ ಯಾವುದೇ ಭಿನ್ನತೆಯಿಲ್ಲ. ಕರ್ನಾಟಕದ ಇಂದಿನ ಚುನಾವಣೆಯನ್ನೇ ಗಮನಿಸಿದರೆ ಇಲ್ಲಿನ ರಾಜಕೀಯ ಪಕ್ಷಗಳು ಹೆಸರು ಮತ್ತು ಚಿಹ್ನೆಯಲ್ಲಿ ಮಾತ್ರ ಭಿನ್ನ ಎಂಬ ಸತ್ಯ ಗೋಚರವಾಗುತ್ತದೆ. ನಿನ್ನೆಯವರೆಗೆ ಒಂದು ಪಕ್ಷದಲ್ಲಿದ್ದು ಆ ಪಕ್ಷವನ್ನು ಹಾಡಿಹೊಗಳುತ್ತಿದ್ದ ವ್ಯಕ್ತಿ ಮಾರನೇ ದಿನವೇ ಮತ್ತೊಂದು ಪಕ್ಷದಲ್ಲಿ ಸೇರಿ ಆ ಪಕ್ಷದ ನೀತಿ, ನಾಯಕರ ಗುಣಗಳನ್ನು ಹೊಗಳುತ್ತಿರುತ್ತಾನೆ. ಯಾವ ವ್ಯಕ್ತಿ ಯಾವ ಪಕ್ಷದಲ್ಲಿದ್ದಾನೆ ಎಂಬುದೇ ತಿಳಿಯದ ವಾತಾವರಣ ಉಂಟಾಗಿದೆ. ವಾಸ್ತವದಲ್ಲಿ ಇವೆಲ್ಲ ಒಂದೇ ನೀತಿಯನ್ನು ಹೊಂದಿದ ವಿವಿಧ ಪಕ್ಷಗಳು. ನಮ್ಮ ಮಾಧ್ಯಮಗಳು ಸಹಿತ ನೀತಿ ಆಧಾರದ ವಿಮರ್ಶೆ, ಚರ್ಚೆ ನಡೆಸದೆ ವ್ಯಕ್ತಿಗತ, ಜಾತಿಮೂಲ, ಧನಬಲಗಳ ಆಧಾರದ ಮೇಲೆಯೇ ತಮ್ಮ ವಿಶ್ಲೇಷಣೆಯನ್ನು ಕೊಡುತ್ತಿವೆ.

ಇಂದು ಸಾಮಾನ್ಯ ಪ್ರಜೆ ನೀತಿ. ಮೌಲ್ಯಗಳನ್ನು ಪ್ರತಿಪಾದಿಸಿ ಚುನಾವಣೆಗೆ ಸ್ಪರ್ಧಿಸುವ ವಾತಾವರಣವಿಲ್ಲ. ಚುನಾವಣಾ

ಆಯೋಗವೇ ಚುನಾವಣಾ ಖರ್ಚಿಗೆ ೧೬ ಲಕ್ಷ ರೂಪಾಯಿಗಳ ಮಿತಿಯನ್ನು ನಿಗದಿಪಡಿಸಿದೆ. ಇದು ನಮ್ಮ ಚುನಾವಣಾ ವ್ಯವಸ್ಥೆ ಸಾಗುತ್ತಿರುವ ಮಾರ್ಗವನ್ನು ಸೂಚಿಸುತ್ತದೆ. ಇದರ ಪರಿಣಾಮವಾಗಿ ಅಕ್ರಮ ಸಂಪತ್ತು ಹೊಂದಿರುವ ಜನ ಅನೈತಿಕ ರಾಜಕಾರಣವನ್ನು ರಾಜ ಮಾರ್ಗದ ಮೂಲಕವೇ ಮಾಡುತ್ತಿದ್ದಾರೆ. ಧನಬಲವೇ ಚುನಾವಣೆಯ ಅರ್ಹತೆಯಾದರೆ ಮುಂದೆ ಈಗ ನಡೆಯುತ್ತಿರುವ ಐಪಿಎಲ್ ಕ್ರಿಕೆಟ್ ಪಂದ್ಯಾವಳಿಯಂತೆ, ಮುಂದೊಂದು ದಿನ ಶ್ರೀಮಂತ ಕಂಪನಿಗಳು ಒಂದೊಂದು ಪಕ್ಷದ, ಪ್ರದೇಶದ ಪ್ರಾಯೋಜಕತೆಯನ್ನು ಪಡೆದು ಈ ದೇಶದ ಪ್ರಜಾಪ್ರತಿನಿಧಿ ವೇದಿಕೆಗಳನ್ನು ತಮ್ಮ ಪರವಾಗಿ ಕೆಲಸ ಮಾಡುವಂತೆ ಮಾಡುತ್ತಾರೆ. ಹಿಂದಿನ ಸೆನೆಟರ್ ಪದ್ಧತಿಯಂತೆ ಈಗಾಗಲೇ ಪರೋಕ್ಷವಾಗಿ ಅಂಥ ಚಟುವಟಿಕೆಗಳು ನಡೆದಿವೆ. ಉದ್ಯಮಪತಿಗಳು ದೇಣಿಗೆ ಹೆಸರಿನಲ್ಲಿ ವಿವಿಧ ರಾಜಕೀಯ ಪಕ್ಷಗಳಿಗೆ ದೇಣಿಗೆ ಕೊಟ್ಟು ತಮ್ಮ ಪರವಾಗಿ ಕೆಲಸ ಮಾಡುವಂತೆ ರಾಜಕೀಯ ಪಕ್ಷಗಳನ್ನು ನಿಯಂತ್ರಿಸುತ್ತಿದ್ದಾರೆ. ನಮ್ಮ ದೇಶದ ವಿವಿಧ ರಾಜಕೀಯ ಪಕ್ಷಗಳು ವಿವಿಧ ಉದ್ಯಮಿಗಳಿಂದ ಪಡೆದ ದೇಣಿಗೆಯ ಪಟ್ಟಿ ಹೊರಬಿದ್ದಿದೆ. ಅದರ ಪ್ರಕಾರ ಭಾರತ ಕಮ್ಯುನಿಸ್ಟ್ ಪಕ್ಷವನ್ನು ಹೊರತುಪಡಿಸಿ ದೇಶದ ಬಹುತೇಕ ರಾಜಕೀಯ ಪಕ್ಷಗಳು ವಿವಿಧ ಉದ್ಯಮಿಗಳಿಂದ, ಕಂಪನಿಗಳಿಂದ ಕೋಟಿ ಕೋಟಿ ಹಣ ದೇಣಿಗೆ ರೂಪದಲ್ಲಿ ಪಡೆದಿದ್ದಾರೆ. ಉದ್ಯಮಿಗಳಿಂದ ದೊಡ್ಡ ಮೊತ್ತದ ಹಣ ಪಡೆದು ಚುನಾವಣೆಯಲ್ಲಿ ಪ್ರಜೆಗಳಿಂದ ಆಯ್ಕೆಯಾಗಿ ಆಡಳಿತ ಹಾಗೂ ವಿರೋಧ ಪಕ್ಷಗಳಾಗಿ ಬರುವವರು ಓಟು ಕೊಟ್ಟ ಪ್ರಜೆಗಳ ಪರವಾಗಿರದೇ ನೋಟು ಕೊಟ್ಟ ಉದ್ಯಮಿಗಳ ಪರವಾಗಿರುತ್ತಾರೆ. ಕೇಂದ್ರ, ರಾಜ್ಯ ಸರಕಾರಗಳ ಇಂದಿನ ನೀತಿಗಳನ್ನು ಗಮನಿಸಿದರೆ ಇದು ಈಗಾಗಲೇ ನಡೆಯುತ್ತಿದೆ. ರಾಜಕೀಯ ಪಕ್ಷಗಳಿಗೆ ದೇಣಿಗೆ ಕೊಡುವ ಉದ್ಯಮಿಗಳೂ ಈ ಚುನಾವಣಾ ವ್ಯವಸ್ಥೆ ಸರಿಯಿಲ್ಲ ಎಂದು ಹೇಳುತ್ತಿದ್ದಾರೆ. ಅವರು ಈ ಚುನಾವಣಾ ಪದ್ಧತಿಗೆ ಸೂಚಿಸುವ ಬದಲಾವಣೆ ಎಂದರೆ ದ್ವಿಪಕ್ಷೀಯ ಪದ್ಧತಿ. ದೇಶದಲ್ಲಿರುವ ಬಹುಸಂಖ್ಯೆಯ ರಾಜಕೀಯ, ಪ್ರಾದೇಶಿಕ ಪಕ್ಷಗಳ ಬದಲಾಗಿ ಎರಡೇ ಪಕ್ಷಗಳಿದ್ದರೆ ಉದ್ಯಮಿಗಳಿಗೆ, ಈ ಪ್ರಭುತ್ವಗಳನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳಬಯಸುವವರಿಗೆ ಹೆಚ್ಚು ಅನುಕೂಲ. ಅದಕ್ಕಾಗಿ ಅವರೂ ಪ್ರಸ್ತುತ ಚುನಾವಣಾ ಪದ್ಧತಿಗೆ ವಿರುದ್ಧವಾಗಿದ್ದಾರೆ. ಆದರೆ ದೇಶದ ರಾಜಕೀಯ ವ್ಯವಸ್ಥೆ ಅವರಿಗೆ ಪ್ರತಿಕೂಲವಾಗಿದೆ. ಇಂದು ದೇಶದಲ್ಲಿ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಭಾವ ಹೊಂದಿದ ಯಾವುದೇ ರಾಜಕೀಯ ಪಕ್ಷವಿಲ್ಲ. ವಿವಿಧ ಭಾಷೆ, ಸಂಸ್ಕೃತಿ, ಪ್ರಾದೇಶಿಕ ವೈವಿಧ್ಯತೆಗಳನ್ನು ಹೊಂದಿದ ನಮ್ಮ ದೇಶ ರಾಜಕೀಯ ಏಕಸ್ವಾಮ್ಯತೆಯನ್ನು ಎಂದೋ ಮುರಿದುಹಾಕಿದೆ. ಈ ರಾಜಕೀಯ ಏಕಸ್ವಾಮ್ಯತೆ ಭಾರತದಂಥ ಒಕ್ಕೂಟ ವ್ಯವಸ್ಥೆಗೆ ಆರೋಗ್ಯಪೂರ್ಣವಾದುದಲ್ಲ. ಅದು ದೇಶದ ಆಡಳಿತ ವ್ಯವಸ್ಥೆಗೂ, ಸಮಗ್ರತೆಗೂ ಅಪಾಯಕಾರಿ. ಸ್ವಾತಂತ್ರ್ಯಾನಂತರ ರಾಜಕೀಯ ಏಕಸ್ವಾಮ್ಯತೆಯನ್ನು ಕಾಂಗ್ರೆಸ್ ಪಕ್ಷ ಕೆಲವು ವರ್ಷ ಪಡೆದಿತ್ತು. ಅದಕ್ಕೆ ಐತಿಹಾಸಿಕವಾದ ಕಾರಣಗಳಿವೆ. ೭೦ರ ದಶಕದ ಕೊನೆಗೆ ಈ ಏಕಸ್ವಾಮ್ಯತೆ ತಪ್ಪಿ ನಿಜವಾದ ಒಕ್ಕೂಟ ವ್ಯವಸ್ಥೆಯ ಮಾದರಿಯಲ್ಲಿ ವಿವಿಧ ರಾಜಕೀಯ ಪಕ್ಷಗಳ ಮೈತ್ರಿಕೂಟಗಳು ಇಂದು ಅಧಿಕಾರಕ್ಕೆ ಬರುತ್ತಿವೆ. ಇಂಥ ಏಕಸ್ವಾಮ್ಯವನ್ನು ಮೊದಲಬಾರಿಗೆ ಮುರಿದದ್ದು ೧೯೫೭ರಲ್ಲಿ, ಅಂದರೆ ನಮ್ಮ ಪ್ರಜಾಸತ್ತೆಯ ಆರಂಭಿಕ ವರ್ಷಗಳಲ್ಲಿ, ಭಾರತ ಕಮ್ಯುನಿಸ್ಟ್ ಪಕ್ಷ ಕೇರಳ ರಾಜ್ಯದಲ್ಲಿ ಚುನಾವಣೆಯಲ್ಲಿ ಬಹುಮತ ಪಡೆದು ಆಯ್ಕೆ ಆದಾಗ. ಅದನ್ನು ಸಹಿಸದ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆಸ್ ಕೇರಳ ವಿಧಾನಸಭೆಯನ್ನೇ ವಿಸರ್ಜನೆಗೊಳಿಸಿತ್ತು. ಇಂದು ದೇಶದ ಒಕ್ಕೂಟ ವ್ಯವಸ್ಥೆಗೆ ಪೂರಕವಾಗಿ ಒಕ್ಕೂಟ ರಾಜಕಾರಣ ಜಾರಿಯಲ್ಲಿದೆ. ಜನಪರವಾದ ಒಕ್ಕೂಟವನ್ನು ಆಯ್ಕೆ ಮಾಡಬೇಕಾದ್ದು ಜನರ ಜವಾಬ್ದಾರಿ. ಇದನ್ನು ಸಹಿಸದ ದೇಶೀ, ವಿದೇಶಿ ಉದ್ಯಮ ಸಂಸ್ಥೆಗಳು ದ್ವಿಪಕ್ಷೀಯ ರಾಜಕೀಯ ವ್ಯವಸ್ಥೆಯನ್ನು ಜಾರಿಗೆ ತರಲು ಆಸಕ್ತಿ ಹೊಂದಿದ್ದಾರೆ. ಇದು ಅಮೆರಿಕ ಮಾದರಿ. ಜಾಗತೀಕರಣದ ನಂತರ ಎಲ್ಲ ಕ್ಷೇತ್ರದಲ್ಲಿಯೂ ಅಮೆರಿಕ ಮಾದರಿ ಬರುತ್ತಿರುವಾಗ ಚುನಾವಣಾ ವ್ಯವಸ್ಥೆಯಲ್ಲಿಯೂ ಅಂಥದೇ ಮಾದರಿಯನ್ನು ತರುವುದು, ತನ್ಮೂಲಕ ಎರಡೂ ಪಕ್ಷಗಳನ್ನು ನಿಯಂತ್ರಿಸುವುದರ ಮೂಲಕ ದೇಶದ ಆಡಳಿತವನ್ನೇ ನಿಯಂತ್ರಿಸುವ ಹುನ್ನಾರ ಇದರ ಹಿಂದಿದೆ.

ಈ ಚುನಾವಣಾ ವ್ಯವಸ್ಥೆ ಬದಲಾಗಬೇಕು. ಆದರೆ ಅದು ನಮ್ಮ ದೇಶದ, ಜನತೆಯ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಆಗಬೇಕೇ ಹೊರತು ಅನ್ಯ ಶಕ್ತಿಗಳ ಹಿತಾಸಕ್ತಿಗಲ್ಲ. ಈಗಾಗಲೇ ಚುನಾವಣಾ ಸುಧಾರಣೆಗಾಗಿ ರಚಿಸಲಾದ ಸಮಿತಿಗಳು, ಆಯೋಗಗಳು ಹಲವಾರು ಸಲಹೆಗಳನ್ನು ಕೊಟ್ಟಿವೆ. ಅದರಲ್ಲಿ ಅನುಪಾತ ಮಾದರಿ, ಪ್ರಮಾಣಾನುಸಾರ ಪ್ರಾತಿನಿಧ್ಯ ಅಂದರೆ ಪಕ್ಷಗಳು ಪಡೆದ ಒಟ್ಟು ಮತದ ಸಂಖ್ಯೆಗನುಗುಣವಾಗಿ ಸ್ಥಾನಗಳ ಹಂಚಿಕೆ ಇಂಥ ಹಲವಾರು ಪರ್ಯಾಯ ಪದ್ಧತಿಯ ಚಿಂತನೆಗಳು ನಡೆದಿವೆ. ಈ ಕುರಿತು ಕೇಂದ್ರ ಸರಕಾರ ಸಾರ್ವಜನಿಕ ಚರ್ಚೆ, ತಜ್ಞರ ಸಲಹೆ, ವರದಿಗಳ ಅಧ್ಯಯನವನ್ನಾಧರಿಸಿ ಪ್ರಸ್ತುತ ಚುನಾವಣಾ ವ್ಯವಸ್ಥೆಗೆ ಸುಧಾರಣೆ ಇಲ್ಲ ಬದಲಾವಣೆ ತಂದು ನಿಜವಾದ ಪ್ರಜಾಪ್ರತಿನಿಧಿ ವ್ಯವಸ್ಥೆ ಜಾರಿಗೆ ಬರುವಂತೆ ಮಾಡಬೇಕು. ಇದರಲ್ಲಿ ಜನತೆ ಪ್ರಮುಖಪಾತ್ರ ವಹಿಸಬೇಕು.

ಸಿದ್ದನಗೌಡ ಪಾಟೀಲ

## ನಮ್ಮ ಮುಂದಿನ ಪ್ರಧಾನಿ ಯಾರು ?

ಈ ವಿಷಯ ಈಗ ಅಪ್ರಸ್ತುತ ಎನಿಸಿದರೂ ಕೆಲ ತಿಂಗಳಿಂದ ಕೆಲವು ವಲಯಗಳು ಗಂಭೀರವಾಗಿ ಚರ್ಚೆ ಪ್ರಾರಂಭಿಸಿವೆ. ಇಲೆಕ್ಟ್ರಾನಿಕ್ ಮಾಧ್ಯಮಗಳಲ್ಲಿಯಂತೂ ಒಣ ಚರ್ಚೆಗೆ ಇದು ಬಹು ದೊಡ್ಡ ಗ್ರಾಸ. ಉದ್ದಿಮೆದಾರರ ಒಂದು ಬಣ ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿಯನ್ನು ಎತ್ತಿಕಟ್ಟಲು ದೊಡ್ಡ ಲಾಬಿಯನ್ನೇ ಸೃಷ್ಟಿಸಲು ಹೊರಟಿದೆ. ತಮ್ಮ ಹಿಡಿತದಲ್ಲಿರುವ ಮಾಧ್ಯಮಗಳನ್ನು, ಸಂಸ್ಥೆಗಳನ್ನು ಉಪಯೋಗಿಸಿಕೊಂಡು ಭಾರೀ ಪ್ರಚಾರವನ್ನೂ ನಡೆಸುತ್ತಿವೆ. ದೇಶ ಎದುರಿಸುತ್ತಿರುವ ಎಲ್ಲ ಸಮಸ್ಯೆಗಳನ್ನು, ಸವಾಲುಗಳನ್ನು ಎದುರಿಸುವ ಸಾಮರ್ಥ್ಯ ಇರುವುದು ಮೋದಿ ಒಬ್ಬನಿಗೇ ಎಂದು ಅಭಿಪ್ರಾಯ ಉಂಟುಮಾಡಲು ಪ್ರಯತ್ನ ಮಾಡಲಾಗುತ್ತಿದೆ. ಮೋದಿ ಎಂದರೆ ದಕ್ಷ ಆಡಳಿತ ಖಚಿತ ಎಂದು ಬಿಂಬಿಸಲು ಪ್ರಯತ್ನ ನಡೆದಿದೆ. ಇದರ ಹಿಂದೆ ಈ ದೇಶದ ದಿಢೀರ್ ಶ್ರೀಮಂತರ, ಬಂಡವಾಳಗಾರರ ಷಡ್ಯಂತ್ರ ಇದೆ.

ಸ್ವಾತಂತ್ರ್ಯಾನಂತರ ಆರು ದಶಕಗಳಲ್ಲಿ ಈ ದೇಶದಲ್ಲಿ ಒಂದೇ ಪಕ್ಷದ ಆಡಳಿತ ಅಂತ್ಯಗೊಂಡು ಸಮ್ಮಿಶ್ರ ಸರಕಾರಗಳ ಕಾಲ ಬಂದಿರುವುದನ್ನು ಕಂಡಿದ್ದೇವೆ. ಕಾಂಗ್ರೆಸ್ ಮತ್ತು ಭಾಜಪ ನೇತೃತ್ವದಲ್ಲಿರುವ ಎರಡು ಗುಂಪುಗಳು ಪ್ರಬಲಗೊಂಡು ಅಸ್ತಿತ್ವಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಲ್ಮುಡಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಬಂದಿರುವುದು ಖಂಡಿತ ಒಳ್ಳೆಯ ಬೆಳವಣಿಗೆಯಲ್ಲ. ಇದರಿಂದಾಗಿ ಜನಸಾಮಾನ್ಯರಿಗೆ ಆಯ್ಕೆಯೇ ಇಲ್ಲ ಎನಿಸುತ್ತಿದೆ. ಎಡಪಕ್ಷಗಳ ನೇತೃತ್ವದಲ್ಲಿ ಮೂರನೇ ರಂಗದ ಸ್ಥಾಪನೆ ಇನ್ನೂ ಬಿಸಿಲ್ಗುದುರೆ. ಇಂಥ ಪರಿಸ್ಥಿತಿ ಒದಗಿಬಂದಿರುವುದು ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯ ದುರಂತವೇ ಸರಿ. ಕಾಂಗ್ರೆಸ್ ಮತ್ತು ಭಾಜಪಗಳ ಮಧ್ಯೆ ರೀತಿ-ನೀತಿಗಳ ವಿಚಾರದಲ್ಲಿ ವ್ಯತ್ಯಾಸ ಕಡಿಮೆ. ಭಾಜಪ ಹಿಂದುತ್ವ ಸಿದ್ಧಾಂತದ ಪ್ರತಿಪಾದಕ ಎನ್ನುವುದನ್ನು ಬಿಟ್ಟರೆ ಉಳಿದಂತೆ ಬಂಡವಾಳಗಾರರ, ಶ್ರೀಮಂತರ ಹಿತರಕ್ಷಣೆ ಕಾಪಾಡುವ ಧೋರಣೆಯನ್ನೇ ಹೊಂದಿದೆ. ಕಾಂಗ್ರೆಸ್ಸಿನ ಜಾತ್ಯತೀತತೆ ಕೂಡ ಒಂದು ಮುಖವಾಡ ಅಷ್ಟೆ. ಜನಪರ ಧೋರಣೆಗಿಂತ ಬಂಡವಾಳಶಾಹಿ ವ್ಯವಸ್ಥೆಯನ್ನು ಬಲಪಡಿಸುವುದೇ ಅದರ ಗುರಿ. ಪರಿಸ್ಥಿತಿ ಹೀಗಿರುವಾಗ ಯಾವ ಗುಂಪೇ ಅಧಿಕಾರಕ್ಕೆ ಬಂದರೂ ಜನರ ಸಂಕಷ್ಟಗಳಿಗೆ ಪರಿಹಾರವಂತೂ ದೂರ. ಈ ಹಿನ್ನೆಲೆಯಲ್ಲಿ ಪರಿಸ್ಥಿತಿಯನ್ನು ಅವಲೋಕಿಸಿದರೆ ಮುಂದಿನ ವರ್ಷ (೧೯೧೪)ದ ಪ್ರಾರಂಭದಲ್ಲಿ ಬರುವ ಲೋಕಸಭಾ ಚುನಾವಣೆ ಕೇವಲ ಔಪಚಾರಿಕವಾದೀತು. ಹಾಗೆಂದು ನಿರಾಶೆಪಡುವ ಅಗತ್ಯವಿಲ್ಲ. ಮನಸ್ಸು ಮಾಡಿದರೆ ಜನತೆ ಎರಡೂ ಪಕ್ಷಗಳನ್ನು ಎದುರಿಸಿ ಹೋರಾಡುವ ಸಾಮರ್ಥ್ಯವಿರುವ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅವಕಾಶವಿದೆ. ಅಂಥ ಒಂದು ವಿರೋಧದ ಅಗತ್ಯವೂ ಇದೆ. ಪ್ರಜಾಪ್ರಭುತ್ವದ ಭವಿಷ್ಯದಲ್ಲಿ ಆಸಕ್ತಿ ಹೊಂದಿರುವ ಎಲ್ಲ ಜನಪರರ ಅಪೇಕ್ಷೆ ಕೂಡ ಅದೇ.

ಇನ್ನು ಮೋದಿಪರ ಲಾಬಿಯನ್ನು ನೋಡೋಣ. ಮೂರನೇ ಬಾರಿಗೆ ಜಯ ಗಳಿಸಿರುವ ಮುಖ್ಯಮಂತ್ರಿ ನರೇಂದ್ರ ಮೋದಿ ಭಾಜಪದ ನಾಯಕ. ಗುಜರಾತ್‌ನಲ್ಲಿ ೨೦೦೨ರಲ್ಲಿ ನಡೆದ ಅಲ್ಪಸಂಖ್ಯಾತರ ಹತ್ಯಾಕಾಂಡದ ಪ್ರಮುಖ ರೂವಾರಿ ಮೋದಿ. ನಮ್ಮ ದೇಶದ ಕಾನೂನು ವ್ಯವಸ್ಥೆ ಗೋಜಲಾಗಿಲ್ಲದೇ ಹೋಗಿದ್ದಲ್ಲಿ ಮೋದಿ ಎಂದೋ ಕಂಬಿ ಎಣಿಸುತ್ತಿದ್ದ. ಬಾಬ್ರಿ ಮಸೀದಿ ಪ್ರಕರಣದ ಮೊಕದ್ದಮೆ ಆಪಾದಿತರೆಲ್ಲ ಹಾಯಾಗಿರುವಂತೆಯೇ ಮೋದಿ ಕೂಡ ಆರಾಮ. ಗುಜರಾತ್ ಮೊದಲಿನಿಂದಲೂ ಹಿಂದುಳಿದ ಪ್ರದೇಶವೇನಲ್ಲ. ಮುಂಬಯಿ ಪ್ರಾಂತದ ಭಾಗವಾಗಿದ್ದಾಗಲೇ ಗುಜರಾತ್ ಸಾಕಷ್ಟು ಕೈಗಾರಿಕೆಯಲ್ಲಿ ಮುಂದುವರಿದಿತ್ತು. ಮತ್ತೆ ಪಂಜಾಬಿನಂತೆ ಗುಜರಾತಿನ ಮಧ್ಯಮ ವರ್ಗದವರೂ ಪ್ರಬಲರಾಗಿ ವ್ಯಾಪಾರೋದ್ಯಮಗಳಲ್ಲಿ ಮುಂದಿದ್ದವರು. ಮೂಲತಃ ವ್ಯಾಪಾರಿ ವರ್ಗವಾಗಿರುವ ಇವರು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಒಂದು ಮಟ್ಟದಲ್ಲಿ ಪ್ರಾಬಲ್ಯ ಗಳಿಸಿಕೊಂಡಿದ್ದಾರೆ. ಇದರಲ್ಲಿ ಮೋದಿ ಪಾತ್ರ ದೊಡ್ಡದೇನಿಲ್ಲ. ಅಂಥ ದೊಡ್ಡ ಉದ್ಯಮಗಳು ಮೋದಿ ಅಧಿಕಾರಾವಧಿಯಲ್ಲಿ ಬಂದದ್ದಿಲ್ಲ. ಇದ್ದದ್ದು ನಡೆದುಕೊಂಡು ಹೋಗುತ್ತಿದೆ. ಹಾಗಾಗಿ ದಕ್ಷ ಆಡಳಿತಗಾರ ಎನ್ನುವುದು ಪ್ರಚಾರಕ್ಕೆ ಮಾತ್ರವೇ ಸೀಮಿತ. ಈತ ಒಬ್ಬ ಭಾಷಣಕಾರ. ಕಿಚ್ಚೆಬ್ಬಿಸುವ ಸಾಮರ್ಥ್ಯ ಉಳ್ಳವನು. ಇಂಗ್ಲಿಷಿನಲ್ಲಿ 'ಡೆಮಗಾಗ್' ಎಂದು ಇಂಥವರನ್ನೂ ಬಣ್ಣಿಸುತ್ತಾರೆ. ಅದೇ ಬಂಡವಾಳ. ಇನ್ನು ಗುಜರಾತಿನಲ್ಲಿ ಮೋದಿ ಪಡೆದಿರುವ ಮತಗಳನ್ನು ನೋಡಿದರೆ ಕಳೆದ ಚುನಾವಣೆಗಳಿಗಿಂತ ಈ ಬಾರಿ (೨೦೧೨) ಕಮ್ಮಿಯಾಗಿದೆ. ೨೦೦೭ರಲ್ಲಿ ಶೇ. ೪೯.೧ ಮತ ಪಡೆದಿದ್ದ ಭಾಜಪ, ೨೦೧೨ರಲ್ಲಿ ಪಡೆದಿರುವುದು ಶೇ. ೪೭.೯. ಶ್ರೀಮಂತರನ್ನು ಓಲೈಸುವ ಮೋದಿ ಜನಪರ ಧೋರಣೆ ಅನುಸರಿಸಿರುವುದು ಕಡಿಮೆ. ಕಡುಬಡತನದಲ್ಲಿ ಇರುವ ಜನರ ಸಂಖ್ಯೆ ಗುಜರಾತಿನಲ್ಲಿ ಕಮ್ಮಿ ಏನಿಲ್ಲ. ಒಬ್ಬ ಮುಖ್ಯಮಂತ್ರಿ ಮೂರು ಬಾರಿ ಗೆದ್ದ ಎಂದರೆ ಅದು ಪ್ರಧಾನಿ ಪಟ್ಟಕ್ಕೆ ಅರ್ಹತೆ ಎಂದೇನಲ್ಲ. ಆದರೂ ಕೆಲವು ಹಿತಾಸಕ್ತಿಗಳು ಮೋದಿಯನ್ನು ಪ್ರಧಾನಿ ಅಭ್ಯರ್ಥಿಯಾಗಿ ಬಿಂಬಿಸಲು ಹೊರಟಿವೆ.

ಈತ ಪ್ರತಿನಿಧಿಸುತ್ತಿರುವ ಭಾರತೀಯ ಜನತಾಪಕ್ಷದಲ್ಲೇ ಮೋದಿಯ ಭವಿಷ್ಯದ ಬಗ್ಗೆ ಒಮ್ಮತವಿಲ್ಲ. ೨೦೦೨ರ ಹತ್ಯಾಕಾಂಡದ ಕಳಂಕಧಾರಿ ನರೇಂದ್ರ ಮೋದಿ ಒಂದು ಬಗೆಯಲ್ಲಿ ಭಾಜಪಕ್ಕೆ ಲಯಬಿಲಿಟಿ. ಇದಲ್ಲದೆ ಪಕ್ಷದಲ್ಲಿ ಪ್ರಧಾನಿ ಅಭ್ಯರ್ಥಿಗಳಿಗೆ, ಆಕಾಂಕ್ಷೆಗಳಿಗೆ ಕಡಿಮೆ ಏನಿಲ್ಲ. ಮಾತೃ ಸಂಸ್ಥೆ ಆರೆಸ್ಸೆಸ್ಸಿನಲ್ಲಿಯೇ ಮೋದಿ ಬಗ್ಗೆ ಏಕಾಭಿಪ್ರಾಯ ಇಲ್ಲವಾಗಿದೆ. ಆತನ ಸರ್ವಾಧಿಕಾರಿ ನಡವಳಿಕೆ ಗಾಬರಿ ಉಂಟುಮಾಡಿದೆ. ಗುಜರಾತಿನಲ್ಲಿ ಪಕ್ಷದಲ್ಲಿ ತನ್ನ ಎದುರಾಳಿಗಳನ್ನೆಲ್ಲ ಮಟ್ಟ ಹಾಕಿರುವ ಮೋದಿ ರಾಷ್ಟ್ರ ರಾಜಕಾರಣದಲ್ಲಿ ಕೂಡ ಹಾಗೇ ನಡೆದುಕೊಳ್ಳುವ ಭೀತಿ ಇದೆ. ಅಲ್ಲದೆ ಹಲವು ವರ್ಷಗಳಿಂದ ಪ್ರಧಾನಿ ಪಟ್ಟದ ಕನಸು ಕಾಣುತ್ತಿರುವ ಲಾಲಕೃಷ್ಣ ಅದ್ವಾನಿ ಪಾಡೇನು? ಇನ್ನು ಅರುಣ್ ಜೇಟ್ಲಿ, ವಿರೋಧ ಪಕ್ಷದ ನಾಯಕಿ ಸುಷ್ಮಾ ಸ್ವರಾಜ್ ಬೇರೆ ಇದ್ದಾರೆ. ಇವೆಲ್ಲಕ್ಕಿಂತ ಮುಖ್ಯವಾಗಿ ಎನ್‌ಡಿಎ ಕೂಟದ ಪ್ರಮುಖ ಪಕ್ಷ ಸಂಯುಕ್ತ ಜನತಾದಳ ಹಾಗೂ ಇತರ ಮಿತ್ರ ಪಕ್ಷಗಳ ಬೆಂಬಲ ಮೋದಿಗೆ ಇಲ್ಲವಾಗಿದೆ. ಬಿಹಾರದ ಮುಖ್ಯಮಂತ್ರಿ ನಿತೀಶ ಕುಮಾರ್ ಸಂಯುಕ್ತ ಜನತಾದಳದ ರಾಷ್ಟ್ರೀಯ ಸಮಾವೇಶದಲ್ಲಿ ಮೋದಿಯನ್ನು ಕಟುವಾಗಿ ಟೀಕಿಸಿದ್ದಾರೆ. ಮಹಾರಾಷ್ಟ್ರದ ಶಿವಸೇನೆ ಕೂಡ ವಿರೋಧಿಸಿದೆ. ಹಾಗಿದ್ದರೂ ಮಾಧ್ಯಮಗಳಲ್ಲಿ ಪ್ರಚಾರ ಜೋರಾಗಿಯೇ ಇದೆ.

ಈ ಅಬ್ಬರಗಳ ಜೊತೆಗೇ ನಮ್ಮ ನ್ಯಾಯಾಂಗ ಚುರುಕುಗೊಂಡರೆ ಸಮಸ್ಯೆ ಬಗೆಹರಿದೀತೇನೋ. ಅದೇನೇ ಇರಲಿ, ಪ್ರಧಾನಿ ಯಾರು ಎಂಬ ಪ್ರಶ್ನೆ ಕುರಿತು ಚರ್ಚೆ ಈಗ ಅಪಕ್ವ. ಕಾಂಗ್ರೆಸ್ಸಿನಲ್ಲಿ ಗಾಂಧಿ ಕುಟುಂಬದ ರಾಹುಲ್ ಗಾಂಧಿಗೆ ಪಟ್ಟ ಕಟ್ಟಲು ಒಂದು ವಿಭಾಗ ಬಲವಾದ ಪ್ರಯತ್ನ ನಡೆಸುತ್ತಿದೆ. ದೇಶದ ಮುಂದೆ ಇರುವ ಪ್ರಶ್ನೆಗಳಿಗೆ ಪರಿಹಾರ ಕಾಣುವುದು ಮುಖ್ಯವೇ ಹೊರತು ಯಾರು ಮುಂದಿನ ಪ್ರಧಾನಿ ಎನ್ನುವುದಲ್ಲ.

## ನೋವಾರ್ಟಿಸ್ ಪೇಟೆಂಟ್ ಪ್ರಕರಣದ ತೀರ್ಪು – ಹೊಸ ಮೈಲಿಗಲ್ಲು

**ಭಾ**ರತ ದೇಶದ ಪ್ರಜಾಪ್ರಭುತ್ವದ ಮೂರು ಅಂಗಗಳೆನಿಸಿಕೊಂಡಿರುವ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳು ಭ್ರಷ್ಟಾಚಾರ, ಪಕ್ಷಪಾತ ಇತ್ಯಾದಿ ಗಂಭೀರ ಆರೋಪಗಳನ್ನೆದುರಿಸುತ್ತಿದ್ದು ಅವನತಿಯತ್ತ ಸಾಗುತ್ತಿವೆ ಎಂಬುದು ಬಹುಜನರ ಅಭಿಪ್ರಾಯ. ಇನ್ನು ಪ್ರಜಾಪ್ರಭುತ್ವದ ನಾಲ್ಕನೆಯ ಅಂಗವೆಂದು ಕರೆಯಲ್ಪಟ್ಟಿರುವ ಮಾಧ್ಯಮ ಕ್ಷೇತ್ರ ಕೂಡ ಈ ಅಭಿಪ್ರಾಯಗಳಿಗೆ ಹೊರತಾಗಿಲ್ಲ. ಹಾಗಾಗಿ ಇಡೀ ವ್ಯವಸ್ಥೆಯೇ ಕುಸಿದು ಬೀಳುತ್ತಿರುವುದನ್ನು ಕಾಣಲು ಕನ್ನಡಿ ಹಿಡಿಯಬೇಕಾದ ಪ್ರಮೇಯವೇನಿಲ್ಲ. ಪರಿಸ್ಥಿತಿಯನ್ನು ಅರಿಯಲು ಅಸಾಧಾರಣ ಪಾಂಡಿತ್ಯವೂ ಅಗತ್ಯವಿಲ್ಲ. ಇಂತಹ ಅಸಹ್ಯ ಸನ್ನಿವೇಶದಲ್ಲಿ ರಾಜ್ಯದ ಮುಖ್ಯಮಂತ್ರಿಯೊಬ್ಬರು ಅತ್ಯಂತ ಸರಳ ಜೀವನ ನಡೆಸುತ್ತಿದ್ದಾರೆಂಬ ವಿಷಯ, ಒಬ್ಬ ಹಿರಿಯ ಅಧಿಕಾರಿ ನಿರ್ಭಯವಾಗಿ ತನ್ನ ಜವಾಬ್ದಾರಿ ನಿರ್ವಹಿಸುತ್ತಾರೆಂಬ ಸುದ್ದಿ, ಓರ್ವ ನ್ಯಾಯಾಧೀಶ ಸಂವಿಧಾನದ ಆಶೋತ್ತರಗಳಿಗೆ ಸ್ಪಂದಿಸಿ ನ್ಯಾಯ ನಿರ್ಣಯ ನೀಡಿದ್ದಾರೆಂಬ ಸುದ್ದಿ ಅಥವಾ ಓರ್ವ ಪತ್ರಕರ್ತ ಸಮಾಜದ ಅನ್ಯಾಯವನ್ನು ಬಯಲಿಗೆಳೆದನೆಂಬ ಸುದ್ದಿ ವಿಶೇಷ ಸಂಗತಿಗಳೆನಿಸಿಬಿಡುತ್ತವೆ. ಅದರಲ್ಲೂ ಯಾವುದಾದರೊಂದು ವಿಷಯದಲ್ಲಿ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಪರಸ್ಪರ ಪೂರಕವಾಗಿ, ಜನಪರವಾಗಿ ಪ್ರತಿಕ್ರಿಯಿಸಿದಾಗ ಅದು ವಿಸ್ಮಯಕಾರಕ ಘಟನೆಯಾಗಿ ಬಿಡುತ್ತದೆ. ಏಪ್ರಿಲ್ ೧ರಂದು ಭಾರತದ ಸರ್ವೋಚ್ಚ ನ್ಯಾಯಾಲಯ ನೋವಾರ್ಟಿಸ್ ಕಂಪನಿಯ ಪೇಟೆಂಟ್ ಪ್ರಕರಣದಲ್ಲಿ ಕೊಟ್ಟ ತೀರ್ಪು ಇದಕ್ಕೆ ನಿದರ್ಶನ.

ಜಾಗತೀಕರಣದ ಮಾಯಾಜಾಲಕ್ಕೆ ತಮ್ಮನ್ನು ತಾವೇ ಸಮರ್ಪಿಸಿಕೊಂಡಿರುವ ಎಷ್ಟೋ ನ್ಯಾಯಾಧೀಶರುಗಳ ಮಧ್ಯೆ ದೇಶದ ಸಂವಿಧಾನದ ಗೊತ್ತು-ಗುರಿಗಳನ್ನು ಮರೆಯದ ಕೆಲವು ನ್ಯಾಯಾಧೀಶರು ಇನ್ನೂ ಸಕ್ರಿಯರಾಗಿದ್ದಾರೆಂಬುದು ಸಮಾಧಾನದ ಸಂಗತಿ. ನೋವಾರ್ಟಿಸ್ ಕಂಪನಿಯ ಪೇಟೆಂಟ್ ಪ್ರಕರಣ ಕಾನೂನಿಗೆ ಸಂಬಂಧಿಸಿದ್ದರೂ, ಅನೇಕ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಪ್ರಶ್ನೆಗಳೂ ಅದರ ಗರ್ಭದಲ್ಲಿ ಹುದುಗಿದ್ದರಿಂದ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ವ್ಯಾಪ್ತಿ ಕೇವಲ ಕಾನೂನಿನ ಪ್ರಶ್ನೆಗೆ ಸೀಮಿತಗೊಳ್ಳದಿರುವುದೇ ಅದರ ಮಹತ್ವಕ್ಕೆ ಕಾರಣ.

ಬೌದ್ಧಿಕ ಆಸ್ತಿ ಹಕ್ಕು ಒಬ್ಬ ವ್ಯಕ್ತಿಯ ಅಥವಾ ಒಂದು ಸಂಸ್ಥೆಯ ಆರ್ಥಿಕ ಹಿತಾಸಕ್ತಿಗಳ ಅಭಿವೃದ್ಧಿಯ ಸಾಧನವೆಂದು ಪರಿಗಣಿಸಲು ಸಾಧ್ಯವಿಲ್ಲ. ಏಕೆಂದರೆ ಈ ಹಕ್ಕು ಇಡೀ ಸಮಾಜದ ಮೇಲೆ ಮತ್ತು ಮಾನವ ಹಕ್ಕುಗಳ ಮೇಲೆ ನೇರ ಪರಿಣಾಮ ಬೀರುವ ಸಾಧ್ಯತೆ ಮತ್ತು ಶಕ್ಯತೆ ಹೊಂದಿರುತ್ತದೆ. ಬಹುರಾಷ್ಟ್ರೀಯ ಕಂಪನಿಗಳು ಮಾರುಕಟ್ಟೆಯ ಸ್ವಾಮ್ಯ ಪಡೆಯಲು ಮತ್ತು ಯಥೇಚ್ಚ ಲಾಭ ಗಳಿಸಲು ಪೇಟೆಂಟ್ ಒಂದು ಹೆದ್ದಾರಿ. ಜೀವರಕ್ಷಕ ಔಷಧಗಳಿಗೆ ಸಿಗುವ ಪೇಟೆಂಟ್ ರಕ್ಷಣೆಯಂತೂ ರೋಗಿಗಳ ಮೃತ್ಯುಪಾಶ. ನೋವಾರ್ಟಿಸ್ ಸ್ವಿಜರ್‌ಲ್ಯಾಂಡ್ ಮೂಲದ ಬಹುರಾಷ್ಟ್ರೀಯ ಔಷಧ ತಯಾರಿಕಾ ಕಂಪನಿ. ಅನೇಕಾನೇಕ ಜೀವರಕ್ಷಕ ಔಷಧಗಳಿಗೆ ಅನೇಕಾನೇಕ ದೇಶಗಳಲ್ಲಿ ಪೇಟೆಂಟ್ ರಕ್ಷಣೆ ಗಳಿಸಿಕೊಂಡಿದೆ. ರಕ್ತ ಕ್ಯಾನ್ಸರ್‌ಗೆ ಕಂಪನಿಯ 'ಗ್ಲಿವೆಕ್' ಔಷಧ ಅತ್ಯಂತ ಪರಿಣಾಮಕಾರಿಯೆಂದು ವೈದ್ಯರ ಅಭಿಪ್ರಾಯ. ಈ ಔಷಧಕ್ಕೆ ಭಾರತದಲ್ಲಿ ಪೇಟೆಂಟ್ ಕೋರಿ ಸಲ್ಲಿಸಿದ್ದ ನೋವಾರ್ಟಿಸ್ ಕಂಪನಿಯ ಅರ್ಜಿಯನ್ನು ಪೇಟೆಂಟ್ ಕಾಯ್ದೆ ೧೯೭೦ರ ಅಧಿನಿಯಮ ೩(d) ಪ್ರಕಾರ ಒಂದೇ ಔಷಧಕ್ಕೆ ಪುನಃ ಪೇಟೆಂಟ್ ಕೊಡಲು ಬರುವುದಿಲ್ಲವೆಂದು ಚೆನ್ನೈನ ಪೇಟೆಂಟ್ ಕಛೇರಿ ವಜಾ ಮಾಡಿತು. ನಂತರ ನೋವಾರ್ಟಿಸ್ ಕಂಪನಿ ಪೇಟೆಂಟ್ ಕಾಯ್ದೆಯ ಅಧಿನಿಯಮ ೩ (d)ಯ ಸಂವಿಧಾನಾತ್ಮಕತೆಯನ್ನು ಮದ್ರಾಸ್ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿ ಸೋತಿತು. ಚೆನ್ನೈ ಪೇಟೆಂಟ್ ಕಛೇರಿಯ ಆದೇಶವನ್ನು ಪ್ರಶ್ನಿಸಿ ಬೌದ್ಧಿಕ ಆಸ್ತಿ ಮೇಲ್ಮನವಿ ಪ್ರಾಧಿಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿಯೂ ತಿರಸ್ಕರಿಸಲ್ಪಟ್ಟನಂತರ ನೋವಾರ್ಟಿಸ್

ಕಂಪನಿ ೨೦೦೯ರಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿತು. ತಾನು ಆವಿಷ್ಕರಿಸಿದ 'ಗ್ಲಿವೆಕ್' ರಕ್ತ ಕ್ಯಾನ್ಸರ್‌ಗೆ ಹೊಸ ಔಷಧವೆಂದೂ, ಹೆಚ್ಚು ಪರಿಣಾಮಕಾರಿಯೆಂದೂ, ಹಾಗಾಗಿ ಪೇಟೆಂಟ್ ನಿರಾಕರಣೆಯ ಆದೇಶಗಳು ತಪ್ಪೆಂದೂ ವಾದ ಮಂಡಿಸಿತು. ಆದರೆ ಸರ್ವೋಚ್ಚ ನ್ಯಾಯಾಲಯ ಈ ವಾದವನ್ನು ತಳ್ಳಿ ಹಾಕಿ, 'ಗ್ಲಿವೆಕ್' ಹಳೆಯ ಔಷಧದ ಹೊಸ ಹೆಸರಷ್ಟೇ ಎಂದು ನಿರ್ಧರಿಸಿ, ಕಂಪನಿಯ ಅರ್ಜಿಯನ್ನು ವಜಾ ಮಾಡಿತು.

'ಗ್ಲಿವೆಕ್' ರಕ್ತ ಕ್ಯಾನ್ಸರ್ ರೋಗಕ್ಕೆ ಅತ್ಯಂತ ಪರಿಣಾಮಕಾರಿ ಔಷಧವೇ ಇರಬಹುದು. ಆದರೆ ಇದರ ಬೆಲೆ ಮಾತ್ರ ರಕ್ತವನ್ನೇ ಹೆಪ್ಪುಗಟ್ಟಿಸುವಂತಹದ್ದು. ಗ್ಲಿವೆಕ್ ಔಷಧದ ಚಿಕಿತ್ಸೆಗೆ ರಕ್ತ ಕ್ಯಾನ್ಸರ್ ರೋಗಿಯೊಬ್ಬ ತಿಂಗಳಿಗೆ ೧.೨೦ ಲಕ್ಷ ರೂಪಾಯಿ ತೆರಬೇಕು. ಈ ರೋಗಕ್ಕೆ ತುತ್ತಾದ ಮತ್ತು ತುತ್ತಾಗುವ ಬಡವರು ಮತ್ತು ಕೆಳ ಮಧ್ಯಮ ವರ್ಗದ ಜನರಿಗಂತೂ ಗ್ಲಿವೆಕ್ ಔಷಧ ಕೈಗೆಟುಕದ್ದು. ಅದೇ ಜನರಿಕ್ ಔಷಧಿಗಳಿಂದ (ಪೇಟೆಂಟ್ ಮುಕ್ತ) ಪಡೆಯುವ ಚಿಕಿತ್ಸೆಗೆ ತಿಂಗಳಿಗೆ ೮-೧೦ ಸಾವಿರ ರೂಪಾಯಿಗಳಾಗುತ್ತದೆ. 'ಗ್ಲಿವೆಕ್' ಔಷಧಕ್ಕೆ ಪೇಟೆಂಟ್ ದೊರೆತಿದ್ದಲ್ಲಿ ಬೇರೆ ಔಷಧ ತಯಾರಿಕಾ ಕಂಪನಿಗಳು ರಕ್ತ ಕ್ಯಾನ್ಸರ್‌ನ ಜನರಿಕ್ ಔಷಧಿಗಳ ತಯಾರಿಕೆ ಮತ್ತು ಮಾರಾಟವನ್ನು ನಿಲ್ಲಿಸಬೇಕಾಗಿತ್ತು. ಕ್ಯಾನ್ಸರ್ ರೋಗಿಗಳಿಗಂತೂ ಆಘಾತ ಕಾದಿತ್ತು. ಈ ಕಾರಣದಿಂದಲೆ ಚೆನ್ನೈನ ಪೇಟೆಂಟ್ ಕಛೇರಿಯ ಗ್ಲಿವೆಕ್ ಔಷಧಕ್ಕೆ ಪೇಟೆಂಟ್ ನಿರಾಕರಣೆಯ ಆದೇಶ, ಮದ್ರಾಸ್ ನ್ಯಾಯಾಲಯದ ತೀರ್ಪು, ಬೌದ್ಧಿಕ ಆಸ್ತಿ ಮೇಲ್ಮನವಿ ಪ್ರಾಧಿಕಾರದ ನಿರ್ಣಯ ಮತ್ತು ಸರ್ವೋಚ್ಚ ನ್ಯಾಯಾಲಯದ ತೀರ್ಪು ಸ್ವಾಗತಾರ್ಹ.

ಭಾರತದ ಔಷಧ ತಯಾರಿಕಾ ಕ್ಷೇತ್ರ ಸಾಕಷ್ಟು ಪ್ರಬಲವಾಗಿ ಬೆಳೆದಿದೆ. ಈ ದೇಶದಲ್ಲಿ ಪೇಟೆಂಟ್ ರಕ್ಷಣೆ ಪಡೆದ ಔಷಧಗಳ ವ್ಯಾಪಾರ ಶೇಕಡ ೧೦ಕ್ಕೂ ಕಡಿಮೆ. ಜನರಿಕ್ ಔಷಧಗಳ ವ್ಯಾಪಾರ ಅಗಾಧ. ೨೦೧೨ರಲ್ಲಿ ಸುಮಾರು ೬೦,೦೦೦ ಕೋಟಿ ರೂಪಾಯಿ ಮೌಲ್ಯದ ಔಷಧಗಳು ಭಾರತದಿಂದ ವಿದೇಶಗಳಿಗೆ ರಫ್ತಾಗಿವೆ. ೨೦೧೫ರ ವೇಳೆಗೆ ಪೇಟೆಂಟ್ ರಕ್ಷಣೆ ಪಡೆದಿರುವ ಮತ್ತು ಸುಮಾರು ೧೫೦ ಬಿಲಿಯನ್ ಡಾಲರ್‌ಗಳಷ್ಟು ಮಾರಾಟವಾಗುತ್ತಿರುವ ಔಷಧಗಳು ಪೇಟೆಂಟ್ ರಕ್ಷಣೆಯಿಂದ ಹೊರಬರುತ್ತಿರುವುದರಿಂದ ಭಾರತದ ಜನರಿಕ್ ಔಷಧ ತಯಾರಿಕಾ ಕಂಪನಿಗಳು ಇನ್ನೂ ಹೆಚ್ಚು ಬೆಳೆಯುವ ಸಾಧ್ಯತೆಯಿದೆ. ಆರೋಗ್ಯ ರಕ್ಷಣೆಯ ವಿಷಯದಲ್ಲಿ ಇತರೆ ಅಭಿವೃದ್ಧಿಶೀಲ ರಾಷ್ಟ್ರಗಳು ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ ಶೇಕಡ ೮-೯ ವ್ಯಯಿಸಿದರೆ ಭಾರತ ಕೇವಲ ಶೇಕಡ ೪ ವ್ಯಯಿಸುತ್ತದೆ. ಈ ವೆಚ್ಚದಲ್ಲೂ ಶೇಕಡ ೭೦ರಷ್ಟನ್ನು ಇಡೀ ಕುಟುಂಬಗಳೇ ಭರಿಸುತ್ತವೆ.

ಸರ್ವೋಚ್ಚ ನ್ಯಾಯಾಲಯದ ತೀರ್ಪು ವಿದೇಶಿ ಕಂಪನಿಗಳನ್ನು ನಿರಾಸೆಗೊಳಿಸಿದೆ. ಆವಿಷ್ಕಾರದ ವಾತಾವರಣ ಭಾರತದಲ್ಲಿ ನಶಿಸುತ್ತಿರುವುದಕ್ಕೆ ಈ ತೀರ್ಪು ಒಂದು ನಿದರ್ಶನವೆಂದು ಅಂತರರಾಷ್ಟ್ರೀಯ ಸಂಸ್ಥೆ ಫಾರ್ಮಾ ವಿಶ್ಲೇಷಿಸಿದೆ. ನೋವಾರ್ಟಿಸ್ ಕೂಡ ಭಾರತದಲ್ಲಿ ಔಷಧ ಸಂಶೋಧನೆಗೆ ಹಣ ತೊಡಗಿಸುವುದರ ಬಗ್ಗೆ ನಿಧಾನದ ನಿಲುವು ತಳೆಯುವುದಾಗಿ ತಿಳಿಸಿದೆ. ಪೇಟೆಂಟ್ ನಿರಾಕರಣೆಯಿಂದ ಭಾರತದ ಜನರಿಕ್ ಔಷಧ ತಯಾರಿಕಾ ಕಂಪನಿಗಳಿಗೆ ಲಾಭವಾಗಿರುವುದಂತೂ ನಿಶ್ಚಿತ. ಆದರೆ ಇದು ಜನರಿಗೆ ವರ್ಗಾವಣೆ ಆಗಬೇಕು. ಅಗ್ಗದ ಬೆಲೆಯಲ್ಲಿ ಜೀವ ರಕ್ಷಕ ಮತ್ತಿತರ ಔಷಧಗಳು ಸರ್ಕಾರಿ ಆಸ್ಪತ್ರೆಗಳಲ್ಲಿ ಮತ್ತು ಅಂಗಡಿಗಳಲ್ಲಿ ಜನರಿಗೆ ದೊರೆಯುವಂತಾಗಬೇಕು. ಆರೋಗ್ಯದ ಹಕ್ಕು ಜನತೆಯ ಮೂಲಭೂತ ಹಕ್ಕು. ಔಷಧ ತಯಾರಿಕಾ ಕಂಪನಿಗಳ ಸಾಮಾಜಿಕ ಜವಾಬ್ದಾರಿ ಹೆಚ್ಚಿಸುವಲ್ಲಿ ಸರ್ಕಾರ ಕಠಿಣ ಕ್ರಮ ಕೈಗೊಳ್ಳಬೇಕು. ಬಾಣಲೆಯಿಂದ ಬೆಂಕಿಗೆ ಬೀಳಕೂಡದೆಂದರೆ ಎಚ್ಚೆತ್ತ ಜನತೆಯ ನಿರಂತರ ಆಂದೋಳನ ಅನಿವಾರ್ಯ ಅಗತ್ಯ.

ಚಾರಿತ್ರಿಕ ತೀರ್ಪು ನೀಡಿದ ಸರ್ವೋಚ್ಚ ನ್ಯಾಯಮೂರ್ತಿಗಳಾದ ಶ್ರೀ ಅಫ್ತಬ್ ಆಲಂ ಮತ್ತು ಶ್ರೀಮತಿ ರಂಜನ ದೇಸಾಯಿ ಅವರಿಗೆ 'ಹೊಸತು' ಅಭಿನಂದಿಸುತ್ತದೆ.

---

**ಈ ತಿಂಗಳು (೩ನೇ ಪುಟದಿಂದ)**

ಕರ್ನಾಟಕದಲ್ಲಿ ಕೂಡ ಪತ್ನಿಯನ್ನು ಹಿಂಸಿಸಿದ ಸಿನಿಮಾನಟ ಈಚೆಗೆ ಬಿಡುಗಡೆಯಾಗಿದ್ದಾನೆ. ನ್ಯಾಯಮೂರ್ತಿಗಳೊಬ್ಬರು ಈತನನ್ನು ಕರೆಸಿಕೊಂಡು ಬುದ್ಧಿವಾದ ಹೇಳಿದ್ದು ವಿಚಿತ್ರ. ಇನ್ನೂ ಒಂದು ತಿಂಗಳಲ್ಲಿ ದತ್ತನ ಪ್ರಕರಣ ಯಾವ ತಿರುವು ಪಡೆಯುವುದೋ ನೋಡೋಣ.

* * *

ತಮಿಳುನಾಡಿನ ರಾಜಕೀಯ ದೇಶದಲ್ಲೇ ವಿಶಿಷ್ಟ. ಹಲವು ವರ್ಷಗಳಿಂದ ಜನರಿಗೆ ಆಯ್ಕೆ ಇರುವುದು ಡಿಎಂಕೆ - ಎಐಡಿಎಂಕೆ ಕರುಣಾನಿಧಿ ಯಾ ಜಯಲಲಿತಾ ಮುಖ್ಯಮಂತ್ರಿ. ಇಬ್ಬರೂ ತಮಿಳರ ವಿಚಾರಕ್ಕೆ ಬಂದಾಗ ಒಬ್ಬರು ಇನ್ನೊಬ್ಬರನ್ನು ಮೀರಿಸುತ್ತಾರೆ. ಇತ್ತೀಚೆಗೆ ಶ್ರೀಲಂಕಾ ತಮಿಳರ ವಿಷಯದಲ್ಲಿ ಕೇಂದ್ರ ಸರಕಾರದ ವಿರುದ್ಧ ತಿರುಗಿ ಬಿದ್ದಿವೆ ಎರಡೂ ಕಳಗಂಗಳು. ಕೇಂದ್ರಕ್ಕೆ ನೀಡಿದ್ದ ಬೆಂಬಲವನ್ನು ಕರುಣಾನಿಧಿ ನೇತೃತ್ವದ ಡಿಎಂಕೆ ಹಿಂದೆ ಪಡೆದುಕೊಂಡಿತು. ಸಚಿವರುಗಳು ರಾಜೀನಾಮೆ ನೀಡಿದರು. ಚುನಾವಣೆ ಲೆಕ್ಕಾಚಾರದಲ್ಲಿ ತಮಿಳುನಾಡಿನ ಈ ಎರಡು ಪಕ್ಷಗಳೂ ಒಳ್ಳೆ ಲೆಕ್ಕಾಚಾರ ಹಾಕುವವರು. ಡಿಎಂಕೆ ಕೇಂದ್ರದಿಂದ ಹೊರಹೋಗಲು ಶ್ರೀಲಂಕಾ ತಮಿಳರ ಪ್ರಶ್ನೆಯಿಂದೇನಲ್ಲ. ಮುಂಬರುವ ಚುನಾವಣೆಯಲ್ಲಿ ಕಾಂಗ್ರೆಸ್ ಮೈತ್ರಿಯನ್ನು ಕೊಡವಿಕೊಳ್ಳುವುದೂ ಒಂದು. ಮೊದಲಿನಿಂದಲೂ ಈ ವ್ಯವಹಾರ ನಡೆಯುತ್ತಲೇ ಬಂದಿದೆ.

ಈಚೆಗೆ ಜಯಲಲಿತಾ ಒಂದು ಹೆಜ್ಜೆ ಮುಂದೆ ಹೋಗಿ ಶ್ರೀಲಂಕಾ ತಮಿಳರ ಪ್ರತ್ಯೇಕ ರಾಜ್ಯಸ್ಥಾಪನೆಗೆ ಕರೆ ನೀಡಿದ್ದಾರೆ. ಇದು ಮತ್ತೆ ಶ್ರೀಲಂಕಾದಲ್ಲಿ ತಮಿಳರನ್ನು ಎತ್ತಿಕಟ್ಟುವ ತಂತ್ರವೆ ? ಇಲ್ಲ ಬೇರೆ ಉದ್ದೇಶವಿದೆಯೇ ? ಏಕೆಂದರೆ ದ್ರಾವಿಡ ಪಕ್ಷಗಳಿಗೆ ಪ್ರತ್ಯೇಕತೆಯ ಹಿನ್ನೆಲೆ ಇದೆ. ಸ್ವತಂತ್ರ ದ್ರಾವಿಡ ನಾಡು ಸ್ಥಾಪನೆ ಅರವತ್ತರ ದಶಕದವರೆಗೆ ಇತ್ತು. ಸಂವಿಧಾನಕ್ಕೆ ತಿದ್ದುಪಡಿ ತಂದಮೇಲೆ ಅದನ್ನು ಕೈಬಿಡಲಾಯಿತು. ಕರುಣಾನಿಧಿಯನ್ನು ಪದಚ್ಯುತಗೊಳಿಸಿದ ಎಂಜಿಆರ್ ಹೊಸ ಪಕ್ಷ ಎಐಡಿಎಂಕೆ ಸ್ಥಾಪಿಸಿದ್ದೂ ಕೂಡ ಈ ಹಿನ್ನೆಲೆಯಲ್ಲೇ ಎಂಬ ಪ್ರತೀತಿ ಇದೆ. ಚುನಾವಣೆಗಳು ಹತ್ತಿರ ಬರುತ್ತಿರುವಂತೆ ತಮಿಳುನಾಡಿನ ರಾಜಕೀಯ ಯಾವ ದಿಶೆಯಲ್ಲಿ ತಿರುಗುವುದೋ ನೋಡೋಣ.

* * *

ಇದುವರೆಗೆ ಕರ್ನಾಟಕದಲ್ಲಿ ಭಾರತೀಯ ಜನತಾ ಪಕ್ಷದ ಅಧ್ಯಕ್ಷ ಪದವಿ ಅಲಂಕರಿಸಿದ್ದ ಈಶ್ವರಪ್ಪ ಸ್ಥಾಪಿಸಿರುವ ದಾಖಲೆ ಒಂದಲ್ಲ ಎರಡಲ್ಲ. ಉಪಮುಖ್ಯಮಂತ್ರಿ ಸ್ಥಾನವನ್ನು ಉಳಿಸಿಕೊಂಡಿರುವ ಈತ ಈ ಸಲ ಚುನಾವಣೆಯಲ್ಲಿ ಗೋತಾ ಹೊಡೆದರೆ ಆಶ್ಚರ್ಯವೇನಿಲ್ಲ. ಬಾಯಿಬಿಟ್ಟರೆ ಹೊಲಸು ನಾರುವ ಈತ ಯಾವ ರಾಜಕೀಯ ಪಕ್ಷಕ್ಕೂ ತಲೆನೋವೆ. ಯಡಿಯೂರಪ್ಪ ಅಧಿಕಾರದಲ್ಲಿದ್ದಾಗ ಅವರಿಗೆ ಮಣೆ ಹಾಕುತ್ತಿದ್ದ ಈತ ಈಗ ಅವರ ಬದ್ಧ ವೈರಿ. ಇಬ್ಬರೂ ಒಂದೇ ಜಿಲ್ಲೆಯವರು. ಶಿವಮೊಗ್ಗದ ಕ್ಷೇತ್ರವೊಂದರಲ್ಲಿ ಸ್ಪರ್ಧಿಸುತ್ತಿರುವ ಈಶ್ವರಪ್ಪ ಕೆಲ ದಿನಗಳ ಹಿಂದೆ ಅಲ್ಪಸಂಖ್ಯಾತರನ್ನು ಕುರಿತು ಬಾಯಿಗೆ ಬಂದಹಾಗೆ ಮಾತನಾಡಿ ಸಿಕ್ಕಿಬಿದ್ದಿದ್ದಾರೆ. ಈತನ ಮೇಲೆ ಈಗ ಪ್ರಚೋದನಾತ್ಮಕ ಭಾಷಣ ಮಾಡಿದ ಆರೋಪದ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗಿದೆ. ಈತನ ಕ್ಷೇತ್ರದಲ್ಲಿರುವ ಬ್ರಾಹ್ಮಣ ಮತದಾರರನ್ನು ಒಲಿಸಿಕೊಳ್ಳಲೋ ಏನೋ ಅಲ್ಪಸಂಖ್ಯಾತ ಮುಸಲ್ಮಾನರ ಮೇಲೆ ಹರಿಹಾಯ್ದರು. ಆರೆಸ್ಸೆಸ್ ಗರಡಿಯಿಂದ ತಯಾರಾಗಿ ಬಂದ ಈಶ್ವರಪ್ಪ ಮುಸ್ಲಿಮರ ಮೇಲೆ ಕಿಡಿಕಾರಿರುವುದು ಆಶ್ಚರ್ಯದ ಸಂಗತಿ ಏನಲ್ಲ. ಅದು ರಕ್ತಗತವಾಗಿ ಬಂದದ್ದು. ಈಗ ಚುನಾವಣೆಯ ಭರಾಟೆ. ಕ್ರಿಮಿನಲ್ ಖಟ್ಲೆ ಏನೋ ದಾಖಲಾಗಿದೆ. ಇದು ಇತ್ಯರ್ಥವಾಗುವುದು ಯಾವಾಗಲೋ ?

* * *

ಕರ್ನಾಟಕದಲ್ಲಿ ಚುನಾವಣೆಯ ಮೊದಲ ಪ್ರಕ್ರಿಯೆ ಮುಗಿದಿದೆ. ಎಲ್ಲ ಪಕ್ಷಗಳವರ ಅಭ್ಯರ್ಥಿಗಳೂ ಕಣಕ್ಕಿಳಿದಿದ್ದಾರೆ ಹೊಡೆದಾಟ ಬಡಿದಾಟಗಳನ್ನೂ ದಾಟಿ. ಈ ಸಲ ಕಾಂಗ್ರೆಸ್ಸಿನಲ್ಲಿ ನೂಕುನುಗ್ಗಲು ಜಾಸ್ತಿ ಇತ್ತು. ಗೆದ್ದು ಅಧಿಕಾರಕ್ಕೆ ಬರುತ್ತೇವೆಂಬ ಹಮ್ಮು ಅವರಿಗೆ. ಅದಕ್ಕೇ ಟಿಕೆಟಿಗಾಗಿ ಹೊಡೆದಾಟ ಬಡಿದಾಟ. ಅಭ್ಯರ್ಥಿಗಳ ಬೆಂಬಲಿಗರೆಲ್ಲ ಮುಕ್ಕಾಲು ಕಾಸಿಗಾಗಿ ಬಂದವರು. ಕಾಂಗ್ರೆಸ್ ಕಚೇರಿಯ ಮುಂದೆ ನಡೆದ ಬಡಿದಾಟದಲ್ಲಿ ಒಬ್ಬ ಪಾಪ ಸತ್ತೇಹೋದ. ಪತ್ರಿಕಾ ವರದಿಗಳ ಪ್ರಕಾರ ಅವನಿಗೆ ೩೦೦ ರೂಪಾಯಿ ಮತ್ತು ಮಧ್ಯಾಹ್ನದ ಊಟದ ಭರವಸೆ ಇತ್ತು. ಇನ್ನು ಭಾಜಪದಲ್ಲೂ ಇಂಥದೇ ಪರಿಸ್ಥಿತಿ. ಇನ್ನು ಜಾತ್ಯತೀತ ಎಂದು ಲೇಬಲ್ ಅಂಟಿಸಿಕೊಂಡಿರುವ ದೇವೇಗೌಡ ಮತ್ತು ಪುತ್ರರ ಪಕ್ಷ ಜೆಡಿಎಸ್ ಉದುರುವ ಕಾಯಿಗಳನ್ನೂ ಆಯ್ದುಕೊಂಡಿವೆ. ಪೈಪೋಟಿ ನಡೆಯುವುದು ಈ ಮೂರೂ ಪಕ್ಷಗಳ ಮಧ್ಯೆ. ಉಳಿದವರು ಆಟಕ್ಕುಂಟು ಲೆಕ್ಕಕ್ಕಿಲ್ಲ. ಎಲ್ಲರ ಹಣೆಬರಹವೂ ಮೇ ಮೊದಲ ವಾರದಲ್ಲಿ ನಿಶ್ಚಯವಾಗುತ್ತದೆ. ಫಲಿತಾಂಶ ಬಂದ ಮೇಲೆ ಬೇರೆ ಲೆಕ್ಕಾಚಾರ ಪ್ರಾರಂಭ.

ಅಂದಹಾಗೆ ಈ ಸಲ ಅಭ್ಯರ್ಥಿಗಳು ಘೋಷಿಸಿಕೊಂಡಿರುವ ಆಸ್ತಿ ವಿವರಗಳು ಗಾಬರಿ ಹುಟ್ಟಿಸುತ್ತವೆ. ಎಲ್ಲ ಹಲವು ಕೋಟಿಗಳ ಒಡೆಯರೇ. ಕಳೆದ ಐದುವರ್ಷಗಳಲ್ಲಿ ಕೇವಲ ಐದಾರು ಲಕ್ಷ ರೂಪಾಯಿಗಳ ಆಸ್ತಿಹೊಂದಿದ್ದ ಅಭ್ಯರ್ಥಿಗಳು ಈಗ ಐದಾರು ಕೋಟಿಗಳ ಒಡೆಯರಾಗಿದ್ದಾರೆ. ಇದು ಚುನಾವಣಾ ಆಯೋಗದ ಮುಂದೆ ಪ್ರಕಟಿಸಿರುವ ಮೊತ್ತ. ಇನ್ನು ಕದ್ದು ಮುಚ್ಚಿಟ್ಟಿರುವ ಹಣ ಎಷ್ಟು ಕೋಟಿಗಳೋ !




### ಮಾರ್ಚ್ ತಿಂಗಳ ಸಂಚಿಕೆ

### ಭಾನಾಮತಿ — ಹೊಸತು ಪ್ರತಿಕ್ರಿಯೆ

ಮಾರ್ಚ್ ೨೦೧೩ರ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ಡಿ. ಎಮ್. ನದಾಫ್ ಅವರ 'ಭಾನಾಮತಿ ಮಾನಸಿಕ ಕಾಯಿಲೆಯೇ – ಒಂದು ಜಿಜ್ಞಾಸೆ' ಎಂಬುದು ಸಾಕಷ್ಟು ತಿಳಿವಳಿಕೆಯಿಂದ ಕೂಡಿಲ್ಲ, ಅದೊಂದು ಗುಪ್ತವಿದ್ಯೆ ಎಂದು ಮುಂತಾಗಿ ಏಪ್ರಿಲ್ ೨೦೧೩ರ 'ಪತ್ರಗಳ' ಅಂಕಣದಲ್ಲಿ ಶ್ರೀ ವಿಜಯಕುಮಾರ್ ಪ್ರತಿಕ್ರಿಯಿಸಿದ್ದಾರೆ.

ನನ್ನ ಅಭಿಪ್ರಾಯದಲ್ಲಿ ನದಾಫ್ ಅವರು ಭಾನಾಮತಿ ಕುರಿತು ಸಾಕಷ್ಟು ಅಧ್ಯಯನ ನಡೆಸಿ ಚಾಲ್ತಿಯಲ್ಲಿರುವ, ಮೌಢ್ಯದಿಂದ ಕೂಡಿರುವ ಈ ಆಚರಣೆಯ ಟೊಳ್ಳುತನವನ್ನು ಬಯಲಿಗೆಳೆದಿದ್ದಾರೆ. ಜೊತೆಗೆ ವೈಜ್ಞಾನಿಕ ಮನೋಭಾವ, ವೈಚಾರಿಕತೆಯನ್ನು ಪ್ರಚುರಪಡಿಸಲು ನಿರಂತರವಾಗಿ ಶ್ರಮಿಸುತ್ತಿರುವ ಭಾರತ ಜ್ಞಾನ-ವಿಜ್ಞಾನ ಸಮಿತಿ ಇವೇ ಮೊದಲಾದ ಸಂಸ್ಥೆಗಳು, ವ್ಯಕ್ತಿಗಳು ನೀಡಿರುವ ಪುರಾವೆಗಳನ್ನು, ವಿವರಣೆಗಳನ್ನು ನದಾಫ್ ಅವರು ದಾಖಲಿಸಿರುವುದು ಪ್ರಶಂಸನೀಯ. ಭಾನಾಮತಿಯೇ ಅಲ್ಲದೆ ಇಂತಹ ಎಲ್ಲ ಅವೈಜ್ಞಾನಿಕ ಆಚರಣೆಗಳ ವಿರುದ್ಧ ನಾಡಿನ ಪ್ರಜ್ಞಾವಂತ ಜನರು ವ್ಯಾಪಕ ಪ್ರಚಾರ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂಬ ನದಾಫರ ಮಾತು ಸರಿಯಾಗಿಯೇ ಇದೆ. ಶ್ರೀ ವಿಜಯಕುಮಾರ್ ಅವರ ಪ್ರತಿಕ್ರಿಯೆ 'ಭಾನಾಮತಿ'ಯನ್ನು ಎತ್ತಿಹಿಡಿಯಲು ಪ್ರಯತ್ನಿಸಿದೆ. ಅವರ ನಿಲುವು ಅವೈಜ್ಞಾನಿಕ.

ಬೆಂಗಳೂರು — **ಆರ್. ಸೀತಾರಾಮ್**

### ರಂಗಾಯಣ ಒಂದು ಪತ್ರ – ರಂಗಾಯಣವನ್ನು ಒಡೆಯಬೇಡಿ

ರಂಗಾಯಣ - ಮೈಸೂರು ಒಂದು ನಾಟ್ಯ ಸಂಸ್ಥೆ. ಇಲ್ಲಿ ನಾಟ್ಯ - ಎಂದರೆ ಸದ್ಯಕ್ಕೆ ನಾಟಕವೆಂದೇ ಅಭಿಪ್ರಾಯ - ಅರ್ಥ ಕೂಡ. ಈ ಅರ್ಥದಲ್ಲಿಂದಿನ ಕನ್ನಡ ರಂಗಭೂಮಿಯು ಅರ್ಥಪೂರ್ಣವಾಗುತ್ತಿದೆ. ಇದನ್ನು ಪ್ರಶ್ನಿಸುವುದಾದರೆ, ನೆನಪಿರಬೇಕು : ನಾಟಕವು ಮತ್ತು ಅದನ್ನು ಅಭಿನಯಿಸುವ ಸಂಸ್ಥೆಗಳು ಇಂದಿನ ನಮ್ಮ ಸಂಸ್ಕೃತಿಯನ್ನು ನೆನಪಿಸುತ್ತವೆ. ಇಂತಹ ಅವಕಾಶವು ರಂಗಭೂಮಿಯನ್ನು ಬಿಟ್ಟರೆ ಸಿನಿಮಾಕ್ಕೆ ಸೇರುತ್ತದೆಯಾದರೂ ನಾಟಕಕ್ಕೇ ಹೆಚ್ಚಿನ ಅವಕಾಶ ವಿರುತ್ತಿದೆ. ಉದಾಹರಣೆಗೆ ತುಘಲಕ್ ನಾಟಕವು ಶ್ರೀಯುತ ಗಿರೀಶ್ ಕಾರ್ನಾಡರದು. ಇದರಲ್ಲಿ ನಾಯಕನು ಮುಸಲ್ಮಾನ! ತನ್ನ ರಾಜ್ಯದ, ಇಂದಿನ ಇಡೀ ಭಾರತದ ಎಕಾನಮಿಯನ್ನು ಕುರಿತದ್ದು, ನಮ್ಮ ಜನ ಚಲಾವಣೆಯಲ್ಲಿ ಇರುವ ಹಣಕಾಸಿನ ಕೋಟಲೆಗಳನ್ನು ಚರ್ಚಿಸಲಾಗಿದೆ. ನಮ್ಮ ಆಯವ್ಯಯಗಳು ಶುದ್ಧವಾಗಿಲ್ಲ, ಯಾರೂ ಬೇಕಾದರೂ ಖೋಟಾ ನೋಟುಗಳನ್ನು ಬಳಸಿ - ಸಿದ್ಧಮಾಡಿಕೊಂಡು ನಮ್ಮ ಸರ್ಕಾರವನ್ನಲ್ಲದೆ ಹಣಕಾಸಿನ ವ್ಯವಹಾರದ ಸಂಸ್ಥೆಗಳನ್ನೂ ಆಕ್ರಮಿಸಬಹುದು – ಅಂದರೆ ಮೋಸದ ಚಲಾವಣೆಯನ್ನೂ, ಕಳುವನ್ನೂ ಈ ಸಂಸ್ಥೆಗಳಲ್ಲೂ ಅನುಭವಿಸಬಹುದು ಮತ್ತು ತಮ್ಮ ಗ್ರಾಹಕರನ್ನು ಪೇಚಿನಲ್ಲಿ ಸಿಕ್ಕಿಸಬಹುದು. ಇದರ ನಾಯಕನು ಒಬ್ಬ




ಮಹಮ್ಮದೀಯ, ಆದುದರಿಂದ ಈ ಪಾತ್ರವನ್ನು ಒಬ್ಬ ಮಹಮ್ಮದೀಯನೇ ಅಭಿನಯಿಸಿದಲ್ಲಿ, ಮಹಾತ್ಮಾ ಗಾಂಧೀಜಿಯವರ ಸಾಂಸ್ಕೃತಿಕ ಸ್ತರಗಳನ್ನು ಬೆಳಕಿಗೊಡ್ಡಿ ಚರ್ಚಿಸಲೂಬಹುದು. ಇಡೀ ಭಾರತವನ್ನು ಈಗಲಂತೂ ಹಿಂದೂ - ಮುಸ್ಲಿಮ್ ಸಂವೇದನೆಯಲ್ಲಿ ಕಾಣಬಹುದು. ಮುಖ್ಯವಾಗಿ ಸಾಮಾಜಿಕ ಐಕ್ಯತೆಯನ್ನು ಗಮನಿಸಿದ್ದರೂ (ತುಘಲಕ್‌ನಂತೆ) ಅಸಾಧ್ಯವೆಂಬುದನ್ನೂ ಕಾಣಬಹುದಾಗಿದೆ. ಆದುದರಿಂದ ಈ ಪಾತ್ರವನ್ನು ಒಬ್ಬ ಮಹಮ್ಮದೀಯನೇ ಅಭಿನಯಿಸಿದಲ್ಲಿ ಹಿಂದೂಗಳು ಮತ್ತೊಂದು ಸಂಸ್ಕೃತಿಯ ಸ್ತರಗಳನ್ನೂ ಕಾಣಬಹುದಾಗಿದೆ. ಇಂತಹ ಪರಿಶೀಲನೆಗೆ ಹೆಚ್ಚಿನ ಅರಿವೂ - ಪ್ರಜ್ಞೆಯೂ ಅವಶ್ಯವಿರುತ್ತದೆ. ಒಟ್ಟಿನಲ್ಲಿ ಈ ನಾಟಕವು ಮಹಾತ್ಮಾ ಗಾಂಧೀಜಿಯ ಚಿಂತನದ ಗೌರವವನ್ನೂ ತೋರಿಸುತ್ತದೆ. ಒಂದು ಸಮರ್ಥ ನಾಟಕವು ಕೇವಲ ತನ್ನ ಲಕ್ಷಣಗಳಿಂದ ನಮ್ಮ ಬದುಕಿನ ಒಳ-ಹೊರಗುಗುಳೆರಡನ್ನೂ ತೋರಿಸಬಹುದು. (ಲಂಕೇಶರ ಒಂದು ನಾಟಕವೂ ಹೀಗೆಯೇ ಪರಿಣಾಮಕಾರಿಯಾಗಬಲ್ಲುದು.) ಒಟ್ಟಿನಲ್ಲಿ ಈ ಉದಾಹರಣೆಗಳನ್ನು ಒಂದು ನಾಟಕವು ನಮ್ಮ ಸಂಸ್ಕೃತಿಯ ಬಗ್ಗೆ ಚಿಂತಿಸಲು ನೆರವಾಗುತ್ತದೆ ಎಂಬುದೇ ಆಗಿದೆ. ಇದರಲ್ಲಿ ಒಂದು ಸಂಸಾರದ ಗೊಂದಲವೂ ಗಮನಕ್ಕೆ ಬರಬಹುದು. ಆದುದರಿಂದ ಜಾತಿಭೇದವಿಲ್ಲದಂತೆ ಯಾರು ಬೇಕಾದರೂ ಈ ನಾಟಕವನ್ನು ನೋಡಬಹುದು.

ಬಿ. ವಿ. ಕಾರಂತರು ಮೈಸೂರಿನಲ್ಲಿ ಇಪ್ಪತ್ತನಾಲ್ಕು ವರ್ಷಗಳ ಹಿಂದೆ ರಂಗಾಯಣ ಎಂಬ ಸಂಸ್ಥೆಯನ್ನು ಸರ್ಕಾರದ ನೆರವಿನಿಂದ ಪ್ರಾರಂಭಿಸಿದರು. ಇದರಲ್ಲಿ ಇಬ್ಸನ್ ಎಂಬ ನಾಟಕಕಾರನ ಒಂದು ಕೃತಿಯ ಅನುವಾದವನ್ನು ರಂಗದ ಮೇಲೆ ತಂದಾಗಲೂ ಅಂದಿನ ಮುಖ್ಯಮಂತ್ರಿಯ ಕಡೆಯವರು ಅದನ್ನು ಅದೇ ಮುಖ್ಯಮಂತ್ರಿಯನ್ನು ಹಳಿವುದಕ್ಕಾಗಿಯೇ ಪ್ರದರ್ಶನವನ್ನು ಮಾಡಲಾಗಿತ್ತೆಂದು ಗೊಣಗಿದುದು ಉಂಟು. ಮುಖ್ಯವಾಗಿ ಆ ನಾಟಕದ ಭಾಷೆಯು ಮಂಡ್ಯದ ರೈತ ಸಮಾಜದ ಲಕ್ಷಣಗಳನ್ನು ಒಳಗೊಂಡಿದ್ದುದು ಮುಖ್ಯವಾಗಿತ್ತು. (ಕನ್ನಡದಲ್ಲಿ ಮಂಡ್ಯದ ಸಮಾಜವು ಒಂದು ಪ್ರಾದೇಶಿಕತೆಯನ್ನು ಒಳಗೊಳ್ಳುತ್ತದೆ ಎಂಬುದನ್ನು ಯಾರೂ ಕಾಣಬಹುದು.) ನಮಗೆ ಇಷ್ಟು ಸಾಕು - ಸದ್ಯಕ್ಕೆ ನಾಟಕವು ನಮ್ಮ ಸಾಂಸ್ಕೃತಿಕ ನಾಣ್ಯವೆಂಬುದನ್ನು ಗುರುತುಮಾಡಬಯಸುತ್ತೇನೆ. ಏಕೆಂದರೆ ಬಿ. ವಿ. ಕಾರಂತರಿಗೆ ಮೂಲತಃ ದಕ್ಷಿಣ ಕನ್ನಡದ ಯಕ್ಷಗಾನ ಬಯಲಾಟದ ಸತ್ವವು ಅವರ ಅಂತರಂಗವನ್ನೇ ತುಂಬಿಕೊಂಡಿತ್ತು. ಅಂತೆಯೇ ರಂಗಾಯಣ - ಎಂಬ ಒಂದು ಸಾಂಸ್ಕೃತಿಕ ಸಂಸ್ಥೆಯನ್ನು

ಪ್ರಕಟಣೆ

## ಸಾಹಿತಿ ಮಾಹಿತಿ ಕೋಶಕ್ಕೆ ಮಾಹಿತಿ ಕಳುಹಿಸಿ

ಬೆಂಗಳೂರು : ಈಗಾಗಲೇ ಸಾಹಿತಿ ಮಾಹಿತಿ ಕೋಶ ಭಾಗ – ೧, ೨, ೩, ೪, ೫, ೬, ೭, ೮ ಹಾಗೂ ೯ನ್ನು ಪ್ರಕಟಿಸಲಾಗಿದ್ದು, ಭಾಗ ೧೦ರ ಹಾಗೂ ಕಡೆಯದರ ಮುದ್ರಣ ಸಿದ್ಧತೆ ಮಾಡಲಾಗುತ್ತಿದೆ. ಒಂದಾದರೂ ಗ್ರಂಥ ಪ್ರಕಟವಾಗಿರುವ ದೇಶ-ವಿದೇಶಗಳ ಹಿರಿಯ ಕಿರಿಯ ಯಾವ ಲೇಖಕರು ಬೇಕಾದರೂ ಮಾಹಿತಿ ಕಳುಹಿಸಬಹುದು. ಮಾಹಿತಿ ಕಳುಹಿಸಬಯಸುವ ಲೇಖಕರು ರೂ. ೫/- ಅಂಚೆ ಚೀಟಿ ಹಚ್ಚಿದ ೯" x ೪" ಆಕಾರದ ಸ್ವವಿಳಾಸದ ಕವರನ್ನು

**ಸಂಪಾದಕರು**

**೫೩/೪ ಡಬ್ಲ್ಯೂ, ೨೩ನೇ ಅಡ್ಡರಸ್ತೆ**
**ಸೋಮೇಶ್ವರ ಬಡಾವಣೆ, ಹುಳಿಮಾವು**
**ಬನ್ನೇರುಘಟ್ಟ ರಸ್ತೆ**
**ಬೆಂಗಳೂರು – ೫೬೦ ೦೭೬**
ಇವರಿಗೆ ಕಳುಹಿಸಲು ಕೋರಿದೆ.

ಸ್ಥಾಪಿಸಿ ಪ್ರಯೋಗಗಳನ್ನು ಸಾಧಿಸಿದ್ದಾರೆ.

ಬಿ. ವಿ. ಕಾರಂತರಿಗೆ ಯಕ್ಷಗಾನ ಬಯಲಾಟಕ್ಕಿಂತಲೂ ಸುಸಂಬಂಧವುಳ್ಳ ಒಂದು ನಾಟಕ ಸಂಸ್ಥೆಯನ್ನು ರಚಿಸುವ ಆಶಯವಿತ್ತು. ಇದಕ್ಕಾಗಿ ಅವರು ತರುಣ ಅಭ್ಯರ್ಥಿಗಳನ್ನು ಸುಮಾರು ೩೦೦ರಲ್ಲಿ ಕೇವಲ ೩೦ ಮಂದಿಯನ್ನು ಆಯ್ದು ಪ್ರಯೋಗಗಳನ್ನು ಸಾಧಿಸಲು ಸಾಧ್ಯವೂ ಆಯಿತು. ಅದು ಈ ದಿನಗಳಲ್ಲಿ ಆ ಮಟ್ಟಕ್ಕೇರಲಾರದವರ (ಕಲಾವಿದರೂ, ವಿದ್ವಾಂಸರೂ, ಸಾಹಿತಿಗಳೂ ಸೇರಿದಂತೆ) ಕಣ್ಣು ಕುಕ್ಕಿದಂತಾಗಿ ರಂಗಾಯಣದ ೧೮ ಕಲಾವಿದರನ್ನು ಮೂರು ವಿಭಾಗಗಳನ್ನಾಗಿ ಮಾಡಲು ನಮ್ಮ ಸರ್ಕಾರವನ್ನು ಉತ್ತೇಜಿಸಿರುವುದಂತೂ ಎಂದೆಂದಿಗೂ ಕಲಾವಿದರು ಮತ್ತು ವಿದ್ವಾಂಸರಿಗೆ ಒಂದು ದುಷ್ಟ ಅನುಭವವೇ ಆಗಿರುತ್ತದೆ. ಇಂಥದನ್ನು ಉತ್ತೇಜಿಸುವ ಒಂದು ಗುಂಪನ್ನೇ ಇಲ್ಲಿ ಗುರುತಿಸಬಹುದಾಗಿದೆ. ಪರಿಣಾಮವಾಗಿ ಒಂದು ಸಾಂಸ್ಕೃತಿಕ ಅರಿವು ಕೂಡ ಗುರುತಾಗುತ್ತಿದೆ. ಯಾವುದೇ ಸಾಂಸ್ಕೃತಿಕ ಸಂಸ್ಥೆಯನ್ನೂ ಒಡೆಯುವ ಪ್ರಯತ್ನ ಮಾಡಿದಲ್ಲಿ ಪರಿಣಾಮವಂತೂ ಒಳ್ಳೆಯದಾಗಲಾರದು.

ನಮ್ಮ ಸರ್ಕಾರವು ತನ್ನ ಅಜ್ಞಾನದಿಂದ ರಂಗಾಯಣದಂಥ ಸಂಸ್ಥೆಗಳನ್ನು ಯಾರು ಬೇಕಾದರೂ ಸೃಷ್ಟಿ ಮಾಡಬಹುದೆಂದು ಧೈರ್ಯ ಮಾಡಿರುವಂತಿದೆ. ಇದನ್ನು ಅನುಮೋದಿಸಿದವರು ಕೂಡ ಪಾಠ ಕಲಿಯಬೇಕಾಗಿ ಬಂದಿದೆ.

ಮೊದಲಿಗೆ ಇಂಥ (ರಂಗಾಯಣ-ಮೈಸೂರು) ಸಂಸ್ಥೆ ಯೊಂದನ್ನು ಅದರ ಅವಸಾನಕ್ಕೇ ಬಿಡಬಹುದು. ಅಥವಾ ನಮ್ಮ ಸರ್ಕಾರವು ತನ್ನ ಉತ್ತಮತೆಗಾಗಿ ಕೆಲವರ ಮಾತು ಕೇಳಿ ವರ್ತಿಸಬಾರದಿತ್ತು. ಏಕೆಂದರೆ ಈ ರಂಗಾಯಣವು ಬಿ. ವಿ. ಕಾರಂತರ ವಿಶಿಷ್ಟ ಕೊಡುಗೆಯಾಗಿದೆ. ಇದರಲ್ಲಿ ಬೇರೆಯ ಸಂಸ್ಥೆಗಳು ಕರುಬಿ ನೋಡಬಹುದಾದ ರೀತಿನೀತಿಯಿದೆ. ನಮ್ಮ ಕನ್ನಡ ರಂಗಭೂಮಿಯನ್ನು ಸಶಕ್ತಗೊಳಿಸಬಲ್ಲ ಸಾಮರ್ಥ್ಯವು ಅಡಕವಾಗಿದೆ. ಇದರ ಒಂದೊಂದು ಪ್ರಯೋಗವೂ ನಮ್ಮ ನಾಟಕದ ಕಲ್ಪನೆಯನ್ನು ವೃದ್ಧಿಪಡಿಸುತ್ತಿದೆ. ಇದರಿಂದ ಕೇವಲ ಅಭಿನಯವಲ್ಲದೆ ಪಾಶ್ಚಿಮಾತ್ಯ-ಆಂಗ್ಲ-ಕೃತಿಗಳನ್ನು ಯಶಸ್ವಿಯಾಗಿ ಪ್ರದರ್ಶನ ಮಾಡಬಲ್ಲ ಯೋಗ್ಯತೆಯು **ರಂಗಾಯಣದ್ದಾಗಿದೆ.**

ಬಿ. ವಿ. ಕಾರಂತರ ಕೂಸಾದ ರಂಗಾಯಣಕ್ಕೆ ಇನ್ನೇನು ಬೆಳ್ಳಿಯ ಹಬ್ಬವು ಹತ್ತಿರ ಬರುತ್ತಿದೆ. ಇಂತಹ ಪ್ರಯತ್ನವನ್ನು ನಾವು - ಎಲ್ಲರೂ – ಬೆಂಬಲವಾಗಿ ನಿಲ್ಲುವ ಸರ್ಕಾರ ಕೂಡ ಉತ್ತೇಜಿಸಬೇಕಾಗಿದೆ. ಈ ಸಂಸ್ಥೆಯು ಕುವೆಂಪು ಅವರ ವಿಶಿಷ್ಟ ಕೃತಿಯಾದ ಮಲೆಗಳಲ್ಲಿ ಮದುಮಗಳು ಎಂಬ ಕೃತಿಯನ್ನೂ ನಾಟಕರೂಪದಲ್ಲಿ ಪ್ರದರ್ಶಿಸಿ (ವಿಮರ್ಶೆಗೂ ಗುರಿಯಾಗಿದೆ) ನನಗೆ ತಿಳಿದಂತೆ ಈ ಪ್ರಯೋಗದಲ್ಲಿ ತೊಡಗಿಸಿಕೊಂಡವರು ಇನ್ನಷ್ಟು ಎಚ್ಚರ ಇರಬೇಕಾಗಿತ್ತು. ಅದು ಸಾಧ್ಯವಾಗಿಲ್ಲ ಎಂಬುದು ನನ್ನ ಆಕ್ಷೇಪಣೆ ಕೂಡ. ಇದನ್ನು ಮತ್ತೊಂದೆಡೆ ಪ್ರದರ್ಶಿಸಲು ಅವಕಾಶವಿದ್ದರೂ ಹಾಗೆ ಮಾಡಲಾಗದಂತೆ ನಮ್ಮ ವಿದ್ವಾಂಸರೇ ಕಾರಣರಾದುದಂತೂ ವಿಚಾರಾರ್ಹವಾಗಿದೆ. ಇದಕ್ಕೆ ಖರ್ಚು ಮಾಡಲು ನಮ್ಮ ಸರ್ಕಾರವೇ ಹಿಂಜರಿದಿಲ್ಲವೆಂಬುದಂತೂ ಮುಖ್ಯಾಂಶವೇ ಆಗಿದೆ. ನಮ್ಮ ಮಹಾಕವಿ ಕುವೆಂಪು ಈ ಕಾದಂಬರಿಯನ್ನು ಒಂದು ವಿಶಿಷ್ಟ ದರ್ಶನಕ್ಕಾಗಿ ರಚಿಸಿದ್ದಾರೆ. ಇವರ ಮತ್ತೊಂದು ಕಾದಂಬರಿ ಕಾನೂರು ಹೆಗ್ಗಡಿತಿ ಕೂಡ ಅದೇ ಮಲೆನಾಡಿನ ಜೀವನವನ್ನು ಪೃಥಕ್ಕರಿಸಿದ ಒಂದು ಮಹತ್ವದ ಕೃತಿ - ಕಾರ್ನಾಡರ ತುಘಲಕ್‌ನಂತೆ! ಲಂಕೇಶರ ಸಂಕ್ರಾಂತಿಯಂತೆ – ಆದುದರಿಂದ ಅರಿವಿಲ್ಲದವರಂತೆ ರಂಗಾಯಣದ ಕಲಾವಿದರನ್ನು ಮೂರಾಬಟ್ಟೆ ಮಾಡುವ ಯತ್ನಕ್ಕೆ ನೆರವಾದ ನಮ್ಮ ಪ್ರತಿನಿಧಿಗಳು ನಮ್ಮ ಸರ್ಕಾರಕ್ಕೆ ಕುಮ್ಮಕ್ಕು ನೀಡಿರುವುದಂತೂ ವಿಚಾರಪೂರ್ವಕವಾದ ತಪ್ಪಾಗಿದೆ. ಈ ರಂಗಾಯಣವೇ ಅಲ್ಲ ಯಾವುದೇ ನಾಟಕ ಸಂಸ್ಥೆಯನ್ನೂ ಒಡೆಯಲು ಪ್ರೇಕ್ಷಕರು ಪ್ರಯತ್ನ ಮಾಡಬಾರದು. ಹಾಗೆ ಮಾಡಿದಲ್ಲಿ ಸೋಲು ಕಟ್ಟಿಟ್ಟ ಬುತ್ತಿ! ಇಷ್ಟು ಹೇಳುವುದಕ್ಕಾಗಿಯೇ ಈ ಬಹಿರಂಗಪತ್ರವನ್ನು ಬರೆದಿರುತ್ತೇನೆ.

*ಬೆಂಗಳೂರು* ***ಕ. ವೆಂ. ರಾಜಗೋಪಾಲ***

## ದ್ರೋಣನ ಪಾಪಪ್ರಜ್ಞೆ ಮತ್ತು ಏಕಲವ್ಯನ ವಿಶ್ವಾತ್ಮಕ ಪ್ರಜ್ಞೆ

ದ್ರೋಣನ ಪಾಪಪ್ರಜ್ಞೆಯನ್ನು ಹೊರತೆಗೆಯುವ ರಭಸದಲ್ಲಿ ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ ಅವರು (ಹೊಸತು : ಮಾರ್ಚ್ ೨೦೧೩) ಏಕಲವ್ಯನ ವಿಶ್ವಾತ್ಮಕ ಪ್ರಜ್ಞೆಯನ್ನು ಮೂಲೆಗುಂಪು ಮಾಡಿರುವುದು ಸರಿಯಲ್ಲ ಎನಿಸಿರುವುದರಿಂದ ಈ ಪ್ರತಿಕ್ರಿಯೆ ಬರೆಯುತ್ತಿದ್ದೇನೆ.

'ಬೆರಳ್ಗೆ ಕೊರಳ್' ನಾಟಕದಲ್ಲಿ ಕುವೆಂಪು ಅವರು ನರಗುರು (= ದ್ರೋಣ), ಅಂತರತಮಗುರು (= ಅರಿವೆ ಗುರು), ವಿಶ್ವಗುರು (= ವಿಶ್ವವ್ಯಾಪಿ ಚೈತನ್ಯ ಶಕ್ತಿ) – ಎಂಬ ನಿತ್ಯ ನಿರಂತರ ಚಲನಶೀಲ ಗುರುತತ್ವವನ್ನು ಅನಾವರಣಗೊಳಿಸಿದ್ದಾರೆ. ನರಗುರುವಿನೊಂದಿಗೆ ತನ್ನನ್ನು ಕಂಡುಕೊಳ್ಳುವ ಮತ್ತು ನರಗುರುವಿಗೆ ಬದ್ಧರಾಗುವ ವ್ಯಕ್ತಿಗಳು ಅಹಂಕಾರದಲ್ಲಿ ಕೊನೆಗೊಳ್ಳುತ್ತಾರೆ. ದ್ರೋಣಾರ್ಜುನರ ಸಂಬಂಧ ಇಂತಹುದು. ನರಗುರುವಿನ ನೆಪದಲ್ಲಿ ಅಥವಾ ನರಗುರುವಿನ ಪ್ರೇರಣೆಯಲ್ಲಿ ತನ್ನ ಒಳಗಣ್ಣನ್ನು ತೆರೆದುಕೊಳ್ಳುವ ಅಥವಾ ಅಂತರತಮಗುರುವಿನೊಡನೆ ಅನುಸಂಧಾನ ನಡೆಸುವ ವ್ಯಕ್ತಿಗಳು ತಮ್ಮೊಳಗೆ ಹುದುಗಿರುವ ಅಗಾಧಶಕ್ತಿಯನ್ನು ಹೊರಹಾಕುತ್ತಾರೆ. ದ್ರೋಣ ಪ್ರತೀಕ ಮತ್ತು ಏಕಲವ್ಯರ ಸಂಬಂಧ ಇಂತಹುದು.

ನರಗುರುವಿಗೆ ವಿಧೇಯನಾಗಿರುವ ಅರ್ಜುನನಿಗೆ ಗುರು ತನ್ನನ್ನು ತ್ರಿಲೋಕ ವೀರನನ್ನಾಗಿ ಮಾಡುತ್ತಾನೆಂಬ ನಿರೀಕ್ಷೆಯಿರುತ್ತದೆ. ಇಂಥ ನಿರೀಕ್ಷೆಗೆ ಭಂಗವುಂಟಾದಾಗ ಅವನಲ್ಲಿ ಅಸೂಯೆ ಹುಟ್ಟಿ, ಅಹಂಕಾರ ಬೆಳೆದು, ಗರ್ವರಸ ಮಡುಗಟ್ಟುತ್ತದೆ. ಆದರೆ ಇಂಥ ಯಾವುದೇ ನಿರೀಕ್ಷೆ ಮತ್ತು ಅಪೇಕ್ಷೆಗಳಿಲ್ಲದ ಏಕಲವ್ಯನಲ್ಲಿ ಅನಸೂಯೆ, ನಿರಹಂಕಾರಗಳು ಮನದುಂಬಿಕೊಂಡಿರುತ್ತವೆ. ಲೌಕಿಕವಾದ ಸ್ಥಾನ-ಮಾನಗಳಿಂದ ಬಹುದೂರವಾಗಿ ಕಾಡಿನಲ್ಲಿ ಬದುಕುತ್ತಿರುವ ಏಕಲವ್ಯನಿಗೆ ಅರ್ಜುನ ಕೂಡ ಸೋದರನಂತೆಯೇ ಕಾಣುವುದು ಗಮನಾರ್ಹ. ಮಾಂಸನಯನಗಳನ್ನು ಮುಚ್ಚಿಕೊಂಡು ತನ್ನ ಒಳಗಣ್ಣನ್ನು ತೆರೆದುಕೊಂಡಿರುವ ಏಕಲವ್ಯನಿಗೆ ಶಬ್ದವೇಧಿ ಎಂಬ ದೂರ ಸಂವೇದಿ ಬಿಲ್ವಿದ್ಯೆಯು ದಕ್ಕಿರುವುದು ಆತ ಅಂತರತಮ ಗುರುವಿನೊಡನೆ ನಡೆಸಿದ ಅನುಸಂಧಾನದಿಂದ ಎಂಬುದು ಬಹುಮುಖ್ಯ.

ಶಬ್ದವೇಧಿ ಎಂಬ ಬಿಲ್ವಿದ್ಯೆ ಶಸ್ತ್ರಶಕ್ತಿಯ ಅತ್ಯುನ್ನತ ಶಿಖರ. ಏಕಲವ್ಯನ ಹೆಬ್ಬೆರಳು ಇಂಥ ಶಕ್ತಿ ಸಂಚಯದ ಆಗರ. ಕಾಡಿನ ನಿರ್ಜನ ದೇಶ - ನೀರವ ಕಾಲಕ್ಕೆ ಭಂಗ ಉಂಟುಮಾಡಿದ ನಾಯಿಯ ಬಾಯಿತುಂಬ ಬಾಣ ಸಿಗಿಸುವ ಏಕಲವ್ಯನ ಸಿದ್ಧಿಗೆ ಅರ್ಜುನ ಬೆದರುತ್ತಾನೆ. ತನಗೆ ಇಂಥ ಶಕ್ತಿ ಇಲ್ಲದ್ದಕ್ಕೆ ಕುದಿಯುತ್ತಾನೆ. ಈ ಬಗೆಯ ಅಲ್ಪತೆಗಳನ್ನೆಲ್ಲ ದಾಟಬಂದ ಚೇತನ ಏಕಲವ್ಯನದು. ಆದರೆ ಏಕಲವ್ಯ ಕೂಡ ಒಬ್ಬ ಮನುಷ್ಯ. ಶಸ್ತ್ರಸಂಚಯ ಅಥವಾ ಶಕ್ತಿ ಸಂಪನ್ನತೆಯ ಗರ್ಭದಲ್ಲಿ ಕೇಡು (= ಈವಿಲ್) ನಿದ್ರಿಸುತ್ತಿರುತ್ತದೆ. ಜ್ಞಾನಿಯಾದವನು ಇದನ್ನರಿತು ಮೀರಬೇಕಾಗುತ್ತದೆ. ಅಂದರೆ ಶಕ್ತಿಯ ಆಹ್ವಾನ ಮಾಡಿಕೊಂಡವರು ಶಕ್ತಿಯ ವಿಸರ್ಜನಕ್ಕೂ ಸಿದ್ಧರಿರಬೇಕಾಗುತ್ತದೆ. ಏಕಲವ್ಯನಲ್ಲಿ ಈ ಬಗೆಯ ಆಹ್ವಾನ ಮತ್ತು ವಿಸರ್ಜನ ತತ್ವಗಳನ್ನು ಮನಗಾಣಬಹುದು.

ವಿಶ್ವಾತ್ಮಕವಾಗಿ ಮಿಡಿಯುವ ಏಕಲವ್ಯನಿಗೆ ಶತ್ರುಗಳೂ ಇಲ್ಲ ಮಿತ್ರರೂ ಇಲ್ಲ! ಕಾಲದೇಶದಲ್ಲಿ ಬದುಕುತ್ತಿದ್ದರೂ ಕಾಲದೇಶಕ್ಕೆ ಅತೀತರಾಗುವ ವಿಶ್ವಾತ್ಮಕ ಪ್ರಜ್ಞೆ ಎಲ್ಲರಿಗೂ ಬರುವುದಿಲ್ಲ. ಯಾರು ತನ್ನ ಬಾಳನ್ನು ವಿಶ್ವಗುರುವಿಗೆ ನೈವೇದ್ಯ ಮಾಡಿಕೊಳ್ಳುವರೋ ಅವರು ವಿಶ್ವಾತ್ಮಕ ಚೈತನ್ಯ ಶಕ್ತಿಯಲ್ಲೇ ಒಂದಾಗುತ್ತಾರೆ. ಅಹಂಕಾರದ ಸಂಪೂರ್ಣ ನಾಶವೆಂದರೆ ಇದೇ. ಆಸೆಯ ಬೇರುಗಳನ್ನು ಕಿತ್ತು ಹಾಕಿದರೆ ನಾನು - ನೀನು ಎಂಬ ಉಭಯ ಸಂದೇಹ ಇರುವುದಿಲ್ಲ. ಇದಕ್ಕೆ ಸಂಕೇತವೋ ಎಂಬಂತೆ ಏಕಲವ್ಯನು ಶಕ್ತಿ ಸಂಚಯದ ಆಗರವಾದ ಹೆಬ್ಬೆರಳನ್ನು ಕತ್ತರಿಸಿ ಹಾಕುವ ಪ್ರಸಂಗವಿದೆ. ಇದನ್ನು ಗುರುದಕ್ಷಿಣೆ ಎಂದು ವ್ಯಾಖ್ಯಾನಿಸುವುದು ಅಂತರತಮಗುರುವಿನೊಡನೆ ಅನುಸಂಧಾನ ನಡೆಸಿದ ಏಕಲವ್ಯ ಪ್ರತಿಭೆಗೆ ಅಪಚಾರ ಬಗೆದಂತೆ. ಇದನ್ನು ಹೀಗೂ ಹೇಳಬಹುದು : 'ಹೆಬ್ಬೆರಳು' ದ್ರೋಣಾರ್ಜುನರ ಪಾಲಿಗೆ ಗುರುದಕ್ಷಿಣೆ. ಏಕಲವ್ಯನ ಪಾಲಿಗೆ ಗುರು ನೈವೇದ್ಯ. ಬೆರಳ್ಗೆ ಕೊರಳ್ ನಾಟಕದಲ್ಲಿ ಏಕಲವ್ಯನ ಒಳಗಣ್ಣಿಗೆ ಕಾಣುವ ಸರ್ಪಜಡೆ - ಬಾಹುಗಳ ನೀಲವರ್ಣದ ಕೃಷ್ಣದೇಹಿಯ ರೂಪಕವು ವಿಶ್ವಾತ್ಮಕ ಚೈತನ್ಯಶಕ್ತಿಯ ಪ್ರತೀಕವಾಗಿದೆ. ಯುದ್ಧಾಕಾಂಕ್ಷೆಯಿಂದ ಕೂಡಿದ ವ್ಯಕ್ತಿಗಳ (= ರಾಷ್ಟ್ರಗಳ) ಶಕ್ತಿ ಸಂಚಯಕ್ಕಿಂತಲೂ, ಯುದ್ಧ ನಿರಸನದಿಂದ ಕೂಡಿದ ವ್ಯಕ್ತಿಗಳ (= ರಾಷ್ಟ್ರಗಳ) ಶಕ್ತಿ ಸಂಗಮವೇ ಮಿಗಿಲಾದುದೆಂಬ ವಿನೂತನ ಕಾಣ್ಕೆಯನ್ನು ಬಿತ್ತರಿಸುತ್ತಿರುವ ಈ ನಾಟಕ 'ಇದು ನಿಚ್ಚಂ ಪೊಸತು' ಎಂಬಂತಿದೆ. ಇದು ಕ್ರಾಂತಿಗೆ

ಶಾಂತಿಯನೂಡುವ ಕುವೆಂಪುವೆಂಬ ಕಾಜಾಣ ಕೂಗಿದ ಕೂಗು !

*ಹೊಸಕೋಟೆ* **ವಿ. ಚಂದ್ರಶೇಖರ ನಂಗಲಿ**

**ಹೊಸತಿನ ಹೊಸತನದ ಕುರಿತಾಗಿ...**

ಕರ್ನಾಟಕದ ವಿಶ್ವವಿದ್ಯಾಲಯಗಳ ಅವ್ಯವಸ್ಥೆಗಳ ಮೇಲೇರಿ ವ್ಯವಸ್ಥಿತವಾಗಿ ವಿವರಣೆಗಿಳಿದ ಸಂಪಾದಕೀಯದ ಮೊತ್ತ ಮೊದಲ ಮಾತು ಕಿವಿಗೆ ಬೀಳುತ್ತಲೇ ಅತ್ತಲೊಮ್ಮೆ ನೋಡದಿರಲ ಸಾಧ್ಯವೆನ್ನಿಸಿದುದಕೆ ಏಪ್ರಿಲ್ ಸಂಚಿಕೆ ಸಾಕ್ಷಿಯಾಯಿತು. ಕಳೆದ ಮಾಸಿಕವನ್ನೇ ಪೂರ್ತಿಗೊಳಿಸಲೊಲ್ಲದ ಸಮಯಾಭಾವದ ತುರ್ತು ಸಂದರ್ಭದಲ್ಲಿ ಲಟ್ಟನೆ ಇಂತಹ ಪರಿಸ್ಥಿತಿ ಎದುರಾದುದರಿಂದ ಏದುಸಿರು ಬಿಡುವ ಸ್ಥಿತಿಯೇನೂ ಉಂಟಾಗಲಿಲ್ಲ ಅಂದರೆ ನೀವು ನಂಬುತ್ತೀರೊ ಇಲ್ಲವೊ ನಾಕಾಣೆ. ಆದರೆ ನಾನು ಓದಿ ಪೂರ್ತಿಗೊಳಿಸುವ ಮೊದಲೇ ಶಹಭಾಸ್‌ಗಿರಿಯ ಉದ್ಗಾರ ಹೊರಬಿದ್ದಾಗಿದೆ.

ಏಪ್ರಿಲ್ ಒಂದರಂದೇ ತಲಪಿ ಪವಾಡಗೈದ ಈ ಸಂಚಿಕೆ ಹೊರನೋಟದಲ್ಲೇ ಸೆರೆಹಿಡಿದುದೂ, ಹಿಡಿದೊಡನೆಯೇ ಒಳದೃಷ್ಟಿ ಹರಿದು ಓದಿಸಿಕೊಂಡುದೂ ಈ ಸಂಚಿಕೆಯ ವೈಶಿಷ್ಟ್ಯವೆನ್ನಲು ಹೆಮ್ಮೆಪಡದಿರುವುದಿಲ್ಲ. ಸಾಹಿತ್ಯ ಪ್ರಕಾಶನದ ವಿಭಾಗದಲ್ಲಿ ಕ್ರಾಂತಿ ಕಹಳೆ ಊದಿ ನಾಂದಿ ಹಾಡಿ ಕರ್ನಾಟಕದಾದ್ಯಂತ ಮನೆ ಮಾತಾಗಿ ಬೆಳಕು ಚೆಲ್ಲಿದ ನವಕರ್ನಾಟಕ ಪಬ್ಲಿಕೇಷನ್ಸ್ ಸಂಸ್ಥೆಯ ಮುಖವಾಣಿ 'ಹೊಸತು' ಎಂದಿರುವ ಹಿನ್ನೆಲೆಯೇ ಇದರ ಮೂಲ ಕಾರಣವಿರಬಹುದೇ ಎಂಬ ಊಹನೆ ನಿಮ್ಮದಾಗಿದ್ದರೆ ಅದನ್ನು ಅಲ್ಲಗಳೆಯುವುದಿಲ್ಲ. ಬದಲಿಗೆ ಇನ್ನೂ ಹಲವು ಕಾರಣಗಳನ್ನು ಮೈಗೂಡಿಸಬೇಕಾಗಿ ಬರುತ್ತದೆ.

ನೇಮಿಚಂದ್ರರ ತಂತ್ರಜ್ಞಾನದಿಂದ ಮೂಡಿಬಂದ ಆಕರ್ಷಕ ಮುಖಚಿತ್ರ ಸಂಭೂತೆ – ಅಪೂರ್ವ ಮಹಿಳಾ ಹೋರಾಟಗಾರ್ತಿ ಭಾಂವ್ರಿದೇವಿಯವರ ಸಂದರ್ಶನ ಲೇಖನ ವಿವಿಧ ಭಂಗಿಯ ಸಚಿತ್ರ ವಿವರಣೆಗಳುಳ್ಳ ಸಮಗ್ರ ಮಾಹಿತಿಗಳೆಡೆಗೆ ಕೊಂಡೊಯ್ಯುತ್ತದೆ. ಒಂದಿಗೇ ಆದರ್ಶತೆಗಳ ಅನುಷ್ಠಾನಕ್ಕೆ ಅಡ್ಡಿಯಾಗುತ್ತಿರುವ ಸಾಮಾಜಿಕ ಕಟ್ಟುಪಾಡುಗಳನ್ನೂ ತೆರೆದಿಡುತ್ತದೆ.

ಇದೇ ಫೆಬ್ರವರಿಯಲ್ಲಿ ವಿಧಿವಶರಾದ ಮಾರ್ಕಿಸ್ಟ್ ತತ್ವ ಪ್ರತಿಪಾದಕ - ಮೇಲ್ಮಟ್ಟದ ಜನನಾಯಕ ಸರಳ ತತ್ವನಿಷ್ಠಕ ಅಡ್ಡೂರು ಶಿವಶಂಕರರಾವ್ ಅವರದೇ ಆದ ಹಿಂದಿನ ಲೇಖನವೊಂದನ್ನು ಈ ಸಂಚಿಕೆಯಲ್ಲಿ ಪ್ರಕಟಿಸಿ ನುಡಿನಮನ ನೀಡಿದ ರೀತಿ ಹೊಸತಿಗೆ ಹೊಳಪಿನ ಕ್ರಾಂತಿ ನೀಡಿದೆ. 'ಭಾರತೀಯ ಬ್ಯಾಂಕಿಂಗ್ ಪದ್ಧತಿ' ಎಂಬ ಡಾ|| ಪಿ. ಕೆ. ಕುಲಕರ್ಣಿಯವರ ಸರಳ ವಿವರಣೆ ನಮ್ಮ ದೃಷ್ಟಿಯನ್ನು ಹಣಕಾಸು ಸಮತೋಲನದೆಡೆಗೆ ಸೆಳೆದೊಡನೆ - ಆವಕ ಜಾವಕ ಕಿರುಪಟ್ಟಿಯನ್ನೊಳಗೊಂಡ ಬಜೆಟ್ ೨೦೧೩ ಎಂಬ ಕೆ. ಎಸ್. ಪಾರ್ಥಸಾರಥಿಯವರ ಸಮ್ಮಿಶ್ರ ಸರಕಾರದ ಕುರಿತಾದ ವಿಶ್ಲೇಷಣ ಬರಹ ಚಿಂತನೆಗೆ ಮನ ನೀಡುತ್ತದೆ.

ಮಹಾರಾಷ್ಟ್ರದ ಮನ್‌ಗಾವ್ ಎಂಬಲ್ಲಿಯ ಹೆಣ್ಮಗಳು ಶೋಭಾ ಪ್ರಮೋದ್‌ರವರ 'ಕವಿತೆ-ಕಳೆದು ಹೋಗಿದ್ದಾಳೆ' ಎನ್ನುವ ಅರ್ಥವತ್ತಾದ ಶೀರ್ಷಿಕೆಯಿಂದ ಹೌದೇ ಎಂಬ ಮರುಪ್ರಶ್ನೆ ಪಡೆಯುವಂತಿದೆ. ಅಭಿನಂದನೆಗಳು.

ಕಾಸರಗೋಡು **ಕೀರಿಕ್ಕಾಡು ವನಮಾಲ ಕೇಶವಭಟ್ಟ**

ಅತಂತ್ರನಾದ ಮತದಾರ ಏನುತಾನೇ ಮಾಡಿಯಾನು ? ಅತಂತ್ರ ಸರ್ಕಾರವನ್ನೇ ಚುನಾಯಿಸುತ್ತಾನೆ. ಸ್ಥಳೀಯ ಸಂಸ್ಥೆಗಳ ಚುನಾವಣೆಯನ್ನು ಅವಲೋಕಿಸಿರುವ ಸಿದ್ದನಗೌಡ ಪಾಟೀಲರ ಸಂಪಾದಕೀಯ ಇಂದಿನ ಚುನಾವಣೆಗಳ ದಿಕ್ಕನ್ನು ಸಮರ್ಥವಾಗಿ ತೋರಿಸಿದೆ. ನೆಮ್ಮದಿಯ ನಾಳೆ ನಮ್ಮದೆಂಬ ನಿರೀಕ್ಷೆಯೇ ಹುಸಿಯಾಗುತ್ತಿದೆ, ಈ ಸಂಪಾದಕೀಯಕ್ಕೆ ಪೂರಕವಾದಂತೆ ಅನಂತ ಕಲ್ಲೋಳ ಅವರ ನಮ್ಮ ಆಯ್ಕೆ ಯಾವ ಲಾಯಕೆ? ಲೇಖನ ಮೂಡಿಬಂದಿದೆ. ಚಿತ್ರವೂ ಸೊಗಸಾಗಿದೆ.

ಕಡೆಯ ಹಿಂದಿನ ಪುಟದ ಟಿ. ಎನ್. ವಿಶ್ವೇಶ್ವರಯ್ಯ ಅವರ ಪರಿಚಯ ಲೇಖನ ಸಂಚಿಕೆಗೆ ಮೆರಗು ತಂದಿದೆ. ಲೇಖಕರ ವಿಳಾಸದೊಂದಿಗೆ, ಕಲಾವಿದರ ಸಂಪರ್ಕಕ್ಕಾಗಿ ವಿಳಾಸ ಹಾಗೂ ದೂರವಾಣಿ ಸಂಖ್ಯೆ ನೀಡಿದಲ್ಲಿ ಬಹಳ ಉಪಕಾರವಾಗುತ್ತದೆಂಬುದು ನನ್ನ ಅಭಿಪ್ರಾಯ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

## ಸುದ್ದಿ ಚಿತ್ರ



*ಲೋಕಾರ್ಪಣೆಯ ದೃಶ್ಯ*

*ಡಾ|| ವಿಜಯಾ ಅವರಿಗೆ ಸನ್ಮಾನ*



ವಿಶ್ವ ಪುಸ್ತಕ ದಿನಾಚರಣೆಯ ಅಪೂರ್ವ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನ, ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ, ಅಂಕಿತ ಪುಸ್ತಕ ಹಾಗೂ ಮನೋಹರ ಗ್ರಂಥಮಾಲೆ ಪ್ರಕಟಿಸಿರುವ ಪುಸ್ತಕಗಳ ಲೋಕಾರ್ಪಣೆ ಕಾರ್ಯಕ್ರಮ ದಿನಾಂಕ ೨೩-೪-೨೦೧೩ರಂದು ನಗರದ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್' ಸಭಾಂಗಣದಲ್ಲಿ ಪ್ರಸಿದ್ಧ ಸಾಹಿತಿಗಳಾದ ಡಾ|| ಎಚ್. ಎಸ್. ವೆಂಕಟೇಶಮೂರ್ತಿ ಅವರಿಂದ ನೆರವೇರಿತು. ವಿವಿಧ ಸಂಘ ಸಂಸ್ಥೆಗಳ ಜಂಟಿ ಆಶ್ರಯದಲ್ಲಿ ನಡೆದ ಈ ಸಮಾರಂಭದಲ್ಲಿ ಹಿರಿಯ ಲೇಖಕರು, ಪ್ರಕಾಶಕರು ಹಾಗೂ ಪತ್ರಕರ್ತೆಯೂ ಆಗಿರುವ ಡಾ|| ವಿಜಯಾ ಅವರನ್ನು ಕರ್ನಾಟಕದ ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳಾದ ಶ್ರೀ ಎಚ್. ಎನ್. ನಾಗಮೋಹನ ದಾಸ್ ಅವರು ಗೌರವಿಸಿ ಸನ್ಮಾನಿಸಿದರು. ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ, ಜನಪ್ರಿಯ ವೈದ್ಯೆ ಡಾ|| ವಸುಂಧರಾ ಭೂಪತಿ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷರಾದ ಡಾ|| ರಮಾಕಾಂತ ಜೋಶಿ ಮುಖ್ಯ ಅತಿಥಿಗಳಾಗಿದ್ದರು.

### ಲೋಕಾರ್ಪಣೆಗೊಂಡ ಕೃತಿಗಳು

| | |
|---|---|
| ಹೊಸಹಾದಿಯ ಹರಿಕಾರ ಹ್ಯೂಗೋ ಚಾವೆಜ಼್ | - ಸಿ. ಆರ್. ಕೃಷ್ಣರಾವ್ |
| ಕಂಪ್ಯೂಟರ್ ಪ್ರಪಂಚ | - ಟಿ. ಜಿ. ಶ್ರೀನಿಧಿ |
| ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳುವುದು ಹೇಗೆ ? | - ಜೆ. ಆರ್. ಲಕ್ಷ್ಮಣರಾವ್ |
| ಇಂದ್ರಜಾಲದ ಅಂತರಂಗ | - ಜಿ. ವಿ. ಗಣೇಶಯ್ಯ |
| ಚುನಾವಣೆ, ಮತದಾರ ಮತ್ತು ಮಾಹಿತಿ ಹಕ್ಕು | - ವೈ. ಜಿ. ಮುರಳೀಧರನ್ |
| ಗಿರೀಶ್ ಕಾರ್ನಾಡ್ ಹಾಗೂ ಭಾರತೀಯ ರಂಗಭೂಮಿ | - ಜಿ. ಎಸ್. ಆಮೂರ |
| ಮಕ್ಕಳಿಗಾಗಿ ಮತ್ತೆ ಹೇಳಿದ ಬೀರಬಲ್ಲನ ಕತೆಗಳು | - ಎನ್. ಪ್ರಭಾ |
| ಮಕ್ಕಳಿಗಾಗಿ ಮತ್ತೆ ಹೇಳಿದ ನಸಿರುದ್ದೀನನ ಕತೆಗಳು | - ಪ್ರಕಾಶ್ ಕಂಬತ್ತಳ್ಳಿ |

**ಜಾಗತಿಕ ಆರ್ಥಿಕ ಬಿಕ್ಕಟ್ಟು**

ಬಂಡವಾಳಶಾಹಿ ಜಾಗತೀಕರಣವೇ ವಿಶ್ವದ ಎಲ್ಲ ಆರ್ಥಿಕ ಸಂಕಷ್ಟಗಳಿಗೂ ಸಿದ್ಧೌಷಧವೆಂಬ ವಿಶ್ವ ಬ್ಯಾಂಕ್, ವಿಶ್ವ ವಾಣಿಜ್ಯ ಸಂಸ್ಥೆ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ನಡೆಸಿದ ಪ್ರಚಾರಕ್ಕೆ ಒಲಿಯದ ರಾಷ್ಟ್ರಗಳ ಸಂಖ್ಯೆ ವಿರಳ. ಸೋವಿಯತ್ ಒಕ್ಕೂಟದ ವ್ಯವಸ್ಥೆಯೂ ಪತನಗೊಂಡಾಗ ಬಂಡವಾಳಶಾಹಿ ಶೋಷಣೆಗೆ ಕಡಿವಾಣವೇ ಇಲ್ಲದಂತಾಯಿತು. ತೀವ್ರ ಪೈಪೋಟಿಯ ಮುಕ್ತ ಮಾರುಕಟ್ಟೆ ವ್ಯವಸ್ಥೆಯ ಗರ್ಭದಲ್ಲೇ ತೀವ್ರ ಬಿಕ್ಕಟ್ಟು ಹುಟ್ಟಿ, ಸ್ಫೋಟಗೊಳ್ಳುವ ಪರಿಕಲ್ಪನೆಯನ್ನು ೧೫೦ ವರ್ಷಗಳ ಹಿಂದೆಯೆ ಕಾರ್ಲ್ ಮಾರ್ಕ್ಸ್ ಹೊಂದಿದ್ದು, ಅದು ಎಷ್ಟು ನಿಖರ ವೆಂಬುದನ್ನು ೨೦೦೮ರಲ್ಲಿ ಅಮೆರಿಕಾದಲ್ಲಿ ಪ್ರಾರಂಭವಾದ ಆರ್ಥಿಕ ಬಿಕ್ಕಟ್ಟು ಸ್ಪಷ್ಟಪಡಿಸಿತು. ಲೀಮನ್ ಬ್ರದರ್ಸ್, ಮೆರಿಲ್ ಲಿಂಚ್ ಇವೇ ಮೊದಲಾದ ಬ್ಯಾಂಕುಗಳು, ಹಣಕಾಸು ಸಂಸ್ಥೆಗಳು ಅಮೆರಿಕಾದಲ್ಲಿ ೨೦೦೮-೨೦೧೨ರ ಅವಧಿಯಲ್ಲಿ ದಿವಾಳಿಯಾದವು. ಅನೇಕ ಖಾಸಗಿ ಉದ್ದಿಮೆಗಳು ನೆಲ ಕಚ್ಚಿದವು. ಈ ಬೆಳವಣಿಗೆಗಳೆಲ್ಲ ಬಿಕ್ಕಟ್ಟಿನ ಆರಂಭದ ಸೂಚನೆ ಮಾತ್ರವಾಗಿದ್ದವು. ಜಾಗತೀಕರಣದ ವ್ಯವಸ್ಥೆಯಲ್ಲಿ ಆರ್ಥಿಕ ಬಿಕ್ಕಟ್ಟು ಕೂಡ ಜಾಗತೀಕರಣವಾಗುವುದು ಸಹಜವೇ. ಅಮೆರಿಕಾದ ಆರ್ಥಿಕ ಬಿಕ್ಕಟ್ಟು ನಂತರದಲ್ಲಿ ಯೂರೋಪಿನ ರಾಷ್ಟ್ರಗಳನ್ನು ಆವರಿಸಿರುವುದು, ಅದರ ಪರಿಣಾಮಗಳನ್ನು ಜಾಗತೀಕರಣದ ಪಾಶಕ್ಕೆ ಸಿಲುಕಿರುವ ಎಲ್ಲ ರಾಷ್ಟ್ರಗಳೂ ಅನುಭವಿಸುತ್ತಿರುವುದು ಬಂಡವಾಳಶಾಹಿ ವ್ಯವಸ್ಥೆ ತಾನು ಸೃಷ್ಟಿಸಿರುವ ಸಮಸ್ಯೆಗಳಿಗೆ ತಾನೇ ಪರಿಹಾರ ಕಂಡುಕೊಳ್ಳಲು ಅಶಕ್ತ ಎಂಬುದನ್ನು ಖಚಿತಗೊಳಿಸುತ್ತದೆ.

**ಜಾಗತಿಕ ಹೋರಾಟಗಳು**

ಜಾಗತೀಕರಣಗೊಂಡ ಆರ್ಥಿಕ ವ್ಯವಸ್ಥೆಯು ತನ್ನೊಂದಿಗೆ ಹುಟ್ಟುವ ಬಿಕ್ಕಟ್ಟನ್ನೂ ಜಾಗತೀಕರಣಗೊಳಿಸುವುದರಿಂದ ಈ ವ್ಯವಸ್ಥೆಯ ವಿರುದ್ಧದ ಹೋರಾಟಗಳೂ ಜಾಗತೀಕರಣಗೊಳ್ಳುತ್ತವೆ. ಅಮೆರಿಕಾದ ಜನಸಾಮಾನ್ಯರಲ್ಲಿ ತಮ್ಮ ವ್ಯವಸ್ಥೆಯಲ್ಲಿರುವ ಆರ್ಥಿಕ ಅಸಮಾನತೆಯ ಬಗ್ಗೆ ತೀವ್ರ ಆಕ್ರೋಶ ಹುಟ್ಟಿದೆ. ಕೇವಲ ಶೇಕಡ ೧ರಷ್ಟು ಶ್ರೀಮಂತರು ಶೇಕಡ ೯೯ರಷ್ಟು ಜನರನ್ನು ಸುಲಿಗೆ ಮಾಡುತ್ತಿದ್ದಾರೆ, ನ್ಯೂಯಾರ್ಕ್‌ನ ವಾಲ್‌ಸ್ಟ್ರೀಟ್‌ನ ಆರ್ಥಿಕ ಸಂಸ್ಥೆಗಳೇ ತಮ್ಮ ದುಃಸ್ಥಿತಿಗೆ ಕಾರಣ ಎಂಬ ಸತ್ಯದ ಅರಿವು ಜನರಲ್ಲಿ ಉಂಟಾಗಿದೆ. 'ವಾಲ್‌ಸ್ಟ್ರೀಟ್‌ಅನ್ನು ಆಕ್ರಮಿಸಿಕೊಳ್ಳಿ' ಎಂಬ ರಣಕಹಳೆಯೂದಿ ಬೀದಿ ಕಾಳಗಕ್ಕಿಳಿದಿದ್ದಾರೆ. ಈ ಹೋರಾಟ ಕಾಡ್ಗಿಚ್ಚಿನಂತೆ ಇಡೀ ಅಮೆರಿಕಾವನ್ನೇ ಆಕ್ರಮಿಸಿರುವುದಲ್ಲದೆ ದೇಶ ದೇಶಗಳಿಗೂ ಹಬ್ಬಿ ಸರ್ಕಾರಗಳನ್ನು ಮತ್ತು ಕಾರ್ಪೊರೇಟ್ ದಣಿಗಳನ್ನು ಕಂಗೆಡಿಸಿದೆ. ಆರ್ಥಿಕ ಬಿಕ್ಕಟ್ಟನ್ನೆದುರಿಸಲಾಗದೆ ಗ್ರೀಸ್, ಇಟಲಿ, ಸ್ಪೇನ್, ಫ್ರಾನ್ಸ್, ಪೋರ್ಚುಗಲ್ ರಾಷ್ಟ್ರಗಳಲ್ಲಿ ಸರ್ಕಾರಗಳುರುಳಿವೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಬಿಕ್ಕಟ್ಟು ಹೆಚ್ಚಿದಂತೆಲ್ಲ ಅದರ ಪ್ರಜಾಪ್ರಭುತ್ವದ ಮುಖವಾಡ ಕಳಚಿಬಿದ್ದು, ಅದರ ದಮನಕಾರಿ ಪ್ರವೃತ್ತಿ ಜಾರಿಗೊಳ್ಳುತ್ತದೆ. ಕಾರ್ಮಿಕರ ಹಕ್ಕುಗಳು ಮತ್ತು ಮಾನವ ಹಕ್ಕುಗಳ ಮೇಲಿನ ದಾಳಿ ನಿತ್ಯ ಕಾಯಕವಾಗುತ್ತದೆ. ಯೂರೋಪಿನ ರಾಷ್ಟ್ರಗಳ ಕಾರ್ಮಿಕ ಹೋರಾಟಗಳು ವರ್ಗ ಸಂಘರ್ಷವಾಗಿ ಬೆಳೆಯುತ್ತಿವೆ. ಯೂರೋಪ್ ರಾಷ್ಟ್ರಗಳ ಕಾರ್ಮಿಕ ವರ್ಗ ಇತ್ತೀಚೆಗೆ ನಡೆಸಿದ ಒಂದು ದಿನದ ಸಾರ್ವತ್ರಿಕ ಮುಷ್ಕರವೇ ಇದಕ್ಕೆ ನಿದರ್ಶನ. 'ವಿಶ್ವ ಕಾರ್ಮಿಕರೇ ಒಂದಾಗಿ, ಸಂಕೋಲೆಯನ್ನಲ್ಲದೆ ನೀವು ಏನನ್ನೂ ಕಳೆದುಕೊಳ್ಳುವುದಿಲ್ಲ' ಎಂಬ ಘೋಷಣೆ ಹೆಚ್ಚು ಅರ್ಥಪೂರ್ಣವಾಗುವ ಸನ್ನಿವೇಶ ಹತ್ತಿರ ಬರುತ್ತಿದೆ.

**ಅಸಮಾನತೆ ಮತ್ತು ಬಡತನ**

೧೯೯೧ರ ನಂತರ ಭಾರತ ದೇಶದ ಕೇಂದ್ರದ ಎಲ್ಲ ಅಧಿಕಾರಾರೂಢ ಸರ್ಕಾರಗಳೂ ಅಮೆರಿಕನ್ ಸಾಮ್ರಾಜ್ಯಶಾಹಿಯ ಬಾಲಬಡುಕರಂತೆ ವರ್ತಿಸುತ್ತಿರುವುದು, ದೇಶದ ಎಲ್ಲ ನೈಸರ್ಗಿಕ ಸಂಪತ್ತನ್ನೂ, ಮಾನವ ಸಂಪನ್ಮೂಲಗಳನ್ನೂ ಹರಾಜು ಮಾಡುತ್ತಿರುವುದು, ಸಹಸ್ರಾರು ಎಕರೆ ಭೂಮಿಯನ್ನು ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ಸಂಸ್ಥೆಗಳಿಗೆ ಧಾರೆ ಎರೆಯುತ್ತಿರುವುದು, ಒಟ್ಟಾರೆ ಕೊಳ್ಳೆ ಹೊಡೆಯುವ ಜನರಿಗೆ ದೇಶದ ಹೆಬ್ಬಾಗಿಲನ್ನು ತೆರೆದಿಟ್ಟಿರುವುದು ಎಲ್ಲರ ಗಮನಕ್ಕೆ ಬಂದಿರುವ ವಿಚಾರ. ಈ ಸರ್ಕಾರಗಳ ಎರಡು ದಶಕಗಳ ಸಾಧನೆಯೆಂದರೆ ಶ್ರೀಮಂತರನ್ನು ಭಾರಿ ಶ್ರೀಮಂತರನ್ನಾಗಿಸಿರುವುದು ಮತ್ತು ಬಡವರನ್ನು ಕಡುಬಡವರನ್ನಾಗಿಸಿರುವುದು. ಅರ್ಜುನ್ ಸೇನ್ ಗುಪ್ತ ಅವರ ವರದಿ ಅಂಕಿ-ಅಂಶಗಳೊಂದಿಗೆ ಇದನ್ನು ದೃಢಪಡಿಸಿದೆ.

# ಉದ್ಯೋಗ ಸ್ವರೂಪದ ಬದಲಾವಣೆ ಮೇ ದಿನದ ಚಿಂತನೆ





ಈ ಸರ್ಕಾರಗಳು ಉದ್ಯೋಗಪತಿಗಳೊಂದಿಗೆ ಕೂತು ದೇಶದ ಕೈಗಾರಿಕಾ ನೀತಿಯ ಬಗ್ಗೆ ಚರ್ಚಿಸುತ್ತಾರೆ. ಆದರೆ ಅವುಗಳಿಗೆ ಕಾರ್ಮಿಕ ಪ್ರತಿನಿಧಿಗಳ ಜೊತೆ ಕೂತು ಸರ್ಕಾರದ ಕಾರ್ಮಿಕ ನೀತಿಗಳೇನು ಎಂದು ಚರ್ಚಿಸಲು ಸಮಯವಿಲ್ಲ. ಕರ್ನಾಟಕ ಸರ್ಕಾರದ ನೀತಿ-ರೀತಿಗಳೂ ಇದಕ್ಕಿಂತ ವಿಭಿನ್ನವಾದುವೇನಲ್ಲ.



**ಸಂವಿಧಾನ – ಸಾಮಾಜಿಕ ನ್ಯಾಯ**

ಸಾಮಾಜಿಕ ನ್ಯಾಯ ನಮ್ಮ ಸಂವಿಧಾನದ ಆಶಯ. ಕಾರ್ಮಿಕರ ಜೀವನದಲ್ಲಿ ಕೆಲಸದ ಭದ್ರತೆ ಮೊದಲನೇ ಆದ್ಯತೆಯೆಂದು ಸರ್ವೋಚ್ಚ ನ್ಯಾಯಾಲಯ ಬಹಳ ಹಿಂದೆಯೆ ಅಭಿಪ್ರಾಯ ವ್ಯಕ್ತಪಡಿಸಿತ್ತು. ಹಾಗೆಯೇ ಸಮಾನ ಕೆಲಸಕ್ಕೆ ಸಮಾನ ವೇತನವೆಂಬುದೂ ಸಂವಿಧಾನದ ನಿರ್ದೇಶನ ತತ್ವಗಳಲ್ಲೊಂದು. ಸಂಘಟನೆಯ ಹಕ್ಕು ಮೂಲಭೂತ ಹಕ್ಕು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ನಡೆಯುವ ಶ್ರಮ ಶೋಷಣೆಯನ್ನು ಗಮನದಲ್ಲಿಟ್ಟು ಸಾಮಾಜಿಕ ನ್ಯಾಯದ ನೆಲಗಟ್ಟಿನಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ಅನೇಕ ತೀರ್ಪುಗಳು ಅಂದಿನ ಕಾಲಘಟ್ಟದ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯ ಅಭಿವ್ಯಕ್ತಿಯಾಗಿತ್ತು. ಮೊದಲನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ಅಧ್ಯಕ್ಷರಾಗಿದ್ದ ನ್ಯಾಯಮೂರ್ತಿ ಪಿ. ಬಿ. ಗಜೇಂದ್ರ ಗಡ್ಕರ್ ಅವರು ಗುತ್ತಿಗೆ ಕಾರ್ಮಿಕ ಪದ್ಧತಿಯು ಕಾರ್ಮಿಕ ಶೋಷಣೆಯ ಅನಿಷ್ಟ ವ್ಯವಸ್ಥೆಯೆಂದು ಜರೆದು ಅದನ್ನು ತೊಡೆದುಹಾಕಲು ಸೂಕ್ತ ಕಾಯ್ದೆ ತರಲು ೧೯೬೯ರಲ್ಲಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದ ತಮ್ಮ ವರದಿಯಲ್ಲಿ ಶಿಫಾರಸ್ಸು ಮಾಡಿದ್ದರು. ಇದರ ಫಲವಾಗಿಯೇ ೧೯೭೦ರಲ್ಲಿ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಹಾಗೂ ರದ್ದತಿ) ಕಾಯ್ದೆ ಜಾರಿಗೆ ಬಂದದ್ದು. ಈ ಕಾಯ್ದೆ ಜಾರಿಗೆ ಬಂದ ನಂತರ ಈ ಸುಲಿಗೆ ಪದ್ಧತಿಯನ್ನು ನಿಯಂತ್ರಿಸಲಾಗಿದೆಯೇ ಅಥವಾ ಅದು ರದ್ದಾಗಿದೆಯೇ ಎಂದು ವಿಶ್ಲೇಷಿಸಿದಾಗ ಇದರ ಹಾವಳಿಯ ಪ್ರಮಾಣ ದಿನೇ ದಿನೇ ಹೆಚ್ಚುತ್ತಿರುವುದನ್ನು ಕಾಣಬಹುದು.

**ಸರ್ವೋಚ್ಚ ನ್ಯಾಯಾಲಯ – ಸಾಮಾಜಿಕ ನ್ಯಾಯ**

ಶಂಕರ್ ವಿರುದ್ಧ - ಯೂನಿಯನ್ ಆಫ್ ಇಂಡಿಯಾ (ಎ.ಐ.ಆರ್. ೧೯೮೫ ಎಸ್.ಸಿ. ಪುಟ ೬೭೦) ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ದೇಶಕ್ಕೆ ಸ್ವಾತಂತ್ರ್ಯ ಬಂದು ನಲವತ್ತು ವರ್ಷಗಳಾದರೂ ದೊಡ್ಡ ದೊಡ್ಡ ಕಂಪನಿಗಳೂ, ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳೂ ಸೇರಿದಂತೆ, ಗುತ್ತಿಗೆದಾರರ ಮೂಲಕ ಕಾರ್ಮಿಕರ ನೇಮಕಾತಿ ಮಾಡುತ್ತಿರುವುದರ ಬಗ್ಗೆ ಹುಬ್ಬೇರಿಸಿ, ಇದೊಂದು ಪ್ರಾಚೀನ ಅನಿಷ್ಟ ಪದ್ಧತಿಯೇ ಅಲ್ಲದೆ ಹೊಸ ನಮೂನೆಯ ಜೀತಪದ್ಧತಿ ಎಂದು ಗುರುತಿಸಿ ಈ ಪದ್ಧತಿಯ ರದ್ದತಿಯೇ ಕಾರ್ಮಿಕರಿಗೆ ಕೊಡಬಹುದಾದ ಸಾಮಾಜಿಕ ನ್ಯಾಯವೆಂದು ಸಾರಿತ್ತು. ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಅವರು ಗುತ್ತಿಗೆ ಕಾರ್ಮಿಕ ವ್ಯವಸ್ಥೆಯನ್ನು ಕಟುವಾಗಿ ಟೀಕಿಸಿದ್ದರು. ನಂತರ ನ್ಯಾಯಮೂರ್ತಿ ಎಸ್. ಬಿ. ಮಜುಂದಾರ್ ಅವರು ಗುಜರಾತ್ ಎಲೆಕ್ಟ್ರಿಸಿಟಿ ಬೋರ್ಡ್ (ಎ.ಐ.ಆರ್. ೧೯೯೫ ಎಸ್.ಸಿ. ಪುಟ ೧೮೯೩) ಪ್ರಕರಣದಲ್ಲಿ ಗುತ್ತಿಗೆ ಕಾರ್ಮಿಕ ಪದ್ಧತಿಯನ್ನು ಟೀಕಿಸುತ್ತಾ ಮನುಷ್ಯನು ಸಮಾಜದ ಎಲ್ಲ ಬೆಳವಣಿಗೆಯ ಕೇಂದ್ರ ಬಿಂದುವಾಗ ಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಿದರು.

**ಬದಲಾಗುತ್ತಿರುವ ದೃಷ್ಟಿಕೋನ**

ಗುತ್ತಿಗೆ ಕಾರ್ಮಿಕ ಪದ್ಧತಿಗೆ ಸಂಬಂಧಪಟ್ಟ ಕಾಯ್ದೆ ಜಾರಿಯಲ್ಲಿದ್ದರೂ, ಸರ್ವೋಚ್ಚ ನ್ಯಾಯಾಲಯದ ಅನೇಕ ತೀರ್ಪುಗಳು ಇದೊಂದು ಕಾರ್ಮಿಕ ಶೋಷಣೆಯ ಸಾಧನವೆಂದು ಜರೆದರೂ, ಸರ್ಕಾರಗಳಿಗೆ ಈ ವ್ಯವಸ್ಥೆಯನ್ನು ರದ್ದುಪಡಿಸಲಾಗಲೀ ಅಥವಾ ನಿಯಂತ್ರಿಸಲಾಗಲೀ ಮನಸ್ಸಿಲ್ಲ. ಜೊತೆಗೆ, ಈ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ನಿಲುವೂ ಕೂಡ ಬದಲಾಗಿದೆ. ಜಾಗತೀಕರಣ, ಹೊಸ ಆರ್ಥಿಕ ನೀತಿ, ಉದಾರೀಕರಣ ಇತ್ಯಾದಿ ಬೆಳವಣಿಗೆಗಳ ಬಗ್ಗೆ ನ್ಯಾಯಾಲಯಗಳು ಗಮನ ಹರಿಸಿ ತೀರ್ಪು ನೀಡಬೇಕೆಂಬುದು ಸರ್ವೋಚ್ಚ ನ್ಯಾಯಾಲಯದ ಹಲವಾರು ನ್ಯಾಯಮೂರ್ತಿಗಳ ಅಭಿಮತ. ಸರ್ಕಾರಗಳ ಮತ್ತು ನ್ಯಾಯಾಲಯಗಳ ಈ ನಿಲುವು ಬಂಡವಾಳಶಾಹಿಗಳಿಗೆ ಗುತ್ತಿಗೆ ಕಾರ್ಮಿಕ ಪದ್ಧತಿಯನ್ನು ಯಥೇಚ್ಛವಾಗಿ ದುರ್ಬಳಕೆ ಮಾಡಿಕೊಳ್ಳಲು ದಾರಿ ಮಾಡಿಕೊಟ್ಟಂತಾಗಿದೆ.

**ಗುತ್ತಿಗೆ ಕಾರ್ಮಿಕ ಪದ್ಧತಿ – ಜೀತಪದ್ಧತಿಯ ಹೊಸ ರೂಪ**

ಜಾಗತೀಕರಣದ ಹಿನ್ನೆಲೆಯಲ್ಲೇ ಈ ದೇಶಕ್ಕೆ ಅತ್ಯಾಧುನಿಕ ತಂತ್ರಜ್ಞಾನದೊಂದಿಗೆ ಕಾಲಿಟ್ಟ ವಿದೇಶಿ

## ನಾ ಕನಸ ಕಾಣಬೇಕು

ಕನಸ ಕಾಣಬೇಕಂತ ನಂಗಾಸಿ
ಆದ್ರ
ನಿದ್ದಿ ಬರಾವಲ್ತು।

ಕಣ್ಣು ಮುಚ್ಚಿದರ
ಬಾಂಬು ಸಿಡಿದಂಗ
ಬಿಲ್ಡಿಂಗು ಬಿದ್ದಂಗ
ಅಂಜಿಕಿ।

ಕಣ್ಣು ಮುಚ್ಚಿದರ
ಬುಲ್ಡೋಜರು ಬಂದಂಗ
ಇದ್ದ ಅಡವಿ ಬಯಲಾದಂಗ
ಅಂಜಿಕಿ।

ಕಣ್ಣು ಮುಚ್ಚಿದರ
ದೇವರೆಸರ ದನಿ
ರಾಕ್ಕೇಸವತಾರ ಕುಣದಂಗ
ಅಂಜಿಕಿ।

ಕಯ್ ಮುಗೀತೀನಿ
ನನ್ನಿಂದ ಕಸಗೊಂಡ ನಿದ್ದೀನ ನಂಗ ಕೊಡ್ರಿ
ನಾ ಕನಸ ಕಾಣಬೇಕು।

**ಬಸವರಾಜ ಕೊಡಗುಂಟಿ**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಸೆಂಟ್ರಲ್ ಯೂನಿವರ್ಸಿಟಿ ಆಫ್ ಕರ್ನಾಟಕ, ಗುಲಬರ್ಗಾ - ೫೮೫ ೧೦೬

ಕಂಪನಿಗಳು ಉತ್ಪಾದನೆ ಹೆಚ್ಚಿಸಿ, ಅಧಿಕ ಲಾಭ ಗಳಿಸಿದರೂ, ಇವುಗಳಿಂದಾದ ಉದ್ಯೋಗ ಸೃಷ್ಟಿ ಬಹಳ ಕಡಿಮೆಯೇ. ಈ ವಿದೇಶಿ ಕಂಪನಿಗಳ ಜೊತೆ ಅನಿವಾರ್ಯವಾಗಿ ಪೈಪೋಟಿಗೆ ಇಳಿಯಬೇಕಾದ ಭಾರತೀಯ ಕಂಪನಿಗಳೂ ಕೂಡ ಆಧುನಿಕ ತಂತ್ರಜ್ಞಾನಕ್ಕೆ ಮೊರೆಹೋಗಿ ಖಾಯಂ ಕೆಲಸಗಾರರ ಸಂಖ್ಯೆಯನ್ನು ಇಳಿಸಿದ್ದು ಎಲ್ಲರಿಗೂ ತಿಳಿದಿರುವ ವಿಷಯ. ಹಾಗಾಗಿ ಜಾಗತೀಕರಣದ ಪ್ರಕ್ರಿಯೆ ಯಿಂದಾದದ್ದು ಲಕ್ಷಾಂತರ ಉದ್ಯೋಗಗಳ ನಾಶ, ಅಷ್ಟೆ. ಜೊತೆಗೆ, ಗುತ್ತಿಗೆ ಪದ್ಧತಿ, ಜೀತದಾಳುಗಳು. ಮಾಲೀಕರಿಗೀಗ ಸುಗ್ಗಿ. ಬೆಂಗಳೂರಿನಲ್ಲಿ ಇದ್ದ ಒಂದು ಹಳೆಯ ಕಂಪನಿಯ ಕಥೆ ಹೀಗಿದೆ: ಸುಮಾರು ೬೦೦ ಖಾಯಂ ಕಾರ್ಮಿಕರನ್ನು ಹೊಂದಿದ್ದ ಈ ಕಂಪನಿ ಯಲ್ಲಿ ಕಾರ್ಮಿಕ ಸಂಘವೂ ಸಾಕಷ್ಟು ಪ್ರಭಾವಶಾಲಿಯಾಗಿತ್ತು. ೧೯೯೯-೨೦೦೦ರ ಅವಧಿಯಲ್ಲಿ ಈ ಕಂಪನಿಯನ್ನು ಒಂದು ಅಂತರರಾಷ್ಟ್ರೀಯ ಕಂಪನಿ ಕೊಂಡುಕೊಂಡಿತು. ಆರು ತಿಂಗಳಲ್ಲೇ ಸ್ವಯಂ ನಿವೃತ್ತಿ ಯೋಜನೆಯಡಿ ೩೦೦ ಕಾರ್ಮಿಕರನ್ನು ಹೊರದೂಡಿತು. ನಂತರದ ಆರು ತಿಂಗಳಲ್ಲೇ ೧೮೦ ಕಾರ್ಮಿಕರನ್ನು ಹೊರಹಾಕಿತು. ಉಳಿದ ೧೨೦ ಕಾರ್ಮಿಕರನ್ನು ಮತ್ತೆ ಒಂದು ವರ್ಷದಲ್ಲಿ ಖಾಲಿ ಮಾಡಿ, ಹೊರಹೋದ ೬೦೦ ಕಾರ್ಮಿಕರು ಮಾಡುತ್ತಿದ್ದ ಉತ್ಪಾದನಾ ಕೆಲಸಗಳನ್ನು ಹೊರಗುತ್ತಿಗೆ ಅಥವಾ ಗುತ್ತಿಗೆ ಕಾರ್ಮಿಕರ ಮೂಲಕ ನಡೆಸುತ್ತಿದೆ. ವಿಪರ್ಯಾಸವೆಂದರೆ ಖಾಯಂ ಕೆಲಸಗಾರರಾಗಿ ಹೊರಹೋದ ಅನೇಕ ಕಾರ್ಮಿಕರು ಗುತ್ತಿಗೆ ಕಾರ್ಮಿಕರಾಗಿ ಕಂಪನಿಯ ಒಳಗೆ ಮತ್ತೆ ಬಂದದ್ದು. ಇದೊಂದು ರೀತಿಯ ರೂಪಾಂತರ. ಈಗ ಈ ವಿದೇಶಿ ಕಂಪನಿಗೆ ವೇತನದ ವೆಚ್ಚ ಬಹಳಷ್ಟು ಕಡಿಮೆಯಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಈಗ ಇಲ್ಲಿ ಕಾರ್ಮಿಕ ಸಂಘಟನೆಯೇ ಇಲ್ಲ, ಹಾಗಾಗಿ ಮಾಲೀಕರಿಗೆ ಯಾವ ಕಿರಿಕಿರಿಯೂ ಇಲ್ಲ.

**ಉದ್ಯೋಗ ಸ್ವರೂಪದ ಬದಲಾವಣೆ**

ಭಾರತದಲ್ಲಿ ಸೇವಾಕ್ಷೇತ್ರ ಬೆಳೆದಂತೆಲ್ಲ ಗುತ್ತಿಗೆ ಕಾರ್ಮಿಕ ಪದ್ಧತಿಯೂ ವ್ಯಾಪಕವಾಗಿ ಬೆಳೆಯುತ್ತಿದೆ. ಸೇವಾಕ್ಷೇತ್ರದಲ್ಲಿ ಕೆಲಸದ ಭದ್ರತೆ ಬಹಳ ಕಡಿಮೆ. ಇಲ್ಲಿ ಕಾರ್ಮಿಕರ ಸಂಘಟನೆಗಳೂ ವಿರಳ. ಈ ವ್ಯವಸ್ಥೆ ಅನಾಯಾಸವಾಗಿ ಬ್ಯಾಂಕಿಂಗ್ ಕ್ಷೇತ್ರ ಮತ್ತಿತರ ಸಾರ್ವಜನಿಕ ಸೇವಾಕ್ಷೇತ್ರಗಳನ್ನು ಆವರಿಸುತ್ತಿದೆ. ವಿದೇಶಿ ಬ್ಯಾಂಕೊಂದು ಬ್ಯಾಂಕ್ ಕೆಲಸಗಳನ್ನು ಹೊರಗುತ್ತಿಗೆ ಕೊಡುವುದರ ಬಗ್ಗೆ ಒಂದು ನಿಯಮಾವಳಿಯನ್ನೇ ರಚಿಸಿಕೊಂಡುಬಿಟ್ಟಿದೆ! ಭಾರತದಲ್ಲಿನ ಈ ವಿದೇಶಿ ಬ್ಯಾಂಕ್ ಅನೇಕ ಖಾಯಂ ಕೆಲಸಗಳನ್ನು ಗುತ್ತಿಗೆ ಕಾರ್ಮಿಕರಿಂದ ಮಾಡಿಸಿಕೊಳ್ಳುತ್ತಿದೆ. ಪರಿಣಾಮವಾಗಿ, ಈ ಬ್ಯಾಂಕ್‌ನಲ್ಲಿ ಖಾಯಂ ನೌಕರರ ಸಂಖ್ಯೆ ದಿನೇ ದಿನೇ ಇಳಿಮುಖವಾಗುತ್ತಿದೆ. ಮಾಹಿತಿ ತಂತ್ರಜ್ಞಾನ ಕ್ಷೇತ್ರ ವಿದ್ಯಾವಂತ ಯುವಜನತೆಗೆ ಉದ್ಯೋಗ ನೀಡಿದೆ, ವಿದೇಶಿ ವಿನಿಮಯ ಗಳಿಕೆಯಲ್ಲಿ ಮಹತ್ತರ ಯೋಗದಾನ ನೀಡಿದೆ... ಇತ್ಯಾದಿ ಹೆಗ್ಗಳಿಕೆಗೆ ಪಾತ್ರವಾಗಿದೆ. ಈ ಕಂಪನಿಗಳ ಉದ್ಯೋಗಪತಿಗಳು ಸರ್ಕಾರಗಳ ಮೇಲೆ ಒತ್ತಡ ಹೇರಿ ಹಲವಾರು ಕಾರ್ಮಿಕ ಕಾಯ್ದೆಗಳು ಈ ಕ್ಷೇತ್ರಕ್ಕೆ ಅನ್ವಯವಾಗದಂತೆ ನೋಡಿಕೊಂಡಿದ್ದಾರೆ. ಇಲ್ಲಿಯ ಉದ್ಯೋಗಿಗಳಿಗೆ ನಿಗದಿತ ಕೆಲಸದ ವೇಳೆ ಎಂಬುದೇ ಇಲ್ಲ, ಕೆಲಸದ ಭದ್ರತೆಯಿಲ್ಲ, ಯಾವ ಕಂಪನಿಯದೋ ನೇಮಕಾತಿ ಆದೇಶ, ಇನ್ಯಾವುದೋ ಕಂಪನಿಯಲ್ಲಿ ಕೆಲಸ, ಇನ್ನೆಲ್ಲೊ ವೇತನ ವಿತರಣೆ... ಒಟ್ಟಾರೆ ಆ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರದು ಅನಿಶ್ಚಿತ ಬದುಕು. ಇವರು ಆಧುನಿಕ ಜೀತದಾಳು ಗಳೆಂದರೆ ತಪ್ಪಾಗದು. ಇಷ್ಟೆಲ್ಲಾ ಆದಾಗ್ಯೂ ಇಲ್ಲಿಯ ಉದ್ಯೋಗಿಗಳು ಸಂಘಟಿತಗೊಂಡಿಲ್ಲ.



**ಸಾರ್ವತ್ರಿಕ ಮುಷ್ಕರ – ವರ್ಗ ಜಾಗೃತಿ**

ಜಾಗತೀಕರಣ ವ್ಯವಸ್ಥೆಯಲ್ಲಿ ಮಾಲೀಕರಿಗೆ ಬೇಕಾದದ್ದು ಉದ್ದಿಮೆಗಳನ್ನು ಪ್ರಾರಂಭಿಸುವ ಸ್ವಾತಂತ್ರ್ಯ ಮಾತ್ರವಲ್ಲ, ಅವರಿಗೆ ಬೇಡವಾದಾಗ ಅವುಗಳನ್ನು ಮುಚ್ಚುವ ಹಕ್ಕು ಮತ್ತು ಇವರಿಗೆ ಖಾಯಂ ಕೆಲಸಗಾರರು ಬೇಡ. ಕಾರ್ಮಿಕ ಸಂಘಟನೆಗಳೂ ಬೇಡ. ಈ ದಿಶೆಯಲ್ಲಿ ಉದ್ದಿಮೆಪತಿಗಳು ಕಾರ್ಯತತ್ಪರರಾಗಿದ್ದಾರೆ. ಗುತ್ತಿಗೆ ಕಾರ್ಮಿಕ ಪದ್ಧತಿ ಅವರ ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸುವಂತಹ ವ್ಯವಸ್ಥೆ. ಅದನ್ನು ಬಯಸುವುದು ಬಂಡವಾಳಶಾಹಿಯ ವರ್ಗಗುಣ. ಕಾರ್ಮಿಕರ ವರ್ಗಗುಣ ಇದಕ್ಕೆ ವ್ಯತಿರಿಕ್ತವಾದ್ದು. ಆದ್ದರಿಂದಲೇ ಕಾರ್ಮಿಕ ಸಂಘಟನೆಗಳು ಗುತ್ತಿಗೆ ಕಾರ್ಮಿಕ ಪದ್ಧತಿಯ ವಿರುದ್ಧ ಸಮರ ನಡೆಸಬೇಕಾಗಿದೆ. ಆದರೆ ವಸ್ತುಸ್ಥಿತಿ ಯೆಂದರೆ ಬಹಳಷ್ಟು ಉದ್ದಿಮೆಗಳಲ್ಲಿ ಅದರಲ್ಲೂ ವಿಶೇಷ ವಾಗಿ, ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳಲ್ಲಿ ಖಾಯಂ ಕೆಲಸಗಾರರ ಸಂಘಗಳು ಗುತ್ತಿಗೆ ಕಾರ್ಮಿಕ ಪದ್ಧತಿಯನ್ನು ಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡು ಆಡಳಿತ ವರ್ಗ ದೊಂದಿಗೆ ಸಹಕರಿಸಿ ಈ ಸುಲಿಗೆ ವ್ಯವಸ್ಥೆಯ ಪಾಲುದಾರ ರಾಗಿಬಿಟ್ಟಿವೆ. ಕಾರ್ಮಿಕ ಸಂಘಗಳ ಪದಾಧಿಕಾರಿಗಳೇ ತಮ್ಮ ಬಂಧುಮಿತ್ರರಿಗೆ ಅದೇ ಕಂಪನಿಗಳಲ್ಲಿ ಗುತ್ತಿಗೆ ಕೊಡಿಸಿರುವ ನಿದರ್ಶನಗಳೂ ಬಹಳಷ್ಟಿವೆ. ಬೆಂಗಳೂರಿನ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್ (ಎಚ್.ಎ.ಎಲ್.), ಭಾರತ್ ಹೆವಿ ಎಲೆಕ್ಟ್ರಿಕಲ್ಸ್ ಲಿಮಿಟೆಡ್ (ಬಿ.ಎಚ್.ಇ.ಎಲ್.), ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್ (ಬಿ.ಇ.ಎಂ.ಎಲ್.) ಇತ್ಯಾದಿ ಸಾರ್ವಜನಿಕ ಉದ್ದಿಮೆಗಳಲ್ಲಿ ಸಹಸ್ರಾರು ಗುತ್ತಿಗೆ ಕಾರ್ಮಿಕರು ಹಲವಾರು ವರ್ಷಗಳಿಂದ ಖಾಯಂ ಕೆಲಸಗಳನ್ನು ಮಾಡುತ್ತಾ ಬಂದಿದ್ದಾರೆ. ಗುತ್ತಿಗೆ ಕಾರ್ಮಿಕರನ್ನು ಎರಡನೆಯ ದರ್ಜೆಯ ಕಾರ್ಮಿಕರಂತೆ ನಡೆಸಿಕೊಳ್ಳಲಾಗುತ್ತಿದೆ. ಈ ಪ್ರವೃತ್ತಿ ಕಾರ್ಮಿಕ ವರ್ಗದಲ್ಲಿ ಬಿರುಕು ತಂದಿದೆ. ಇದು ಮುಂದುವರಿದಲ್ಲಿ ಕಾರ್ಮಿಕರ ಐಕ್ಯತೆಯ ಮಾತು ಪೊಳ್ಳು ನುಡಿಗಳಾಗುತ್ತವೆ. ಕಾರ್ಮಿಕ ಸಂಘಗಳೂ ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ಅರಿತು ಗುತ್ತಿಗೆ ಕಾರ್ಮಿಕರ ಪರ ದನಿ ಎತ್ತಬೇಕು ಮತ್ತು ಈ ಅನಿಷ್ಟ ಪದ್ಧತಿ ಯನ್ನು ವಿರೋಧಿಸಬೇಕು. ಈ ವ್ಯವಸ್ಥೆಯನ್ನು ವಿರೋಧಿಸುವು ದೆಂದರೆ ಗುತ್ತಿಗೆ ಕಾರ್ಮಿಕರನ್ನು ಸಂಘಟಿಸುವುದು ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಅವರೊಂದಿಗೆ ಹೋರಾಡುವುದು. ಇದನ್ನು ಮಾಡದೇ ಹೋದಲ್ಲಿ ಕಾರ್ಮಿಕ ಸಂಘಗಳು ತಮ್ಮ ಪ್ರಾಬಲ್ಯ ಕಳೆದುಕೊಳ್ಳುತ್ತವೆ. ಫೆಬ್ರವರಿ ೨೦ ಮತ್ತು ೨೧ರಂದು ನಡೆದ ಎರಡು ದಿನದ ಅಖಿಲ ಭಾರತ ಮುಷ್ಕರದ ಒಂದು ಪ್ರಮುಖ ಬೇಡಿಕೆ ಗುತ್ತಿಗೆ ಕಾರ್ಮಿಕ ಪದ್ಧತಿಯ ರದ್ದತಿ. ಭಾರತದ ಕಾರ್ಮಿಕರ ವರ್ಗ ಪ್ರಜ್ಞೆ ಜಾಗೃತವಾಗಿದೆ. ಸಮ-ಸಮಾಜಕ್ಕಾಗಿ, ಸಮಾನತೆಗಾಗಿ ವರ್ಗ ಹೋರಾಟ ಈ ವರ್ಷದ ಮೇ ದಿನದ ಸಂಕಲ್ಪವಾಗಲಿ.

**ಮುರಳಿಧರ ಚಿಕ್ಕಮಗಳೂರು**
ವಕೀಲರು, ನಂ. ೮೩, ಮಲ್ಲೇಶ್ವರಂ ವೃತ್ತ, ಬೆಂಗಳೂರು - ೩

**'ರಾಜ್ಯಮಟ್ಟದ ಸರ್ವೋತ್ತಮ ಸೇವಾ ಪ್ರಶಸ್ತಿ' ಪಡೆದಿರುವ ಎಸ್. ಎಸ್. ಹೊಸಮನಿ ಅವರಿಗೆ ಅಭಿನಂದನೆಗಳು**



ಸಾರ್ವಜನಿಕ ಗ್ರಂಥಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್. ಎಸ್. ಹೊಸಮನಿ ಅವರು ಗುಲ್ಬರ್ಗಾ, ಬೀದರ್, ರಾಯಚೂರು, ಬೆಂಗಳೂರು ನಗರ ಮತ್ತು ಬೆಂಗಳೂರು ವಲಯಗಳಲ್ಲಿ ನೂತನ ಶಾಖಾ ಗ್ರಂಥಾಲಯಗಳನ್ನು ಪ್ರಾರಂಭಿಸಿದ್ದಾರೆ. ಗ್ರಂಥಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರತ್ಯೇಕ ಸ್ಪರ್ಧಾತ್ಮಕ ಪಠ್ಯಪುಸ್ತಕಗಳ ವಿಭಾಗ, ಹಿರಿಯ ನಾಗರಿಕರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ವಿಭಾಗ ಹಾಗೂ ಮೊಟ್ಟಮೊದಲು ಇ-ಗ್ರಂಥಾಲಯ ತಂತ್ರಾಂಶದ ಮೂಲಕ ಪುಸ್ತಕಗಳ ಗಣಕೀಕರಣ ಹೀಗೆ ಹಲವು ಹೊಸ ಯೋಜನೆಗಳನ್ನು ಕಾರ್ಯಗತ ಮಾಡಿರುವ ಇವರಿಗೆ ಕರ್ನಾಟಕ ಸರ್ಕಾರದವರು ಮೆಚ್ಚುಗೆ ವ್ಯಕ್ತಪಡಿಸಿ, ೨೮-೬-೧೦೧೨ರಂದು 'ಉತ್ತಮ ಗ್ರಂಥ ಪಾಲಕರ ಸೇವಾ ಪುರಸ್ಕಾರ' ನೀಡಿ ಗೌರವಿಸಿದೆ. ಪ್ರಶಸ್ತಿ ಪುರಸ್ಕೃತರನ್ನು 'ನವಕರ್ನಾಟಕ' ಮತ್ತು 'ಹೊಸತು' ಬಳಗ ಸಂತೋಷದಿಂದ ಅಭಿನಂದಿಸುತ್ತದೆ.

# ಧರಣಿ ಮಂಡಲ ಮಧ್ಯದೊಳಗೆ ...

''ಧರಣಿ ಮಂಡಲ ಮಧ್ಯದೊಳಗೆ। ದೇವ ದೇವರು ಇರುವರೆಂದರೆ। ನಮ್ಮ ದೇಶದ ಜನರು ಅವರನು। ತಮ್ಮ ಜೇಬಲಿ ತುರುಕುವರು.''

ಗಟ್ಟಿಯಾಗಿ ಹುಚ್ಚನಂತೆ ಆ ಶನಿವಾರ ಕೂಸಪ್ಪ ನಮ್ಮ ಮನೆಗೆ ಕಾಲಿರಿಸಿದ.

''ಏನು ಕೂಸಪ್ಪಾ ಭಿಕ್ಷಾಟನೆಗೆ ಹೊರಟಿದ್ದೀಯಾ ?''

''ತಮಾಷೆಯಲ್ಲ ಸರ್. ಆದರೆ ಭಿಕ್ಷಾಟನೆಯು ನಮ್ಮ ಹಸಿವಿಗಲ್ಲ, ನಮ್ಮ ದೇವರು ದಿಂಡರೂಂತ ಇದ್ದಾರಲ್ಲಾ ಅವರನ್ನು ನಮ್ಮ ದೇಶದ ಪ್ರಜೆಗಳಿಂದ ಕಾಪಾಡಲು ಆಶ್ವಾಸನೆಯ ಭಿಕ್ಷೆ ಬೇಡಲು ಹೊರಟಿದ್ದೇನೆ.''

''ಇದೇನೋ ನಿನ್ನ ಹೊಸ ಅವತಾರ ?''

''ಅವತಾರವಲ್ಲ ಸರ್, ನಮ್ಮ ದೇವರುಗಳನ್ನು ಉಳಿಸಲು ಪರಿಹಾರ.''

''ಅಂದರೆ ?''

''ಹೇಳ್ತೇನೆ ಸರ್. ಎಲ್ಲವನ್ನೂ ಹೇಳ್ತೇನೆ. ನಿಮಗೆ ಅರ್ಥವಾಗುವಂತೆ ಹೇಳ್ತೇನೆ. ಸರ್... ನಮ್ಮ 'ಜನ ಗಣ ಮನ' ರಾಷ್ಟ್ರಗೀತೆಯಲ್ವಾ ? ಹಾಗೆಯೇ 'ವಂದೇ ಮಾತರಂ' ರಾಷ್ಟ್ರಗೀತೆಯಲ್ವಾ ? ಆದರೆ ಅವುಗಳ ಪರಿಸ್ಥಿತಿ ಎಲ್ಲಿಯವರೆಗೆ ಬಂತು ಹೇಳಿ ಸರ್. ನೀವು ಸಂಗೀತ ತಿಳಿದೋರು. 'ಜನ ಗಣ ಮನ' ಶಂಕರಾಭರಣ ರಾಗ, ಮಧ್ಯೆ ಮ ಕೂಡ ಬರ್ತದೆ'' ಎಂದಿದ್ದೀರಿ. ಹಾಗೆಯೇ 'ವಂದೇ ಮಾತರಂ' ರಾಷ್ಟ್ರಗೀತೆಯನ್ನು ದೇಸ್ ರಾಗದಲ್ಲೂ ಹೇಳಬಹುದು; ವೃಂದಾವನೀ ಸಾರಂಗದಲ್ಲೂ ಹೇಳಬಹುದು, ಅಥವಾ ಹಳೆಯ ಆನಂದಮಠ ಚಿತ್ರದಲ್ಲಿ ಲತಾ ಮಂಗೇಶ್ಕರ್ ಹಾಡಿದ ಸಿಂಧು ಭೈರವೀ ರಾಗ ಕೂಡ ಮನಸಲ್ಲಿ ದೇಶಾಭಿಮಾನ ಹೆಚ್ಚಿಸುತ್ತದೆ ಅಂದಿದ್ದೀರಿ. ಆದರೆ ಈಗ ನೋಡಿ ಅದ್ಯಾರೋ ರೆಹಮಾನಂತೆ. 'ವಂದೇ ಮಾತರಂ' ಹಾಡು ಕಾಲೇಜು ಹುಡುಗೀರು ಒಟ್ಟಾಗಿ ಮಾಡುವ ಮಾಡರ್ನ್ ಡ್ಯಾನ್ಸಿಗೆ ಬೇಕಾಗುವಂತೆ ಮಾಡಿದ್ದಾನೆ. ನಾನೇ ಮೊನ್ನೆ ಕಾಲೇಜೊಂದರ 'ಡೇ' ಕಾರ್ಯಕ್ರಮಕ್ಕೆ ಹೋಗಿದ್ದೆ. ಆ ಡ್ಯಾನ್ಸ್ ಹ್ಯಾಗಿತ್ತು ಅಂದ್ರೆ ಪರದೆ ಎತ್ತಿ ಲೈಟ್ ಹಾಕುವಾಗ ಹುಡುಗೀರು ಬೆನ್ನು ತೋರಿಸುತ್ತಾ ನಿಂತು ಆಮೇಲೆ ಚಡ್ಡಿ ಬನಿಯನ್ ಡ್ರೆಸ್ಸಲ್ಲೆ ಕೈಕಾಲು ಆಡಿಸಿ ಒಬ್ಬರನ್ನೊಬ್ಬರು ತಬ್ಬಿಕೊಂಡರು. ಈಗಿನ ಪೀಳಿಗೆಯ ಸಿಳ್ಳು, ಚಪ್ಪಾಳೆಯ ಸಂತೋಷ ತೋರಿದರೂ ನನಗೆ ಹೇಗೋ ಆಯಿತು. 'ವಂದೇ ಮಾತರಂ' ರಾಷ್ಟ್ರೀಯ ಗೀತೆಗೆ ಆ ಕೀಳುಮಟ್ಟದ ಗಲಾಟೆಯ ಹಾಡು-ನೃತ್ಯ ಸರಿಯೇ ? ನೀವೇ ಹೇಳಿ ಸರ್. ನಾಳೆ 'ಜನ ಗಣ ಮನ'ಕ್ಕೂ ಇದೇ ಅವಸ್ಥೆ ಬರಬಹುದು.''



''ಕೂಸಪ್ಪಾ, ನೀನನ್ನೋದೇನೋ ನಿಜ. ನನಗೂ ಬೇಸರ ಆಗ್ತದೆ. ಬೇಂದ್ರೆ, ಅಡಿಗ, ಶಿವರುದ್ರಪ್ಪ, ಕುವೆಂಪು, ನಿಸಾರ್ ಅಹಮದ್ ಮುಂತಾದ ಖ್ಯಾತ ಕವಿಗಳ ಹಾಡಿಲ್ಲವೇ ? ಜಾನಪದ, ಭಾವಗೀತೆ, ಸಮೂಹ ಗೀತೆ ಎಲ್ಲಾ ಇವೆ. ಆದರೆ ಈ ಮಕ್ಕಳಿಗೆ ಅದು ಹಳೆಯದಾಯ್ತು. ಅದು 'ಹಾಟ್' ಅಲ್ಲವಲ್ಲಾ ?''

''ಹೌದು ಸರ್, ಅದೆಲ್ಲಾ ನೋಡುವಾಗ ನನ್ನ ಎರಡನೇ ಮಗ-ಹೈಸ್ಕೂಲಿಗೆ ಹೋಗುವವನು ಘಟಿಂಗ ! ರಾತ್ರಿ ಒಂಭತ್ತೂವರೆಯಿಂದ ಹತ್ತೂವರೆಯವರೆಗೆ ಎಫ್. ಟಿ.ವಿ. ಬಿಡದೆ ನೋಡ್ತಾನೆ. ಅದೇನೋ 'ಮಿಡ್ ನೈಟ್ ಹಾಟ್' ಅಂತೆ. ನನಗೆ ಒಮ್ಮೆ ನೋಡುವಾಗಲೇ 'ಇಸ್ಸೀ' ಅನಿಸ್ತು.''

''ಕೂಸಪ್ಪಾ, ಒಂದು ಮಾತು ಹೇಳ್ತೇನೆ ಕೇಳು. ಇದು ನಮ್ಮ ಕಾಲವಲ್ಲ, ಭರತನಾಟ್ಯ, ಕೂಚುಪುಡಿ, ಕಥಕ್ ನೃತ್ಯಗಳು ಯಾರಿಗೂ ಬೇಡ. ಹಾಗೆಯೇ ಹಿಂದಿನ ಕವಿಗಳ ಭಾವಗೀತೆ, ಭಕ್ತಿಗೀತೆ, ಜಾನಪದ ಗೀತೆ, ಸಮೂಹ ಗೀತೆ ಇಂದಿನ ಪೀಳಿಗೆಗೆ ಇಷ್ಟವಿಲ್ಲ. ಏನು ಮಾಡುವುದು ? ಸರಕಾರ ಇವುಗಳ ಬಗ್ಗೆ ತಲೆ ಹಾಕುತ್ತವೆಯೇ ? ನಾಳೆ 'ಜನ ಗಣ ಮನ'ಕ್ಕೂ ಈ ಅವಸ್ಥೆ ಬಂದರೂ ಸರಕಾರಗಳೇ (ಮಕ್ಕಳು - ಮಲತಾಯಿಯ ಮಕ್ಕಳೂ !) – ಎರಡೂ ಕಣ್ಮುಚ್ಚಿ ಕುಳಿತ್ಕೋತಾವೆ. ಮೊನ್ನೆ ಮೊನ್ನೆ ನೀಲಿ ದ್ರಾಕ್ಷಿಯ ರಸವನ್ನು ವೈನ್ ಮಾಡಿ ಕುಡಿದರೂ ತಪ್ಪಲ್ಲ ಅಂತಾರೆ !''

''ಹೌದು. ಸರ್, ಈಗ ನೋಡಿ ಲಾಭ ತರುವ ದೊಡ್ಡ ದೊಡ್ಡ ದೇವಸ್ಥಾನಗಳನ್ನು ಎಂಡೋಮೆಂಟಿಗೆ ಸೇರಿಸಿದ್ದಾರೆ. ಬೇರೆ ಯಾವ ರಾಷ್ಟ್ರದಲ್ಲಾದರೂ ತಮ್ಮ ರಾಷ್ಟ್ರಗೀತೆ ಪಾಪ್ ಡ್ಯಾನ್ಸಿಗಾಗಿ ಬಿಡುತ್ತಾರಾ ? ಹೋಗ್ಲಿ ಸರ್ ಸಿನೇಮಾ, ಧಾರಾವಾಹಿ, ಆ್ಯಡುಗಳಲ್ಲಿ ನಮ್ಮ ದೇವರುಗಳನ್ನು ಎಷ್ಟು ನಿಕೃಷ್ಟರಾಗಿ ತೋರಿಸುತ್ತಾರೆ ? ನಾರದ ಸೈಕಲ್ ಬಿಡೋದು, ಯಮ ಧರ್ಮರಾಜ ಸೈಕಲ್ ಬಿಡೋದು, ರಾವಣನಿಗೆ ಬಾಮ್ ಹಚ್ಚೋದು, ತಪಸ್ಸು ಮಾಡುವ ತಪಸ್ವಿಯನ್ನು ಕೆಡಿಸಲು ರಂಭೆ- ಊರ್ವಶಿಯರು ಕ್ಯಾಬರೇ ಆರ್ಟಿಸ್ಟ್ ಆಗಿ ಬರೋದು, ಪೊಲೀಸ್ ಪೇದೆಯವರನ್ನು ಲಾರೆಲ್, ಹಾರ್ಡಿಯಂತೆ ತಮಾಷೆಯ ಗೊಂಬೆಗಳಾಗಿ ತೋರಿಸೋದು – ಇದನ್ನೆಲ್ಲಾ ಆ ಸೆನ್ಸಾರ್ ಮಂಡಳಿಯ ಮಕ್ಕಳು ನೋಡಿ ಪರ್ಮಿಶನ್ ಕೊಡ್ತಾರಾ ? ಬೇರೆ ಯಾವ ರಾಷ್ಟ್ರದಲ್ಲಿ ಯಾವುದೇ ಜಾತಿ, ಕುಲ ಕಸುಬನ್ನು ಹೀನಾಯವಾಗಿ ತೋರಿಸ್ತಾರಾ ? ಹಾಗೆ ತೋರಿಸಿದರೆ ಆ ರಾಷ್ಟ್ರದಲ್ಲಿ ಎರಡನೇ 'ಪಾಣಿಪತ್' ರಕ್ತ ಹರಿದೀತಲ್ವಾ ಸರ್ ? ಈ ರಾಷ್ಟ್ರ - ರಾಜ್ಯ ಎರಡರ ಪೂಜಾರಿಗಳಿಗೂ, ಅಂದರೆ ರಾಷ್ಟ್ರ, ರಾಜ್ಯಗಳು ಗರ್ಭಗುಡಿಯೊಳಗಿನ ಮೂರ್ತಿಗಳಂತೆ ದೇವರನ್ನು ತಾವೇ ಆಡಿಸ್ತಾರೆ. ಮೊನ್ನೆ ಮೊನ್ನೆಯೊಬ್ಬ ಮಿನಿ ಸ್ಟಾರೊಬ್ಬರು ಹೇಳಿದ್ರಂತಲ್ಲಾ, ವಾಹನ ಹತ್ತು ವರ್ಷ ಮಾತ್ರ ಉಪಯೋಗಿಸಬೇಕೂಂತಾ ? ಅದು ಲಾರಿಯೋ, ಬಸ್ಸೋ, ಬೈಕೋ, ಹಾರೋ ಸ್ಕೂಟರೋ ಗೊತ್ತಿಲ್ಲ. ಆದರೆ ಮಧ್ಯಮ ವರ್ಗದ ವ್ಯಕ್ತಿಯೊಬ್ಬ ಬಡ್ಡಿ ಸಹಿತ ಸಾಲಮಾಡಿ ವಾಹನ ಖರೀದಿಸಿದ್ರೆ ಅದನ್ನು ಹತ್ತು ವರ್ಷದ ಮೇಲೆ ಗುಜರಿಗೆ ಹಾಕಬೇಕೋ ಅಥವಾ ಆ ಮಿನಿ ಸ್ಟಾರು ಅದನ್ನು ಡಿಪ್ರಿಸಿಯೇಶನ್ ಕೊಟ್ಟು ಸರಕಾರವೇ ಪಡೆದುಕೊಳ್ಳುವುದೋ ಗೊತ್ತಿಲ್ಲ. ಬೇಡ ಬಿಡಿ ಈಗ ದಸರಾ, ಗಣೇಶೋತ್ಸವ, ಅಷ್ಟಮಿ ಇತ್ಯಾದಿಗಳಿಗೆ ಊರಿಂದ ಅಲ್ಲ ಬೇರೆ ಬೇರೆ ಊರಿಂದಲೂ ''ಸೇವೆಗೆ ಉತ್ಸವಕ್ಕೆ ಬನ್ನಿ, ಸಹಾಯಧನ ನೀಡಿ'' ಎಂದು ಕೇಳಲು ಹಿಂಡು ಹಿಂಡಾಗಿ ಜನ ಬರ್ತಾರೆ. ಸಾವಿರಗಟ್ಟಲೆ ಹಣ ಬರ್ತದೆ. ಕೆಲವು ಕಡೆ ಗಣೇಶೋತ್ಸವಕ್ಕೆ ಲಾಟರಿ ಬಹುಮಾನದ ಕೂಪನ್ ವ್ಯವಸ್ಥೆಯೂ ಇರ್ತದೆ. ಬೈಕೋ, ಸ್ಕೂಟರೋ, ಕಾರೋ ಇರಬೋದು. ಇನ್ನು ಕೆಲವು ಕಡೆಗಳಲ್ಲಿ ಗಣಪತಿಯೇ ಪಾಲಿಟೀಶಿಯನ್ ಆಗ್ತಾನೆ, ಬಿ.ಜೆ.ಪಿ. ಗಣಪತಿ, ಕಾಂಗ್ರೆಸ್ ಗಣಪತಿಯೂ ನಮ್ಮೂರಲ್ಲಿದೆ. ಇನ್ನು ಕಾರ್ಯಕ್ರಮಗಳೂ ಭಕ್ತಿ ಸಂಗೀತ, ಭಾವಗೀತೆ, ಜಾನಪದ – ಇವೆಲ್ಲಾ ಅಲ್ಲ ಬ್ರೇಕ್ ಡ್ಯಾನ್ಸ್, ಸಿನೇಮಾ ಡ್ಯಾನ್ಸ್, ಸಿನೇಮಾ ಆರ್ಕೆಸ್ಟ್ರಾ, ಮಂಗಳೂರಿನ ಎರಡರ್ಥದಲ್ಲಿ ನಗಿಸುವ ಒಂದೇ ರೀತಿಯ ನಾಟಕಗಳು – ಇತ್ಯಾದಿ. ಇನ್ನು ಹೊರಗಿನಿಂದ ಬರುವ ಸಂಗೀತಗಾರರಾದರೆ ಬಿ.ಜೆ.ಪಿ. ಚಿತ್ರಾ, ರತ್ನಮಾಲಾ ಪ್ರಕಾಶ್ ಬಳಗದವರನ್ನು ಕರೆಸಿದರೆ ಕಾಂಗ್ರೆಸ್ ಸಾರ್ವಜನಿಕ ವೇದಿಕೆ ಬಾಲಸುಬ್ರಹ್ಮಣ್ಯಂರನ್ನು ಕರೆಸುತ್ತಾರೆ. ಇಲ್ಲಿ ಭಕ್ತಿ ಮುಖ್ಯವಲ್ಲ, ಸಮಿತಿಯ ಖ್ಯಾತಿ ಮುಖ್ಯ. ಗಣಪತಿಯೋ ಸೋಶಿಯಲ್ಲೇ ಸೋಶಿಯಲ್ಲು, ಇಲಿಯೇರುವ ಬದಲು ರಿಕ್ಷಾ, ಕಾರು ಏರಿ ಪೋಸು ಕೊಡ್ತಾನೆ. ಕಳೆದ ವರ್ಷ ಒಲಿಂಪಿಕ್ ಬ್ಯಾಟು ಹಿಡಿದ ಗಣಪತಿಯನ್ನೂ ನಾನು ನೋಡಿದ್ದೇನೆ. ಸದ್ಯ ಇಲಿ ಬಚಾವ್. ಸತ್ಯ ಹೇಳ್ತೇನೆ ಸರ್ ಇಲ್ಲಿ ಭಕ್ತಿ, ಪೂಜೆ ಮುಖ್ಯವಲ್ಲ 'ಝಂ' ಎನ್ನುವ ಕಾರ್ಯಕ್ರಮಗಳೇ ಮುಖ್ಯ. ಕಾರ್ಯಕ್ರಮ ನೋಡಿ ಹೊಟ್ಟೆ ತುಂಬಿ ಗಣಪತಿಯನ್ನೇ ನೋಡದೆ ಹೋಗುವವರಿದ್ದಾರೆ.

''ಸರ್, ಗಣಪತಿ ಪಳಗಿದ ಆನೆ ಮಾತ್ರ. ಆದರೆ ಮಾವುತರೇ ಅವನನ್ನು ತಮಗೆ ಬೇಕಾಗುವಂತೆ ಆಡಿಸ್ತಾರೆ, ನೋಡಬಾರದ್ದನ್ನು ತೋರಿಸ್ತಾರೆ. ಅದಕ್ಕಾಗಿಯೇ ನಾನು ಮೂರನೇ ಕ್ಲಾಸಲ್ಲಿ ಕಲಿತ 'ಧರಣಿ ಮಂಡಲ ಮಧ್ಯದೊಳಗೆ' ಹಾಡನ್ನು ಹಾಡ್ತಾ ಬಂದೆ. ತಪ್ಪಾಗಿದ್ರೆ ಕ್ಷಮಿಸಿ ಸರ್. ಚಹ ಬೇಡ. ಅದಕ್ಕೆ ನಾಳೆ ಬರ್ತೇನೆ.''

ಒಳಗೆ ಚಹ ರೆಡಿಯಾಗಿದ್ರೂ ಕೂಸಪ್ಪ ಹೊರಟೇ ಹೋದ.

**ರಾಘವೇಂದ್ರ ಉಡುಪಿ (ಕೆ. ರಾಘವೇಂದ್ರ ಭಟ್)**
೮-೩-೫೧, ಶ್ಯಾಮಲಾ ಸದನ, ಕಟ್ಟೆಆಚಾರ್ಯ ಮಾರ್ಗ, ಕುಂಜಿಬೆಟ್ಟು, ಉಡುಪಿ-೫೭೬೧೦೨



'ಸು'ಪ್ರೀಂ ಕೋರ್ಟ್ ಅಡ್ವೋಕೇಟ್ಸ್ ಆನ್ ರೆಕಾರ್ಡ್' ಏರ್ಪಡಿಸಿದ್ದ 'ನ್ಯಾಯದಾನಕ್ಕೆ ಮೊರೆಹೋಗುವುದು' ಎಂಬ ವಿಚಾರ ಸಂಕಿರಣದ ಉದ್ಘಾಟನಾ ಸಮಾರಂಭವನ್ನು ನೆರವೇರಿಸುತ್ತಾ ನಮ್ಮ ನೆಚ್ಚಿನ ರಾಷ್ಟ್ರಪತಿ ಅಬ್ದುಲ್ ಕಲಾಂ: 'ಪ್ರಜಾಸತ್ತೆಯ ಮೂರು ಆಧಾರ ಸ್ತಂಭಗಳಾದ ಶಾಸಕಾಂಗ, ನ್ಯಾಯಾಂಗ, ಕಾರ್ಯಾಂಗ ರಚನೆಯಲ್ಲಿ ಸುಭದ್ರವೂ, ಆಕಾರದಲ್ಲಿ ಪರಿಶುದ್ಧವೂ ನಡತೆಯಲ್ಲಿ ನಿಷ್ಕಳಂಕವೂ, ಭ್ರಷ್ಟಾಚಾರರಹಿತವೂ ಆಗಿರಬೇಕಾದುದು ಅತ್ಯವಶ್ಯಕ... ಈ ಸಂದರ್ಭದಲ್ಲಿ ನ್ಯಾಯಾಂಗದ ಸದಸ್ಯರು ಸುಸಂಸ್ಕೃತ ನಾಗರಿಕ ಸಮಾಜದ ಅಚ್ಚಳಿಯದ ಶುಭ್ರ ಬಾಳಿನ ಆದರ್ಶ ಪುರುಷರಾಗಿರಬೇಕು...' ಎಂಬುದಾಗಿ ಹೇಳಿದರು. ಮುಂದುವರಿದು: '೨೦೨೦ನೇ ಇಸ್ವಿಯ ಹೊತ್ತಿಗೆ ನಮ್ಮ ದೇಶ ಅಭಿವೃದ್ಧಿ ಹೊಂದಿದ ದೇಶವಾಗ ಬೇಕೆಂಬ ನಮ್ಮ ಕನಸು ನನಸಾಗಬೇಕೆಂದರೆ ಭ್ರಷ್ಟಾಚಾರ ಇಲ್ಲದ ಸಾರ್ವಜನಿಕ ಜೀವನ ಅತ್ಯವಶ್ಯಕ', ಎಂದು ಗಂಭೀರವಾಗಿ ಕಳಕಳಿಯಿಂದ ಬಿನ್ನವಿಸಿದರು.

ಸಂತರ ಸಾಲಿಗೆ ಸೇರಬಹುದಾದ ಈ ರಾಷ್ಟ್ರಪತಿ ಹೀಗೆ ಸಾರ್ವಜನಿಕ ಜೀವನದ ಪಾರಿಶುದ್ಧತೆಯ ಆವಶ್ಯಕತೆಯನ್ನು ಎತ್ತಿ ತೋರಿಸಿದ ವಾರ ಒಪ್ಪತ್ತಿನಲ್ಲಿಯೆ ನಮ್ಮ ರಾಜ್ಯದ ಸರ್ಕಾರಿ ನೌಕರರ ಭ್ರಷ್ಟಾಚಾರದ ಸಹಸ್ರಾರು ಸರಮಾಲೆಗಳೇ ಬಹಿರಂಗ ಆದವು. ಲೋಕಾಯುಕ್ತರು ವಿಚಾರಣೆ ನಡೆಸಿ ಮೇಲ್ನೋಟಕ್ಕೆ ದಿಟವೆಂದು ಸಾಬೀತಾದ ಬೃಹತ್ ಭ್ರಷ್ಟಾಚಾರಗಳ ಯಾದಿಯನ್ನು ವೃತ್ತಪತ್ರಿಕೆಗಳು ದಿನ

# ಭ್ರಷ್ಟಾಚಾರ ನಿರ್ಮೂಲನೆ ಅಸಾಧ್ಯ

ದಿನವೂ ಬಯಲಿಗೆ ಹಾಕುತ್ತಿವೆ. ಸರ್ಕಾರದ ಸಮಸ್ತ ಇಲಾಖೆಗಳಲ್ಲೂ – ಶಿಕ್ಷಣ, ಆರೋಗ್ಯ, ಲೋಕೋಪಯೋಗಿ, ಗ್ರಾಮೀಣಾಭಿವೃದ್ಧಿ, ಕಂದಾಯ, ಪಶುಸಂಗೋಪನೆ, ಕಾರ್ಮಿಕ, ಅರಣ್ಯ, ಲೋಕಸೇವಾ ಆಯೋಗ, ನಗರಾಭಿವೃದ್ಧಿ, ವಿದ್ಯುಚ್ಛಕ್ತಿ ಇಲಾಖೆ, ಕುಟುಂಬ ಕಲ್ಯಾಣ, ಮಹಿಳಾ ಅಭಿವೃದ್ಧಿ, ಉನ್ನತ ಶಿಕ್ಷಣ, ವಿಶ್ವವಿದ್ಯಾನಿಲಯ, ನ್ಯಾಯಾಂಗ ಅದು ಇದು ಎಂದು ಹೆಸರಿಸುವುದೇ ಬೇಡ - ಇಡೀ ಆಡಳಿತ ವ್ಯವಸ್ಥೆಯಲ್ಲಿ ಭ್ರಷ್ಟಾಚಾರ ತಾಂಡವ ಆಡುತ್ತಿದೆ. ಅಂದಾಜು ಆರು ಲಕ್ಷ ಸರ್ಕಾರಿ ನೌಕರರಲ್ಲಿ ಐದು ಲಕ್ಷ ಐವತ್ತು ಸಾವಿರ ನೌಕರರು ಭ್ರಷ್ಟಾಚಾರದ ಮಲಕೂಪದಲ್ಲಿ ಮುಳುಗಿದ್ದಾರೆ! ಈ ಭ್ರಷ್ಟಾಚಾರ ಬ್ರಹ್ಮರಾಕ್ಷಸನಂತೆ, ಸರ್ವಾಂತರ್ಯಾಮಿಯಾಗಿದೆ. ಅವತಾರ ಪುರುಷನಂತೆ ಲಂಚಾವತಾರದ ವಿಶ್ವರೂಪ ದರ್ಶನ ನೋಡಲು ಮಾನವ ಕಣ್ಣು ಸಾಲದು! ಬ್ರಹ್ಮನೇ ಬರಹಗಾರನಾಗಿ ಆಕಾಶವೇ ಕಾಗದವಾಗಿ ಸಮುದ್ರವೇ ಶಾಯಿಯಾಗಿ ಅನಂತ ಕಾಲ ಬರೆದರೂ ಮುಗಿಯಲಾರದು ಭ್ರಷ್ಟಾಚಾರದ ಬೃಹತ್ ಕಥೆ!!

ರಾಷ್ಟ್ರಪತಿಯೆ ಭ್ರಷ್ಟಾಚಾರದ ನಿರ್ಮೂಲನೆ ಅಗತ್ಯ ಎಂದು ಬಿನ್ನವಿಸಿರಬಹುದು! ಲೋಕಾಯುಕ್ತರೆ ಅದರ ಕರಾಳ ಕಥೆಯನ್ನು ಬಹಿರಂಗ ಪಡಿಸಿರಬಹುದು. ಆದರೆ ಮೇಲ್ನೋಟಕ್ಕೆ ಭ್ರಷ್ಟರೆಂದು ಕಂಡುಬಂದವರ ಬಗ್ಗೆ ಕ್ರಮ ಕೈಗೊಳ್ಳಬೇಕಾದ ಸರ್ಕಾರ - ತತ್ರಾಪಿ ಅಧಿಕಾರಶಾಹಿ - ಭ್ರಷ್ಟರನ್ನು ರಕ್ಷಿಸುವ ಕೃಪಾಛತ್ರವಾಗಿದೆ. ಅಧಿಕಾರಶಾಹಿಗೆ ರಾಜಕಾರಣಿಗಳ ವಜ್ರಕವಚದ ರಕ್ಷಣೆ. ಇತ್ತೀಚೆಗೆ ಬೆಂಗಳೂರಿನ ಸುತ್ತಮುತ್ತಲಿನ ನಗರ ಪಾಲಿಕೆಗಳಲ್ಲಿ ಬಹಿರಂಗ ಆದ ನಾನ್ನೂರು ಕೋಟಿ



ಕೋ. ಚೆನ್ನಬಸಪ್ಪ

ಪ್ರಜಾಸತ್ತೆಗೆ ಮಾರಕವಾದ ಈ ಭ್ರಷ್ಟಾಚಾರದ ಇನ್ನೊಂದು ಭೀಕರ, ಮಾರಕ ಕಾರಣ ಉಂಟು. ಭ್ರಷ್ಟಾಚಾರಿ ಯಾವ ಜಾತಿಯವನು ಎಂಬುದನ್ನು ಅವಲಂಬಿಸಿ ಅವರ ಬಗ್ಗೆ ಕ್ರಮ ಜರುಗಿಸಬೇಕೆ ಬೇಡವೆ ಎಂಬುದು ನಿಂತಿದೆ. ಮೊನ್ನೆ ತಾನೆ ಲೋಕಾಯುಕ್ತರು ಪತ್ತೆ ಹಚ್ಚಿದ ಸಮಾಜ ಇಲಾಖೆಯಲ್ಲಿ ಆದ ಭ್ರಷ್ಟಾಚಾರಕ್ಕೆ ಕಾರ್ಯದರ್ಶಿಗಳು ಹೊಣೆಯೆಂದು ನಿರ್ಧರಿಸಿದಾಗ ದಲಿತ ಸಂಘರ್ಷ ಸಮಿತಿ ಪ್ರತಿಭಟನಾ ಮೆರವಣಿಗೆ ಹೊರಡಿಸಿದರು. ಅಲ್ಲಿ ಎಲ್ಲಿಯೊ ಒಂದು ಹಳ್ಳಿಯಲ್ಲಿ ಅವರ ಸಂಬಂಧಿಕರನ್ನು ಜಾತಿನಿಂದನೆ ಮಾಡಿದರೆಂಬ ಹುಯಿಲೆದ್ದಿತು! ಕೆಲವರ ಮೇಲೆ ಫಿರ್ಯಾದಿ ದಾಖಲಾಯಿತು. ಅಂದಮೇಲೆ ಕಳಂಕಿತ ಅಧಿಕಾರಿಯ ಮೇಲೆ ಕ್ರಮ ಕೈಕೊಳ್ಳುವ ಧೈರ್ಯ ಯಾರಿಗೆ ಬಂದೀತು? ಹೀಗೆಯೆ ಇತರ ಜಾತಿಯವರ ಮೇಲೆ ಕ್ರಮ ಕೈಗೊಳ್ಳದಂತೆ ಆಯಾ ಜಾತಿಯ ಶಾಸಕರು, ಮಂತ್ರಿಗಳು, ಮುಖಂಡರು ರಕ್ಷಣೆಗೆ ಸಜ್ಜಾಗುತ್ತಾರೆ!

ರೂಪಾಯಿಗಳ ಭ್ರಷ್ಟಾಚಾರ ಹಗರಣಗಳಲ್ಲಿ ಭಾಗಿಯಾಗಿದ್ದ ಅಧಿಕಾರಿಗಳ ಅಮಾನತು ಆಜ್ಞೆಗಳನ್ನು ರದ್ದುಗೊಳಿಸಿ ಅವರಿಗೆ ಸೂಪರ್ ಸ್ಕೇಲ್ ಸಂಬಳ ಹೆಚ್ಚಿಸಿ ನೌಕರಿಗೆ ಪುನಃ ಸೇರಿಸಿಕೊಂಡದ್ದು ಭ್ರಷ್ಟಾಚಾರದ ಹೇಸಿಕೆಯ ಹಿಮಾಲಯದ ಶಿಖರವೆಂದೇ ಹೇಳಬೇಕು. ಅದರಲ್ಲೂ ಭ್ರಷ್ಟಾಚಾರದಲ್ಲಿ ಭಾಗಿಯಾಗಿದ್ದ ನೌಕರರಲ್ಲಿ ಕೆಲವರು, ತಪ್ಪೊಪ್ಪಿಕೊಂಡು ಹೇಳಿಕೆ ಕೊಟ್ಟಿದ್ದರೂ ಕೂಡ, ಅವರನ್ನು ಮತ್ತೆ ನೌಕರಿಯಲ್ಲಿ ಸೇರಿಸಿಕೊಂಡದ್ದು ಆಡಳಿತೆಯ ಮಹಾದ್ಭುತಗಳಲ್ಲಿ ಒಂದು ಮಹಾದ್ಭುತವೆ ಸೈ!

ಯಾಕೆ ಹೀಗೆ ಮಾಡಿದರು? ಎಂದು ಪತ್ರಿಕಾರಂಗ ಸಂಶಯ ವ್ಯಕ್ತಪಡಿಸಿದಾಗ ಮುಖ್ಯಮಂತ್ರಿಗಳು ಹೀಗೆ ಸಮಜಾಯಿಷಿ ಕೊಟ್ಟರು: ಭ್ರಷ್ಟ ನೌಕರರನ್ನು ಅಮಾನತ್ತಿನಲ್ಲಿಡುವುದರ ಮುಖ್ಯ ಉದ್ದೇಶ, ಅವರು ಸಂಬಂಧಪಟ್ಟ ದಸ್ತಾವೇಜುಗಳನ್ನು ನಾಪತ್ತೆ/ಹಾಳು ಮಾಡದಿರುವುದು. ಈಗ ಪುನಃ ನೇಮಕ ಮಾಡದವರ ಬಗ್ಗೆ ಸಂಬಂಧಿಸಿದ ಎಲ್ಲ ದಸ್ತಾವೇಜುಗಳು ಸುರಕ್ಷಿತವಾಗಿವೆ. ಇನ್ನು ಅವರು ಕೆಲಸಕ್ಕೆ ಹಾಜರಾಗುವುದರಿಂದ (ದಸ್ತಾವೇಜುಗಳಿಗೆ) ಹಾನಿಯೇನಿಲ್ಲ, ಅಲ್ಲದೆ, ಸೇವಾ ನಿಯಮಾವಳಿಯ ಪ್ರಕಾರ ಅವರನ್ನು ಅಮಾನತ್ತಿನಲ್ಲಿಟ್ಟ ಕಾಲಾವಧಿಯಲ್ಲಿ ಅವರ ಸಂಬಳದ ಸೇಕಡ ೭೫ರಷ್ಟು ಉದರಂಭರಣಕ್ಕಾಗಿ ಕೊಟ್ಟೇ ತೀರಬೇಕು. ಅವರು ಎಷ್ಟು ಕಾಲಾವಧಿಯವರೆಗೆ ಅಮಾನತ್ತಿನಲ್ಲಿರುತ್ತಾರೊ ಅಲ್ಲಿಯವರೆಗೆ ಅವರ ಜಾಗದಲ್ಲಿ ಇನ್ನೊಬ್ಬರನ್ನು ನೇಮಕ ಮಾಡಬೇಕು. ಅಂದರೆ ಒಂದೇ ಹುದ್ದೆಗೆ ಇಬ್ಬರ ಸಂಬಳ ತೆರಬೇಕಾಗುತ್ತದೆ. ಇದರಿಂದ ಖಜಾನೆಗೆ ಹೊರೆ. ಇನ್ನು ಮೂರನೆಯ ಕಾರಣ - ಶಿಸ್ತುಕ್ರಮಕ್ಕೆ ಒಳಗಾದವರ ಬಗ್ಗೆ ಆರು ತಿಂಗಳ ಒಳಗಾಗಿ ಆಖೈರು ಆಜ್ಞೆ ಮಾಡದಿದ್ದರೆ ಅಂಥವರನ್ನು ಕೆಲಸಕ್ಕೆ ತೆಗೆದುಕೊಳ್ಳಲೇಬೇಕಾಗುತ್ತದೆ.

ಈ ಮೂರೂ ಸಮಜಾಯಿಷಿಗಳು ಸಮರ್ಪಕವಲ್ಲ ಎಂಬುದು ಪ್ರಜೆಗಳಿಗೆ ತಿಳಿದಿರಬೇಕು. ಆರು ತಿಂಗಳೊಳಗಾಗಿ ಆಖೈರು ತೀರ್ಮಾನಕ್ಕೆ ಬಾರದಿರಲು ಯಾರು ಅಡ್ಡಿಪಡಿಸುತ್ತಾರೆ? ಅದು ಅಧಿಕಾರಯುಕ್ತ ಅಧಿಕಾರಿಗೆ ಇದ್ದೇ ಇದೆ. ಅದನ್ನು ಚಲಾಯಿಸಲು ವಿಳಂಬ ಮಾಡಿದರೆ ಅದು ಯಾರ ತಪ್ಪು? ಆರು ತಿಂಗಳು ಮಲಗಿದ್ದು ಅದು ಮುಗಿಯಲೆಂದು ಕಳಂಕಿತ ಅಧಿಕಾರಿಯನ್ನು ಹುದ್ದೆಗೆ ಕರೆಸಿಕೊಳ್ಳುವುದು ಯುಕ್ತವೆ? ಅಂದರೆ ತಪ್ಪಿತಸ್ಥರ ವಿರುದ್ಧ ಕ್ರಮ ಕೈಕೊಳ್ಳುವ ಇಚ್ಛಾಬಲವಿಲ್ಲ ಎಂದೇ ಆಗುತ್ತದೆ. ಇನ್ನು ಖಜಾನೆಗೆ ಹೊರೆ ಆಗುವ ಕಾರಣ. ಸಾಧಾರಣವಾಗಿ ಅಮಾನತ್ತಿನಲ್ಲಿಟ್ಟ ಅಧಿಕಾರಿಯ ಸ್ಥಾನದಲ್ಲಿ ಪೂರ್ಣಾವಧಿಯ ಅಧಿಕಾರಿಯನ್ನು ನೇಮಕ ಮಾಡುವುದಿಲ್ಲ. ಆ ಕೆಲಸ ನೋಡಿಕೊಳ್ಳಲು ಇನ್ನೊಬ್ಬ ನೌಕರನನ್ನು ನೇಮಿಸುತ್ತಾರೆ. ಆಗ ಅವರಿಗೆ ಪ್ರಭಾರೆ ಅಲೋಯನ್ಸ್ ಕೊಡುತ್ತಾರೆ. ಇದು ಪ್ರಜೆಗಳಿಗೆ ಗೊತ್ತಿಲ್ಲದ್ದರಿಂದ ಯಾವ ಸಬೂಬನ್ನಾದರೂ ಬುರುಡೆ ಬಿಡಬಹುದು. ಒಂದು ವೇಳೆ ಖಜಾನೆಗೆ ಹೊರೆಯಾಗುತ್ತದೆ ಎಂದಿಟ್ಟುಕೊಂಡರೂ ಕಳಂಕಿತ ಅಧಿಕಾರಿಯನ್ನು ಹುದ್ದೆಗೆ ಮರಳಿ ಕರೆಸುವುದರಿಂದ ಆಡಳಿತೆಯ ಮೇಲೆ, ಪ್ರಜೆಗಳ ಮೇಲೆ, ನೌಕರವರ್ಗದವರಿಗೆ ಆಗುವ ದುಷ್ಪರಿಣಾಮಕ್ಕಿಂತ ಹೆಚ್ಚು ಹಣ ನಷ್ಟವಾಗದು. ಇದು ನೈತಿಕ ಪ್ರಶ್ನೆ. ಅದನ್ನು ರೂಪಾಯಿ ಪೈಸೆಯಿಂದ ಬೆಲೆ ಕಟ್ಟಲಾಗದು. ಇನ್ನು ದಸ್ತಾವೇಜುಗಳು ಆಗಲೇ ಸುರಕ್ಷಿತವಾಗಿರುವ ಮಾತು. ಕಳಂಕಿತ ಅಧಿಕಾರಿ ಕೇವಲ ದಸ್ತಾವೇಜುಗಳಲ್ಲಿ ಹಸ್ತಕ್ಷೇಪ ಮಾಡದಿರುವುದು ಅಮಾನತ್ತಿನ ಏಕಮಾತ್ರ ಉದ್ದೇಶವಲ್ಲ. ಅಧಿಕಾರದಲ್ಲಿದ್ದರೆ ಅಧಿಕಾರದ ದುರುಪಯೋಗ ಮಾಡಿಕೊಳ್ಳದಿರಲಿ ಎಂಬುದು ಮುಖ್ಯೋದ್ದೇಶ, ಈ ಯಾವ ದೃಷ್ಟಿಯಿಂದ ನೋಡಿದರೂ ಕಳಂಕಿತ ಅಧಿಕಾರಿಗಳನ್ನು ಪುನಃ ಕೆಲಸಕ್ಕೆ ಕರೆಸುವುದು ನ್ಯಾಯ ಸಮ್ಮತವಲ್ಲ.

ಕಳಂಕಿತ ಅಧಿಕಾರಿಗಳ ವಿರುದ್ಧ ಕ್ರಮ ಕೈಕೊಳ್ಳದಿರುವುದಕ್ಕೆ ಮುಖ್ಯವಾದ ಕಾರಣ ಇಚ್ಛಾಶಕ್ತಿಯ ಅಭಾವ. ಸರ್ಕಾರಕ್ಕೆ ಯಾಕೆ ಈ ಅಳುಕು? ಭ್ರಷ್ಟ ಅಧಿಕಾರಿಗಳ ಮೇಲೆ ಕಠಿಣ ಕ್ರಮ ಕೈಕೊಂಡರೆ, ಅವರು ಮಾಡಿದ ಭ್ರಷ್ಟಾಚಾರದಲ್ಲಿ ಭಾಗಿಗಳಾದ ಎಲ್ಲರೂ - ಅದರಲ್ಲೂ ರಾಜಕಾರಣಿಗಳು – ಬಯಲಿಗೆ ಬೀಳುತ್ತಾರೆ. ಇದೇನೂ ಗುಟ್ಟಿನ ಸಂಗತಿಯಲ್ಲ. ಎಲ್ಲ ಅಧಿಕಾರಿಗಳೂ ಎಲ್ಲ ರಾಜಕೀಯ ವ್ಯಕ್ತಿಗಳಿಗೆ – ಜಿಲ್ಲಾ ಪಂಚಾಯ್ತಿ ಸದಸ್ಯರು, ಅಧ್ಯಕ್ಷರು, ಉಪಾಧ್ಯಕ್ಷರಿಂದ ಹಿಡಿದು ಮಂತ್ರಿಗಳ ಮಟ್ಟದವರೆಗೆ – ಪ್ರತಿ ತಿಂಗಳು ಇಂತಿಷ್ಟು ಎಂದು ಕಾಣಿಕೆ ಒಪ್ಪಿಸಲೇಬೇಕೆಂಬುದು ಅಲಿಖಿತ ಶಾಸನ. ಆ ಉಲ್ಲಂಘನೆ ಮಾಡುವ ಧೈರ್ಯ ಎಷ್ಟು ಜನ ಅಧಿಕಾರಿಗಳಿಗಿದೆ? ಕಪ್ಪ ಕೊಡಲು ಇಷ್ಟವಿಲ್ಲದವರನ್ನು ಕ್ಷಣಾರ್ಧದಲ್ಲಿ ಎತ್ತಂಗಡಿ ಮಾಡುವ ಪರಮೋಚ್ಚ ಅಧಿಕಾರ ರಾಜಕಾರಣಿಗಳ ಕೈಯಲ್ಲಿದೆ. ಸ್ಥಳೀಯ ಶಾಸಕರಿಗೆ ಬೇಕಾದ ಅಧಿಕಾರಿಗಳನ್ನೇ ಅವರ ಕ್ಷೇತ್ರಕ್ಕೆ ನೇಮಿಸಬೇಕೆಂಬ ನಿಯಮದ ಉದ್ದೇಶವೆ ಅದು.

ಇಲ್ಲಿದೆ ಭ್ರಷ್ಟಾಚಾರದ ಉಗಮ ಮತ್ತು ತಾಯಿಬೇರು. ಕ್ಷೇತ್ರಾಭಿವೃದ್ಧಿಗೆಂದು ಶಾಸಕರಿಗೆ, ಸಂಸದರಿಗೆ ಕೊಡುವ ಹಣವನ್ನು ಶಾಸಕರು, ಸಂಸದರು ಹೇಳಿದ ಕೆಲಸಕ್ಕಾಗಿಯೆ ಅವರು ಹೇಳಿದ ಕಂಟ್ರಾಕ್ಟರ್ ಮೂಲಕವಾಗಿಯೆ ಮಾಡಿಸಬೇಕೆಂಬ ನಿಯಮ. ಇದರಿಂದ ಸರ್ಕಾರಿ ಖಜಾನೆಯಿಂದ ಖರ್ಚಾದ ಕೋಟಿ ಕೋಟಿ, ಕೆಲಸ ಮಾಡಿರಲಿ, ಮಾಡದಿರಲಿ, 'ಬಿಲ್'ಗಳ ಆಧಾರದ ಮೇಲೆ ಕಂಟ್ರಾಕ್ಟರ್ ಮೂಲಕ ರಾಜಕಾರಣಿಗಳ ಜೇಬಿಗೆ ಹರಿದುಹೋಗುತ್ತದೆ! ಲೋಕಾಯುಕ್ತರು ತಪಾಸಣೆ ಮಾಡಿದಾಗ ಸರಬರಾಜು ಆಗದ ಸಾಮಗ್ರಿಗಾಗಿ, ಮಾಡದ ಕಾಮಗಾರಿಗಾಗಿ, ಕಳಪೆ ಕೆಲಸ ಮತ್ತು ಸಾಮಗ್ರಿಗಾಗಿ ಕೋಟಿ ಕೋಟಿ ಖೊಟ್ಟಿ ಬಿಲ್‌ಗಳಿಗಾಗಿ ಲೂಟಿ ಆಗಿದೆ ಎಂದು ಕಂಡುಹಿಡಿದರೆ, ತಪ್ಪಿತಸ್ಥರನ್ನು ಹಿಡಿಯುವುದು ಹೇಗೆ? ಉಪಕರಣದಂತೆ ಕೆಲಸ ಮಾಡಿದವರು ಭ್ರಷ್ಟಾಚಾರದ ಕಾರಣಕರ್ತರಲ್ಲ. ಅವರನ್ನು ಭ್ರಷ್ಟಾಚಾರದಲ್ಲಿ ತೊಡಗಿಸಿದವರು ಬಯಲಿಗೆ ಬೀಳುತ್ತಾರೆ. ಅದು ರಾಜಕಾರಣಿಗಳಿಗೆ ಬೇಕಿಲ್ಲ.

ಪ್ರಜಾಸತ್ತೆಗೆ ಮಾರಕವಾದ ಈ ಭ್ರಷ್ಟಾಚಾರದ ಇನ್ನೊಂದು ಭೀಕರ, ಮಾರಕ ಕಾರಣ ಉಂಟು. ಭ್ರಷ್ಟಾಚಾರಿ ಯಾವ ಜಾತಿಯವನು ಎಂಬುದನ್ನು ಅವಲಂಬಿಸಿ ಅವರ ಬಗ್ಗೆ ಕ್ರಮ ಜರುಗಿಸಬೇಕೆ ಬೇಡವೆ ಎಂಬುದು ನಿಂತಿದೆ. ಮೊನ್ನೆ ತಾನೆ ಲೋಕಾಯುಕ್ತರು ಪತ್ತೆ ಹಚ್ಚಿದ ಸಮಾಜ ಇಲಾಖೆಯಲ್ಲಿ ಆದ ಭ್ರಷ್ಟಾಚಾರಕ್ಕೆ ಕಾರ್ಯದರ್ಶಿಗಳು ಹೊಣೆಯೆಂದು ನಿರ್ಧರಿಸಿದಾಗ ದಲಿತ ಸಂಘರ್ಷ ಸಮಿತಿ ಪ್ರತಿಭಟನಾ ಮೆರವಣಿಗೆ ಹೊರಡಿಸಿದರು. ಅಲ್ಲಿ ಎಲ್ಲಿಯೊ ಒಂದು ಹಳ್ಳಿಯಲ್ಲಿ ಅವರ ಸಂಬಂಧಿಕರನ್ನು ಜಾತಿನಿಂದನೆ ಮಾಡಿದರೆಂಬ ಹುಯಿಲೆದ್ದಿತು! ಕೆಲವರ ಮೇಲೆ ಫಿರ್ಯಾದಿ ದಾಖಲಾಯಿತು. ಅಂದಮೇಲೆ ಕಳಂಕಿತ ಅಧಿಕಾರಿಯ ಮೇಲೆ ಕ್ರಮ ಕೈಗೊಳ್ಳುವ ಧೈರ್ಯ ಯಾರಿಗೆ ಬಂದೀತು? ಹೀಗೆಯೆ ಇತರ ಜಾತಿಯವರ ಮೇಲೆ ಕ್ರಮ ಕೈಗೊಳ್ಳದಂತೆ ಆಯಾ ಜಾತಿಯ ಶಾಸಕರು, ಮಂತ್ರಿಗಳು, ಮುಖಂಡರು ರಕ್ಷಣೆಗೆ ಸಜ್ಜಾಗುತ್ತಾರೆ!

ಅಂದಮೇಲೆ ರಾಷ್ಟ್ರಪತಿಗಳ ಕನಸಿನ ಸ್ವಚ್ಛ, ಶುಭ್ರ, ಪ್ರಾಮಾಣಿಕ ಅಭಿವೃದ್ಧಿಹೊಂದಿದ ಭಾರತ ನನಸಾಗುವುದು ಬರೀ ಕನಸು! ಶುದ್ಧ ಭ್ರಮೆ! ಪ್ರಜಾಸತ್ತೆ ಇಲ್ಲಿ ಸತ್ತಂತೆಯೆ. ಚರ್ಚಿಲ್ ಹೇಳಿದ ಭವಿಷ್ಯ ಮಾತ್ರ ದಿಟವಾದೀತು: ಭಾರತೀಯರು ಪ್ರಜಾಸತ್ತೆಗೆ ಅನರ್ಹರು.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ
ಬೆಂಗಳೂರು - ೫೬೦ ೦೮೬

# ಫಲಿತವಾಗಲಿ ಕಾವ್ಯಬುದ್ಧ



**ಒಮ್ಮೆ** ಹಿಂತಿರುಗಿ ನೋಡಿದರೂ ಸಾಕು, **ಸ್ವಾತಂತ್ರ್ಯದ ಕನಸು ಮತ್ತು ಸಮಾನತೆಯ ಹಸಿವು** ನಮ್ಮ ಕಾವ್ಯಪರಂಪರೆಯ ಜೀವಧ್ವನಿಯಾಗಿದೆ. ಹೀಗೆಂದೊಡನೆ ಕೆಲವರಲ್ಲಾದರೂ ಒಂದು ಪ್ರಶ್ನೆ ಹುಟ್ಟಿಕೊಳ್ಳುವ ಸಾಧ್ಯತೆಯಿದೆ; ನಾಲ್ವತ್ತೇಳರಲ್ಲಿ ನಮಗೆ ಸ್ವಾತಂತ್ರ್ಯ ಬಂದಾಯಿತಲ್ಲ, ಮತ್ತೆಂಥ ಸ್ವಾತಂತ್ರ್ಯದ ಕನಸು ?...

ಈ ಪ್ರಶ್ನೆಗೆ ಒಂದು ಮರುಪ್ರಶ್ನೆ ತನ್ನಿಂದ ತಾನೇ ಹುಟ್ಟಿಕೊಳ್ಳುತ್ತದೆ : ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದದ್ದು ನಿಜ, ಆದರೆ ಈ ದೇಶವಾಸಿಗಳಿಗೆಲ್ಲ ಬಂದಿದೆಯೇ ?... ಇಲ್ಲವಲ್ಲ! ಈ ದೇಶದಲ್ಲಿ ಸರಿಸುಮಾರು ಶೇಕಡ ೫೦ರಷ್ಟಿರುವ ಹೆಣ್ಣುಮಕ್ಕಳನ್ನು ನಾವು ಇಂದಿನವರೆಗೂ ನಮ್ಮ ಸಮ-ಸಮ ನಡೆಯುವುದಕ್ಕೆ ಅವಕಾಶ ಕೊಟ್ಟಿಲ್ಲ, ಅವರೇನಿದ್ದರೂ ನಮ್ಮ ಹಿಂದೆ - ನಮ್ಮ ಬೆನ್ನಿಗೇ ಬರಬೇಕೆಂದು ಭಾವಿಸುತ್ತೇವೆ. ಅಡುಗೆಕೋಣೆಯ ಕೆಲಸ, ಅವಳಿಗಾಗಿಯೇ ಮೀಸಲು ಎಂದು ನಮ್ಮೊಳಗೇ ನಾವೊಂದು ಸಂವಿಧಾನ ಬರೆದುಕೊಂಡಿದ್ದೇವೆ. ಮಾತಿನಲ್ಲಿ ಸಮಾನತೆ - ಸ್ವಾತಂತ್ರ್ಯ ಎಂಬುದಿದ್ದರೂ ಪರಂಪರೆಯಾಗಿ ಅವಳ ಸುತ್ತ ಹೆಣೆದ ನಿರ್ಬಂಧದ ಸರಳು ಇನ್ನೂ ಕಳಚಿಬಿದ್ದಿಲ್ಲ!

ಇನ್ನೊಂದು ವರ್ಗ ಇದೆ - ಅದು ಧ್ವನಿ ಕಳೆದುಕೊಂಡವರ ವರ್ಗ, ಬೆವರಿನ ವರ್ಗ. ಆ ವರ್ಗವು ಈ ದೇಶದ ಶೇಕಡ ೩೩ರಷ್ಟಿದೆ. 'ಬಡತನದ ರೇಖೆಗಿಂತ ಕೆಳಗಿನವರು' ಎಂದು ಅವರಿಗಾಗಿ ಹೊಸದೊಂದು ವಾಕ್ಯ ಹುಟ್ಟುಹಾಕಿದ್ದೇವೆ. ಈಗ ಹೇಳಿ, ಈ ಎರಡು ವರ್ಗ ಬಿಟ್ಟು ಈ ದೇಶ ಇದೆಯೇ ?... ಆರ್ಥಿಕ ಸ್ವಾತಂತ್ರ್ಯ ಇಲ್ಲ, ಉದ್ಯೋಗ ಸ್ವಾತಂತ್ರ್ಯ ಇಲ್ಲ, ಸಮಾನತೆಯ ಸ್ವಾತಂತ್ರ್ಯ ಇಲ್ಲ, ಆದರೂ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಿದೆ! ಎಲ್ಲರೂ ಸರಿ-ಸಮಾನರು ಎಂದು ನಮ್ಮ ಸಂವಿಧಾನ ಹೇಳುತ್ತದೆ. ಎಲ್ಲರೂ ಸರಿ-ಸಮಾನರಾಗಿದ್ದರೆ ಯಾಕೆ ಹೀಗೆ ವರ್ಗ ತಾರತಮ್ಯ ಉಳಿದುಬಿಟ್ಟಿದೆ? ಇದರ ಹಿಂದೆ ಯಾರಿದ್ದಾರೆ?... ಅಥವಾ ಯಾರ ಯಾರ ದೌರ್ಬಲ್ಯಗಳು ಇವಕ್ಕೆಲ್ಲ ಕಾರಣ ?...

ಇದು ಬದುಕಿನ ಮೂಲಭೂತ ಪ್ರಶ್ನೆಯಾದುದರಿಂದ ನಮ್ಮ ಕಾವ್ಯ – ಅದೂ ಇಂದಿನ ಕಾವ್ಯ – ಈ ಪ್ರಶ್ನೆಗೆ ಧ್ವನಿ ಕೊಡಬೇಕಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಆಧುನಿಕ ಕನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯಗಳೆಂದು ವಿಭಾಗಿಸಿಕೊಂಡದ್ದುಂಟು. ಹಾಗೆ ನೋಡಿದರೆ ಸ್ವಾತಂತ್ರ್ಯದ ಕನಸಿಗಾಗಿ ಈ ದೇಶವನ್ನೂ, ಈ ನಾಡಿನ ಎಲ್ಲ ಗತವೈಭವಗಳನ್ನೂ ನಮ್ಮ ನವೋದಯ ಕಾಲದ ಕವಿಗಳು ಅದೊಂದು ಕರ್ತವ್ಯ ಎಂಬ ಭಾವನೆಯಿಂದ ಕೀರ್ತಿಸಿದ್ದುಂಟು. ಸ್ವಾತಂತ್ರ್ಯ ಸಿಕ್ಕಿದ ಮೇಲೂ ಅವರ ಕವನಗಳು ವಿಶ್ರಾಂತಿ ಪಡೆಯಲಿಲ್ಲ, ಬೇರೆ ಬೇರೆ ಆಯಾಮಗಳಿಗೆ ಹೊರಳಿಕೊಳ್ಳಲು ಪ್ರಯತ್ನಿಸಿದವು. ಕೆಲವು ಗೆದ್ದವು; ಕೆಲವು ಸೋತವು. ಮುಂದಿನ ಮುಖ್ಯ ಕಾಳಜಿ ನಮ್ಮ ಕವಿಗಳ ಪಾಲಿಗೆ ಸಮಾನತೆಯದ್ದಾಗಿತ್ತು; ಬಡತನದ ವಿರುದ್ಧ ಹೋರಾಡುವುದಾಗಿತ್ತು. ಮೂಢನಂಬಿಕೆಗಳ ವಿರುದ್ಧ ಸೆಣಸುವುದಾಗಿತ್ತು. ನವೋದಯದ ಬೆನ್ನೇರಿ ಬಂದ ನಮ್ಮ ಕೆಲವು ಪ್ರಗತಿಪರ ಬರಹಗಾರರು ಬದಲಾವಣೆಯ ಆ ದಾರಿಯನ್ನು ಇನ್ನಷ್ಟು ನಿಚ್ಚಳಗೊಳಿಸಿದರೆಂಬುದು ನಿಜ.



ಅಕ್ಷರಗಳ ಕಸಬಿನಾಚೆಯೂ ತಮಗೊಂದು ಹೊಣೆಗಾರಿಕೆ ಇದೆ ಎಂಬುದನ್ನು ಮನಗಂಡ ಒಂದು ಸಮರ್ಥ ಪಡೆ ಸಿದ್ಧವಾಯ್ತು. ಅ.ನ.ಕೃ., ನಿರಂಜನ, ಕಟ್ಟೀಮನಿ, ದಿನಕರ ದೇಸಾಯಿ, ಕೋ.ಚೆ., ಮುಂತಾದವರಿದ್ದ ಪಡೆಯದು. ಕವಿಗಳನ್ನೇ ತರಾಟೆಗೆ ತೆಗೆದುಕೊಂಡ ಆ ಕಾಲದ ಇನ್ನೊಬ್ಬ ಕವಿ (ದಿನಕರ ದೇಸಾಯಿ) ಐವತ್ತು ವರ್ಷಗಳಷ್ಟು ಹಿಂದೆ ತಮ್ಮ ಒಂದು ಚೌಪದಿಯಲ್ಲಿ ಹೇಳುತ್ತಾರೆ :

**ವಿಷ್ಣು ನಾಯ್ಕ**

*ಎಲೆ ಕವಿಯೇ, ಸುಡು ನಿನ್ನ ಕವನಗಳ ಕೀರ್ತಿ*
*ತಿಳಿಬಾನು ಗಿರಿಕಾನುಗಳೆ ನಿನ್ನ ಸ್ಫೂರ್ತಿ.*
*ಕೇರಿಕೇರಿಗಳಲ್ಲಿ ಉರಿದರೂ ಜ್ವಾಲೆ*
*ಕವನ ಕಟ್ಟುವೆ ನೀನು ಮಲ್ಲಿಗೆಯ ಮೇಲೆ !*

ನಿಜ, ಮಲ್ಲಿಗೆಯ ಮೇಲೆ ಕವಿತೆ ಬರೆಯುವವರೂ (ನಿಸ್ಸಂದೇಹವಾಗಿ) ಕವಿಗಳೇ. ಆದರೆ ಅಷ್ಟು ಮಾತ್ರವೇ ಸಾಕೆ ?... ಈ ಪ್ರಶ್ನೆ ಕೇವಲ ಕವಿಗಳಿಗೆ ಮಾತ್ರವಲ್ಲ, ಸಾಹಿತ್ಯದ ಆಡುಂಬೊಲದಲ್ಲಿರುವ ಎಲ್ಲ ಪ್ರಕಾರದ ಅಕ್ಷರ ಕಸಬಿನವರಿಗೂ ಕೇಳಬೇಕಾದುದು. ನನಗೆ ಅನಿಸುವುದು, ಎಲ್ಲಿಯವರೆಗೆ ಕಾವ್ಯ ಬೆಂದೆದೆಗಳಿಗೆ ಕೊರಳಾಗುವುದಿಲ್ಲವೋ ಅಲ್ಲಿಯವರೆಗೆ ಅವರು ಎಷ್ಟು ಹೂವರಳಿಸಿದರೂ ಆದ್ಯತೆಯಲ್ಲಿ ಸೋಲುತ್ತಿದ್ದಾರೆಂದೇ ಅರ್ಥ. ಈ ಪ್ರಗತಿಶೀಲರ ಕಾಲಘಟ್ಟದ ನಂತರ ಕಾಣಿಸಿಕೊಂಡದ್ದು ನವ್ಯ. ಒಬ್ಬ ಅತ್ಯುತ್ತಮ ಶಿಲ್ಪಿಯ ಅಮೃತಮೂರ್ತಿಯಂತೆ ಅಂದಿನ ಅನೇಕ ಸಮರ್ಥ ಕವಿಗಳ ಕವಿತೆಗಳೂ ಮೂಡಿಬಂದವೆಂಬುದು ಸತ್ಯ. ಆದರೆ ಅವು ಸಮಷ್ಟಿಯ ದೈನಂದಿನ ತುರ್ತು ಮತ್ತು ಭವಿಷ್ಯದ ಕನಸುಗಳಿಗೆ ಧ್ವನಿಯಾಗುವಲ್ಲಿ ನಿರೀಕ್ಷಿತ ಪ್ರಮಾಣದಲ್ಲಿ ಯಶಸ್ವಿಯಾಗದಿರುವುದೂ ಕೂಡ ಸತ್ಯವೇ.

ದೇಶಕ್ಕೆ ಸ್ವಾತಂತ್ರ್ಯ ಬಂದ ದಶಕದಲ್ಲಿ ಅಕ್ಷರವಂಚಿತರಾಗಿದ್ದ ಒಂದು ಬೃಹತ್ ಪಡೆ ಈ ನೆಲದಲ್ಲಿ ಇತ್ತು. ಅವರು ಎಲ್ಲ ಅರ್ಥದಲ್ಲೂ ಪರಾವಲಂಬಿಗಳಾಗಿದ್ದರು. ನೊಗ ಹೇರಿಕೊಂಡ ಜಾನುವಾರುಗಳಂತೆ ಈ ಜನ ದುಡಿಯುತ್ತಿದ್ದರು. ಊಳಿಗಮಾನ್ಯ ವ್ಯವಸ್ಥೆಯ ಬಲಿಪಶುಗಳಾಗಿದ್ದರು. ಅವರಲ್ಲಿ ಒಂದಷ್ಟು ಜನಕ್ಕೆ ೬೦-೭೦ರ ದಶಕದಲ್ಲಿ ಅಕ್ಷರದ ಬಲ ಬಂದಿತ್ತು. ನಾಲಿಗೆಗಳಿಗೆ ಹರಿತ ಬಂದಿತ್ತು. ಮನಸ್ಸಿನಲ್ಲಿ ದೃಢತೆ ತುಂಬಿತ್ತು. ಬಾಯ್ಬಿಟ್ಟರು. ''ದಾರಿಬಿಡಿ'' ಎಂದರು. ಆ ಧ್ವನಿಗಳಿಗೆ ಭೀಮಬಲವಾಗಿ ಎಂಬತ್ತರ ದಶಕಾರಂಭದಲ್ಲಿ ಬಂಡಾಯ ಕಾವ್ಯ ಎದ್ದು ನಿಂತಿತು. ಇದನ್ನೇ ನಾವು ದಲಿತ-ಬಂಡಾಯ ಕಾವ್ಯಾಂದೋಲನ ಎಂದು ಕರೆಯುತ್ತ ಬಂದಿದ್ದೇವೆ. ನಿಜವಾಗಿಯೂ ಸಾಹಿತ್ಯ ಒಂದು ಜನಾಂದೋಲನವಾಗಿ - ಜನಧ್ವನಿಯಾಗಿ ಮನ-ಮನೆಗೆ ಮುಟ್ಟಿದ್ದು, ತಟ್ಟಿದ್ದು ಆ ಕಾಲಾವಧಿಯಲ್ಲೇ. ವರ್ಗ ಸಂಘರ್ಷದ ಪರಿಕಲ್ಪನೆಗೆ ನಾಡಿನುದ್ದ ಸ್ಪಷ್ಟತೆ ಪ್ರಾಪ್ತವಾದದ್ದೂ ಆ ಸಂದರ್ಭದಲ್ಲೇ.

ಆಧುನಿಕ ತಂತ್ರಜ್ಞಾನ ಮತ್ತು ಜಾಗತೀಕರಣದ ಪರಿಣಾಮಗಳಿಂದಾಗಿ ನಮ್ಮ ಹೊಸ ತಲೆಮಾರಿನ ಬರಹಗಾರರ ಚಿಂತನಕ್ರಮದಲ್ಲಿ ಒಂದಷ್ಟು ಬದಲಾವಣೆಗಳನ್ನು ಕಾಣುತ್ತೇವೆ. ಅಲ್ಲಿ ಹೊಸತನ ಇಲ್ಲವೆನ್ನಲಾರೆ, ಆದರೆ ಆ ನಯಗಾರಿಕೆಯ ಕಾವ್ಯಕುಸುರಿತನ ''ಜನಕಾವ್ಯ''ದ ಪರಿಕಲ್ಪನೆಗೆ ಅಷ್ಟಾಗಿ ಹೊಂದಿಕೊಳ್ಳುತ್ತಿಲ್ಲ, ಭಾಷೆಯ ಚಮತ್ಕಾರ ಮಾತ್ರವೇ ಜನಸಾಮಾನ್ಯರ

ತುರ್ತುಗಳಿಗೆ ಉತ್ತರವಾಗಲಾರದು. ಆದುದರಿಂದ ನಾನು ಯಾವ ಸಂಕೋಚವನ್ನೂ ಇಟ್ಟುಕೊಳ್ಳದೆ ಹೇಳಬಹುದಾದ ಮಾತೊಂದಿದೆ : ಬಂಡಾಯ ಕಾವ್ಯವು ಹೊಸ ಆಯಾಮಗಳೊಂದಿಗೆ ಮತ್ತೆ ಮುಂಚೂಣಿಗೆ ಬರಬೇಕಾಗಿದೆ. ಹಾಗೆ ಬರುವುದಕ್ಕೆ ನಮ್ಮ 'ಪಾಲಕವರ್ಗ'ವೂ ಒಂಚೂರು ಸಹಕರಿಸಬೇಕಾಗಿದೆ. ನಮ್ಮ ಹೊಸತಲೆಮಾರಿನ ಬರಹಗಾರರಿಗೆ, 'ಒಡಲ ಉರಿಹಸಿವೆ'ಯ ಅನುಭವ ಕಡಿಮೆ ! 'ನಮ್ಮ ಕಷ್ಟ ನಮ್ಮ ಮಕ್ಕಳಿಗೆ ಬರದಿರಲಿ' ಎಂಬ ಪ್ರಾಮಾಣಿಕ ಕಳಕಳಿಯಿಂದ ನಮ್ಮ ಪಾಲಕವರ್ಗ ಅವರ ಕೂದಲೂ ಕೊಂಕದಂತೆ ಸಾಕಿ ಬೆಳೆಸಿದ್ದಾರೆ. ಅದು ಖಂಡಿತ ತಪ್ಪಲ್ಲ. ಆದರೆ ಅವರಿಗೆ ಶ್ರಮಸಂಸ್ಕೃತಿಯ ಜೀವಂತ ಅನುಭವವನ್ನಾದರೂ ಕಟ್ಟಿಕೊಡಬಾರದೇ ? ಹೊಲ-ತೋಟಗಳ ಪರಿಚಯ ಇದ್ದವರು ರೈತರ-ಕೂಲಿಕಾರರ ಕಷ್ಟವನ್ನು ಸಹಜವಾಗಿ ಗ್ರಹಿಸಬಲ್ಲರು.

ಸಾಕು, ಕಣ್ಣಿಗೆ ಕಾಣುವ ಕೈಗಳ ಕೊಳೆಯ ಬಗೆಗಷ್ಟೇ ಮಾತನಾಡುವುದು ಸಾಕು; ಕಣ್ಣಿಗೆ ಕಾಣದ ನಿರ್ಲಜ್ಜ ಒಳಕೈಗಳನ್ನು ಜನಸಂತೆಯಲ್ಲಿ ಹೆಡೆಮುರಿ ಕಟ್ಟಿ ನಿಲ್ಲಿಸಿ, ಉಗುಳುವ ಕೆಲಸಕ್ಕೆ ಕನ್ನಡ ಕಾವ್ಯ ಸಿದ್ಧವಾಗಬೇಕಾಗಿದೆ. ಕೊಳೆತ ಮನಸುಗಳ ಒಳಗೆ ಕಾವ್ಯದ ದುರ್ಬೀನು ದೃಷ್ಟಿ ಹರಿಯಬೇಕಾಗಿದೆ. ಎಂಬತ್ತರ ದಶಕದಲ್ಲಿ 'ಖಡ್ಗವಾಗಲಿ ಕಾವ್ಯ' ಎಂಬ ಘೋಷಣೆಯನ್ನು ಕೇಳಿದ್ದೇವೆ. 'ಹರಿತವಾಗಲಿ ಕಾವ್ಯಖಡ್ಗ' ಎಂಬ ಕರೆಗೆ ಸಿದ್ಧವಾಗಿ ನಿಂತಿದೆ - ಪ್ರಸ್ತುತ ಸಂದರ್ಭ.

'ಜನ ಬದುಕಲಿ' ಎಂದು ಕವಿ ರಾಘವಾಂಕ ತನ್ನ ಕೃತಿಯನ್ನು ಕೊಟ್ಟ; 'ಮಾನವ ಕುಲ ಒಂದೇ' ಎಂಬ ನಿಲುವಿನೊಂದಿಗೆ ಆದಿಕವಿ ಪಂಪ ತನ್ನ ಕಾವ್ಯ ಕಟ್ಟಿದ. ಹದ್ದುಮೀರಿ ವರ್ತಿಸುವವರಿಗೆ 'ಅನಲಾನಿಲ ಸಂಯೋಗ' ದಿಂದೊದಗುವ ಕೇಡಿನ ಧ್ವನಿಯಾಗಿ ರನ್ನ ತನ್ನ ಗದಾಯುದ್ಧವನ್ನು ಹೆಣೆದ. 'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಎಂಬ ನಿಲುವನ್ನು ಪ್ರತಿಪಾದಿಸುತ್ತ ರಾಷ್ಟ್ರಕವಿ ಕುವೆಂಪು ಬರೆದೇ ಬರೆದರು. ಇಂಥ ಒಂದು ಮಹಾನ್ ಪರಂಪರೆ ನಮ್ಮ ಬೆನ್ನಿಗಿರುವಾಗಲೂ ನಮ್ಮ ಕಾವ್ಯ ಹಾಡಿದ್ದನ್ನೇ ಹಾಡಿದರೆ ಸಾಕೇ ?...

ಇಂದು ನಾವು ಎಂಥ ಬಿಕ್ಕಟ್ಟನ್ನು ಎದುರಿಸುತ್ತಿದ್ದೇವೆ ಎಂಬುದನ್ನು ನೆನಪು ಮಾಡಿಕೊಂಡರೂ ಸಾಕು, ಭವಿಷ್ಯದ ಬಗ್ಗೆ ಭಯ ಹುಟ್ಟುತ್ತದೆ. ಒಂದು ಮುಖ್ಯ ಪ್ರಶ್ನೆಯನ್ನು ನಮ್ಮ ಲೇಖಕರು ಕೇಳಿಕೊಳ್ಳಬೇಕಾದುದಿದೆ. ಕೇವಲ ಬರೆದು ಮುದ್ರಣಕ್ಕೆ ಕಳಿಸಿಕೊಡುವುದು ಮಾತ್ರವೇ ನಮ್ಮ ಎದುರಿಗೆ ಇರುವ ಕರ್ತವ್ಯವೇ ?... ಅಥವಾ ಆ ಬರವಣಿಗೆಯಲ್ಲಿದ್ದುದನ್ನು ಬದುಕಿ ತೋರುವುದೋ ?... ವ್ಯವಸ್ಥೆ ಕೆಟ್ಟಿದೆ ಎಂದು ಕೂಗಿಡುವ ಬರಹಗಾರ ಬೀದಿಗೂ ಬಂದು, ಆ ವ್ಯವಸ್ಥೆಯನ್ನು ಸರಿಪಡಿಸುವ ಜನಾಂದೋಲನವನ್ನು ಹುಟ್ಟುಹಾಕಬೇಕಾಗಿದೆ. 'ಬರವಣಿಗೆ ಮಾತ್ರ ನಮ್ಮದು; ಹೋರಾಟ ನಿಮ್ಮದು' ಎನ್ನುವುದು ಬದ್ಧತೆ ಇರುವ ಬರಹಗಾರರ ಲಕ್ಷಣವಲ್ಲ. ಈಗ ಎಂಥ ಬರವಣಿಗೆ ನಮ್ಮ ಮಧ್ಯ ಇದೆಯೆಂದರೆ, ನಾವು ರಾಜಕಾರಣಿಗಳ ದುಷ್ಟ ಮುಖವನ್ನು ನಮ್ಮ ಕೃತಿಗಳ ಮೂಲಕ ಅನಾವರಣಗೊಳಿಸುತ್ತೇವೆ. ರಾಜಕಾರಣಿಗಳನ್ನು ಮುಟ್ಟಿ ಮುಟ್ಟಿ ಮಾತನಾಡಿಸುತ್ತೇವೆ. ಆದರೆ ಅವರ ಮನಸ್ಸಿನ ಒಳಗೆ ಇಳಿಯುವುದಿಲ್ಲ. ಬಡವರ ಬಗ್ಗೆ ಮಾತನಾಡುತ್ತೇವೆ, ಅವನ ಗುಡಿಸಿಲ ಬಾಗಿಲು ತಟ್ಟುವ ಮಟ್ಟಿಗೆ ಮಾತ್ರ. ಅವನ ಮನೆಯ-ಮನಸ್ಸಿನ ಒಳಗೆ ಹೋಗಿ ಇಳಿಯುವುದಿಲ್ಲ! ನಮ್ಮ ಇಂದಿನ ತುರ್ತು ಎಲ್ಲರ ಮನಸ್ಸಿನ ಒಳಗೂ ಇಳಿಯುವುದು. ನೊಂದವರೂ ಸೇರಿ, ತಿಂದವರೂ ಸೇರಿ ಎಲ್ಲರ ಮನಸ್ಸಿನ ಒಳಗೆ ಇಂದಿನ ಕಾವ್ಯ – ಬೇರೆ ಬೇರೆ ಉದ್ದೇಶಗಳಿಗಾಗಿ – ದಿಟ್ಟ ಹೆಜ್ಜೆ ಇಡಬೇಕಾಗಿದೆ. ಹೋರಾಟ ಬೇಕಾಗಿಲ್ಲ, ಬರೆದು ಮುದ್ರಣಕ್ಕೆ ಕಳಿಸುವುದು ಮಾತ್ರ ನನ್ನ ಕೆಲಸ – ಎಂಬ ನಿಲುವಿನ ಬರಹಗಾರರ ಕೃತಿಗಳನ್ನು ನಾನು 'ಓದುವ ಸಾಹಿತ್ಯ' ಎಂದಷ್ಟೇ ಕರೆಯಬಲ್ಲೆ.

ಇಡೀ ಜಗತ್ತು ನೋವು ಮತ್ತು ಪ್ರೀತಿಗಳಿಂದ ತುಂಬಿದೆ. ಪ್ರತಿಯೊಬ್ಬ ಲೇಖಕನಿಗೆ ಇದರ ಅರಿವು ಇರಬೇಕು :

*ಜಗದಗಲ ತುಂಬಿರುವ*
*ನೋವಿನಲಿ ಪೆನ್ನದ್ದು*
*ಅರಳುವುದು ಅಕ್ಷರವು ಕವನವಾಗಿ;*
*ನೋವು ಸಾಯುವವರೆಗೆ*
*ಕವನ ಸಾಯುವುದಿಲ್ಲ*
*ನಿಲ್ಲುವುದು ಸಾಂತ್ವನದ ಸಿಲುಬೆಯಾಗಿ.*

*ಜಗದಗಲ ತುಂಬಿರುವ*
*ಪ್ರೀತಿಯಲಿ ಪೆನ್ನದ್ದು*
*ಅರಳುವುದು ಅಕ್ಷರವು ಹೂವೇ ಆಗಿ;*
*ಪ್ರೀತಿ ಸಾಯುವವರೆಗೆ*
*ಕವನ ಸಾಯುವುದಿಲ್ಲ*
*ಸಲ್ಲುವುದು ಮಾನವನ ಮಾನವಾಗಿ.*

('ಕವಿಗೆ ಕಿವಿಮಾತು' - ವಿಷ್ಣು ನಾಯ್ಕ)

ಇಂದಿನ ಕಾವ್ಯವನ್ನು ಯಾವ ಸಿದ್ಧಾಂತದ ಅಡಿಯಲ್ಲಿ ಹೆಸರಿಸಬೇಕು ?... ಇದರ ಅಸ್ಮಿತೆಯನ್ನು ಹೇಗೆ ಗುರುತಿಸಬೇಕು ? ಎಂಬೆಲ್ಲ ಪ್ರಶ್ನೆಗಳು ಕಳೆದೆರಡು ದಶಕಗಳಲ್ಲಿ ಕೇಳಿಬರುತ್ತಲೇ ಇವೆ. ಸಾಹಿತ್ಯ ಚಳುವಳಿಗಳೆಲ್ಲವೂ ನಿಂತುಹೋದ ಶೂನ್ಯಾವಸ್ಥೆಯಿದು – ಎಂದು ವಿಷಾದಿಸುವವರೂ ಇದ್ದಾರೆ. ಆದರೆ ನನಗೆ ಹಾಗನಿಸುತ್ತಿಲ್ಲ. ನನ್ನ ದೊಡ್ಡ ಭರವಸೆ ಹೊಸ ತಲೆಮಾರಿನ ಬರಹಗಾರರೇ ಆಗಿದ್ದಾರೆ. 'ಮಣ್ಣ ಗುಣಕ್ಕೆ ಹೊಂದಬಲ್ಲ ಹೊಸ ಬತ್ತ'ವನ್ನು ಹುಡುಕಿಕೊಳ್ಳುವ ಎಲ್ಲ ಬಗೆಯ ಶಕ್ತಿ ಅವರಿಗಿದೆ. ಸ್ವೋಪಜ್ಞತೆಗೂ ಕೊರತೆಯಾಗದಂತೆ ಬರೆಯಬಲ್ಲ ಶಕ್ತಿ ಇದೆ. ಭರವಸೆ ಮೂಡಿಸಿದ ಹೊಸ ತಲೆಮಾರಿನ ಅನೇಕ ಹೆಣ್ಣುಮಕ್ಕಳು ರಂಗಕ್ಕೆ ಬಂದಿದ್ದಾರೆ. ಅವರು ಸ್ತ್ರೀಸಂವೇದನೆಯ ಆಚೆಯೂ ಮತ್ತೊಂದು ಲೋಕವಿದೆ ಎಂಬುದನ್ನು ಕಾಲಕ್ರಮೇಣ ಕಂಡುಕೊಳ್ಳುತ್ತಾರೆಂಬ ನಂಬಿಕೆ ನನ್ನದಾಗಿದೆ.

ಒಟ್ಟೂ ಆಧುನಿಕ ಕಾವ್ಯಪರಂಪರೆಯ, ಅಂದರೆ, ೨೦ನೆಯ ಶತಮಾನದ ಎಲ್ಲ ಕಾಲಘಟ್ಟಗಳ ಕಾವ್ಯದ ಒಳ್ಳೆಯ ಅಂಶಗಳನ್ನು ಹೆಕ್ಕಿ ಹೆಕ್ಕಿ ತಮ್ಮ ಕಾವ್ಯದಲ್ಲಿ ಹೊಸ ಮಾತುಗಳೊಂದಿಗೆ ಇಂದಿನವರು ಭಟ್ಟಿ ಇಳಿಸುತ್ತಿದ್ದಾರೆ. ಇಂದು ನಾವು ಓದುತ್ತಿರುವ ಕಾವ್ಯದಲ್ಲಿ ಜಾತಿಯಿಲ್ಲ, ಧರ್ಮಗಳ ಹಂಗಿಲ್ಲ, ವ್ಯಕ್ತಿಗತ ಮುಲಾಜಿಲ್ಲ. ಹಾಗೆ ನೋಡಿದರೆ ಇಂದಿನ ಕಾವ್ಯವು ಹಿಂದೆಂದಿಗಿಂತ ಹೆಚ್ಚು 'ಪ್ರಜಾಪ್ರಭುತ್ವ'ವಾದಿಯಾಗಿದೆ. ಆದರೆ ಇಷ್ಟೇ ಸಾಲದು. ಹೊಸ ಕಾಲದ ಕರೆ ಇಷ್ಟಕ್ಕೇ ತೃಪ್ತಿಪಡುವಂತೆ ಇಲ್ಲ. ಇನ್ನಷ್ಟು ಜನಧ್ವನಿಯಾಗಿರುವ, ಸವಾಲುಗಳಿಗೆ ಮುಖಾಮುಖಿಯಾಗುವ ಅಗತ್ಯವನ್ನು ಒತ್ತಿ ಒತ್ತಿ ಹೇಳುತ್ತದೆ. ಬರವಣಿಗೆಗೆ ಕಳೆಕಟ್ಟುವ ಕಲಾತ್ಮಕತೆಯನ್ನು ಇಟ್ಟುಕೊಂಡೇ ಸಮಷ್ಟಿಯನ್ನು ದಿಟ್ಟತನದಿಂದ ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಕಾವ್ಯ ಬೇಕಾಗಿದೆ. ಆದ್ದರಿಂದ,

*ಬತ್ತದಿರಲಿ ಬಾವಿಯ ನೀರು*
*ಮುಖ ನೋಡಿಕೊಳ್ಳಬೇಕಲ್ಲಿ ಚಂದ್ರ ತನ್ನ !*

*(೨೦೧೩ ಫೆಬ್ರವರಿ ೯, ೧೦, ೧೧ರಂದು ವಿಜಾಪುರದಲ್ಲಿ ನಡೆದ ೭೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ, ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿ ಮಾಡಿದ ಭಾಷಣವನ್ನಾಧರಿಸಿದ ಲೇಖನ.)*

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪
ಉತ್ತರ ಕನ್ನಡ ಜಿಲ್ಲೆ



## ಪ್ರೇಮ

**ಆ ಉರಿಯಲಿ**
**ಉರಿದು**
**ಕರಕಲಾದರು ಹಲವರು**
**ಅದೇ ದೀಪದ**
**ಬೆಳಕಿನಲಿ**
**ಬದುಕನರಸಿದರು ಕೆಲವರು**
**ಅದನ್ನೇ**
**ಪ್ರೇಮವೆನ್ನುವರು**

**ಹೊಸಕೊಪ್ಪ ಶ್ರೀಧರ**
ಆಲೂರು, ಹೊಸಕೊಪ್ಪ, ದೇಮ್ಲಾಪುರ ಅಂಚೆ
ಕೋಣಂದೂರು ಮಾರ್ಗ, ತೀರ್ಥಹಳ್ಳಿ - ೫೭೭ ೪೨೨

# ಅಲಾಯಿ

''ಅಲಾಯಿ, ಒಂದು ವೇಳೆ, ಒಂದು ವೇಳೆ...'' ಎಂದು ತೊದಲಿದೆ. ''ಹೇಳುವ ನನಗಿಲ್ಲದ ಸಂಕೋಚ ನಿನಗ್ಯಾಕೆ ? ಕೇಳು ಅದೇನು ಕೇಳಬೇಕಿತ್ತು ?'' ''ಒಂದು ವೇಳೆ ನೀನು ಹಾಕಿದ ಷರತ್ತು ಕೇಳಿಯೂ ನಿನ್ನ್ ಮೈ ಮುಟ್ಟಿದ್ದಿದ್ರೆ ಏನ್ ಮಾಡ್ತಿದ್ದೆ'' ಎಂಬ ಕಿಡಿಗೇಡಿತನದ ಪ್ರಶ್ನೆ ಎಸೆದೆ. ''ಆಹಾಹಾ... ಮುಟ್ಟ್‌ತ್ತಿದ್ನಾ? ಅವನ್ಗೆ ಅಷ್ಟು ಧೈರ್ಯ ಎಲ್ಲಿಂದ ಬರ್ಬೇಕು ? ಅವ್ರು ಅಲ್ಲೀವರ್ಗೆ ರೋಪ್ ಹಾಕ್ತಿದ್ದವ್ರು, ತಬ್ಬಿಬ್ಬಾಗಿ ಮುಖ ತಿರುಗ್ಸಿ ಓಡಿದ್ರು. ಅಷ್ಟಕ್ಕೂ ನೀನು ಅಂದ ಹಾಗೆ ಮುಟ್ಟೋಕೆ ಬಂದಿದ್ರೆ... ಕ್ಯಾಕರಿಸಿ ಅವನ್ ಮುಖಕ್ಕೆ ಉಗುಳ್‌ತಿದ್ದೆ'' ಎನ್ನುವಷ್ಟರಲ್ಲಿ ಅವಳ ಮೈ ರೋಷದಿಂದ ಕಂಪಿಸಿದ್ದು ಕಂಡಿತು.

ಡಾ|| ಸಬಿಹಾ ಭೂಮೀಗೌಡ

ಅಲಾಯಿ. ಅಲಾಯಿ ಎಂಬುದು ನನ್ನ ಪಾಲಿಗೆ ಒಂದು ಪದವಲ್ಲ; ಅದೊಂದು ಶಕ್ತಿ; ಪ್ರತಿರೋಧದ ಒಂದು ಸಶಕ್ತ ಸಂಕೇತ. ಅವಳ ಹೆಸರು ಅಲಾಯಿ! ಅಲಾಯಿ ನನಗೆ ಪರಿಚಿತಳಾದುದೂ ವಿಶಿಷ್ಟ ಸನ್ನಿವೇಶದಲ್ಲಿ. ಒರಿಸ್ಸಾದ ರಾಯಗಢ ಬಳಿಯ ಕಾಶೀಪುರ, ಬಾರಿಗಾಂ, ಕುಚೈಪದಾರ್ ಪ್ರಾಂತ್ಯಗಳಲ್ಲಿ ನಡೆದ ಆದಿವಾಸಿಗಳ ಹೋರಾಟದ ಹಿನ್ನೆಲೆಯನ್ನು ದೇವರಂಜನ್‌ನಿಂದ ಕೇಳುತ್ತಿದ್ದಾಗ 'ಅಲಾಯಿ' ಪರಿಚಿತಳಾದಳು. ಅವಳನ್ನು ನೋಡಲೆಂದೇ ನೂರಾರು ಮೈಲು ಪ್ರಯಾಣ ಬೆಳೆಸಿದ್ದೆ. ಗೆಳತಿಯರಾದ ಸರಸಿ ಮತ್ತು ಸುನಂದಾ ಅವರ ಸಾಥ್ ಹುರುಪು ನೀಡಿತ್ತು. ಅದೊಂದು ಹುಚ್ಚು ಎಂದು ನೀವು ಅನ್ನಬಹುದು. ಅಂಥ ಹುಚ್ಚು ಕೆಲವಾದರೂ ನಮಗೆ ಇರಬೇಕು. ಅವು ಇದ್ದಾಗಲೇ ನಮ್ಮ ದೈನಂದಿನ ಯಾಂತ್ರಿಕ ಜೀವನಕ್ರಮಕ್ಕೆ ಒಂದು ತಿರುವು, ರಂಗು, ಮಹತ್ವ ಒದಗಲು ಸಾಧ್ಯ. ಅಂಥ ತಿರುವನ್ನು ಹುಡುಕಿಕೊಂಡು ಹೋಗುವುದು ನನ್ನ ಉದ್ದೇಶವಾಗಿರದಿದ್ದರೂ ಅವಳನ್ನು ನೋಡಬೇಕು, ಅವಳೊಡನೆ ಮಾತಾಡಬೇಕು ಎಂಬ ಆಕಾಂಕ್ಷೆಯಿಂದ ಪಶ್ಚಿಮ ಕರಾವಳಿಯಿಂದ ಪೂರ್ವ ಕರಾವಳಿಯ ಕಡೆಗೆ ಸಾಗಿದ್ದೆ.

ದಾರಿಯುದ್ದಕ್ಕೂ ಬಸವರಾಜ ಕಟ್ಟೀಮನಿಯವರ 'ಅಜ್ಞಾತವಾಸಿ' ಕತೆ, ಮಹಾಶ್ವೇತಾದೇವಿ ಅವರ 'ದೋಪ್ದಿ' ಕತೆ ನನ್ನೊಳಗೆ ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತಿದ್ದವು. ಇಬ್ಬರ ಕತೆಯ ಮುಖ್ಯ ಹೂರಣ ದೌರ್ಜನ್ಯವೇ ಆಗಿದ್ದರೂ, ಕಟ್ಟೀಮನಿ ಮತ್ತು ಮಹಾಶ್ವೇತಾದೇವಿ ಅವರ ಲೋಕದೃಷ್ಟಿಗಳ ಪ್ರತೀಕಗಳಂತೆ ಅವು ಕತೆಯಾಗಿ ಅರಳಿವೆ. 'ಮತ್ತೆ ಬರುತ್ತಿದ್ದರು ಆ ಪೊಲೀಸರು' ಎಂದು ಆರಂಭವಾಗುವ ಕಟ್ಟೀಮನಿಯವರ ಕತೆಯಲ್ಲಿ, ದೇಶಭಕ್ತ ಗಂಡನ ವಿಳಾಸ ತಿಳಿಯಲು ಆತನ ಮಡದಿಯನ್ನು ವಿವಸ್ತ್ರಗೊಳಿಸಿ, ನಿರಂತರ ಅತ್ಯಾಚಾರಕ್ಕೆ ಒಳಪಡಿಸಿ, ತಮಗೆ ಬೇಕಾದ ಮಾಹಿತಿ ಪಡೆಯಲಾಗದ ಹತಾಶೆಯಲ್ಲಿ ಅವಳ ಮೇಲೆ ಮತ್ತೆ ಮತ್ತೆ ದೌರ್ಜನ್ಯವೆಸಗಲು ಬರುವ ಪೊಲೀಸರ ಕ್ರೌರ್ಯಕ್ಕೆ ಒತ್ತು ಬಿದ್ದಿದೆ. ತನ್ನ ಮೇಲಿನ ಆಕ್ರಮಣಕ್ಕೆ 'ಸಾವಾದರೂ ಬರಬಾರದೇ' ಎಂದು ಹಂಬಲಿಸುವ ಆಕೆಯ ಚಿತ್ರ ಕಣ್ಣಿಗೆ ಕಟ್ಟುವಂತೆ ಮೂಡಿದೆ. ಅಂತಹುದೇ ಆದಿವಾಸಿ ಹೆಣ್ಣುಮಕ್ಕಳ ಮೇಲೆ ನಡೆದ ದೌರ್ಜನ್ಯವನ್ನು ಇನ್ನೊಂದು ನೆಲೆಯಲ್ಲಿ ಹೇಳುವ ಮಹಾಶ್ವೇತಾದೇವಿ ಅವರ 'ದೋಪ್ದಿ' ಕತೆಯಲ್ಲಿ, ಆಕೆಯನ್ನು ಸೇನಾ ನಾಯಕನಲ್ಲಿಗೆ ಕರೆದೊಯ್ಯುವ ವೇಳೆ ಆಕೆಗೆ ಉಡುಪು ತೊಡುವಂತೆ ಸೈನಿಕನೋರ್ವ ದೋಪ್ದಿಗೆ ಆದೇಶಿಸುತ್ತಾನೆ. ಆದರೆ ಆಕೆ ಸ್ಪಷ್ಟವಾಗಿ ನಿರಾಕರಿಸುವ ಮೂಲಕ ಬಂಡೇಳುತ್ತಾಳೆ. 'ಅವಳ ಸೀರೆ ಕಳಚುವುದು ತಮಗೆ ಸುಲಭವಾದಷ್ಟು ಸೀರೆ ತೊಡಿಸುವುದು ಅಲ್ಲ' ಎಂಬ ಅರಿವು ಸೇನಾಧಿಕಾರಿ ಹಾಗೂ ಸೈನಿಕರನ್ನು ಬೆಚ್ಚಿಬೀಳಿಸುತ್ತದೆ. ವ್ಯವಸ್ಥೆಗೆ ಪ್ರತಿರೋಧ ತೋರಲು ಹೆಣ್ಣು ನಗ್ನತೆಯನ್ನು ಹೊದ್ದು ನಿಂತಾಗ ಇಡೀ ಲೋಕ ಬೆಚ್ಚಿಬೀಳುವುದನ್ನು ಕಂಡು ಬೆರಗಾಗುತ್ತದೆ.



ಅಲಾಯಿಯ ಬಗ್ಗೆ ಹೇಳದೆ ಇದೇನು ಸಾಹಿತ್ಯಿಕ ಚರ್ಚೆ ನಡೆಸುತ್ತಿದ್ದೇನೆ ಎಂದು ಕೊಂಡಿರೇ ? ಅಲಾಯಿ ನನಗೆ ಕೇವಲ ವರ್ತಮಾನವಲ್ಲ; ಅವಳು ನಮ್ಮ ವಚನಕಾರ್ತಿ ಅಕ್ಕನಾದಿಯಾಗಿ ಬಂದ ಹಲವು ದಿಟ್ಟ ಸ್ತ್ರೀದನಿಗಳ ಒಂದು ಮುಂದುವರಿದ ಕೊಂಡಿ. ಅವಳ ಬಗ್ಗೆ ಕೇಳಿದಂದಿನಿಂದ ಅವಳನ್ನು ಕಾಣುವ ತವಕ; ಅವಳ ಮಾತನ್ನು ಆಲಿಸುವ ತವಕ; ಅವಳ ದಿಟ್ಟ ಪ್ರತಿರೋಧದ ಹಿನ್ನೆಲೆಯನ್ನು ಅರಿಯುವ ಕಾತರ. ಹೇಗಿದ್ದಾಳು ಅಲಾಯಿ ? ಅಕ್ಕನಂತೆಯೇ ? ಲಲ್ಲೇಶ್ವರಿಯಂತೆಯೇ ? ಅಥವಾ ಮಣಿಪುರದಲ್ಲಿ ಸೈನಿಕರ ದೌರ್ಜನ್ಯವನ್ನು ಜಗತ್ತಿಗೆ ಸಾರಲು ಬೇರಾವ ದಾರಿಯೂ ಕಾಣದೆ, ಬೆತ್ತಲೆ ಮೆರವಣಿಗೆ ನಡೆಸಿದ ಆ ತಾಯಂದಿರಂತೆಯೇ ? ಅವಳನ್ನು ಆ ಸಮುದಾಯ ಅಂದು ಹೇಗೆ ಕಂಡಿತ್ತು ? ಇಂದು ಹೇಗೆ ಕಂಡಿದೆ ? ಅದನ್ನು ಕಣ್ಣಾರೆ ಕಾಣಬೇಕು; ಮಾತನ್ನು ಆಲಿಸಬೇಕು ಎಂಬ ತುಡಿತವೇ ಪಯಣವನ್ನು ಅನುಗೊಳಿಸಿತ್ತು.

ಅಲಾಯಿಯದು ಕಂಧ್ ಆದಿವಾಸಿ ಸಮುದಾಯ; ಮಾತಾಡುತ್ತಿದ್ದುದು ದ್ರಾವಿಡ ಮೂಲದ ಕುಈ ಭಾಷೆ. ಕುಈ ಜೊತೆ ಒರಿಯಾ ಕೂಡ ಸಲೀಸಾಗಿ ಮಾತಾಡಬಲ್ಲವಳು. ದೇವರಂಜನ್ ನಮ್ಮ ಮತ್ತು ಅವಳ ನಡುವಿನ ಸಂಪರ್ಕ-ಸೇತು. ಬಾರೀಗಾಂವ್ ಊರು ಸಮೀಪಿಸುತ್ತಿದ್ದಂತೆ, ಮೈ ರೋಮಾಂಚನಗೊಂಡಿತು. ತೀರಾ ಹತ್ತಿರವಾದಾಗ ೪೦-೫೦ ಗುಡಿಸಲುಗಳ ಹಾಡಿ ಎದುರಾಯಿತು. ಬೆಂಕಿಪೆಟ್ಟಿಗೆಯಂಥ ಇಕ್ಕಟ್ಟು ಮನೆಗಳು ! ಸೊಂಟ ಬಗ್ಗಿಸಿಯೇ ಮನೆಯ ಒಳ ಪ್ರವೇಶಿಸಬೇಕು. ಒಳಗೋ ಕತ್ತಲ ಗೂಡು; ಕಣ್ಣು ಕಿರಿದಾಗಿಸಿ ನೋಡಿದರೆ ಅದರೊಳಗೂ ಮೀನು, ಕಮಲ, ಬೀಗದ ಕೈ ಇತ್ಯಾದಿ ಕೆತ್ತನೆಯ ಬಾಗಿಲ ಪಟ್ಟಿಗಳು. ಗಂಡಸರು ಕಿರಿಪಂಚೆ ಉಟ್ಟರೆ, ಹೆಂಗಸರು ಟವೆಲ್ಲನ್ನು ಲಂಗದಂತೆ ಸುತ್ತಿಕೊಂಡು, ಸೀರೆಯನ್ನು ಇಮ್ಮಡಿ ಮಡಚಿ ಹೀಗೆ ಸುತ್ತಿ, ಹಾಗೆ ಹೊದ್ದುಬಿಟ್ಟರೆ ಅವರ ಅಲಂಕಾರ ಮುಗಿದಂತೆ. ಯಾರ ಮೈಯಲ್ಲೂ ಹುಡುಕಿದರೂ ಗುಲಗಂಜಿ ತೂಕದ ಕೊಬ್ಬಿಲ್ಲ. ಮನೆಯ ಸುತ್ತಲೂ ಕಾನನದ ಹಿನ್ನೆಲೆ. ಊರಗಲ ಮುಖಮಾಡಿ ಮುಖಿಯಾ ಮಿನಿಯಾಕಾ ಬರಮಾಡಿಕೊಂಡ. ಅಲಾಯಿ ಮನೆಯಲ್ಲೇ ಇದ್ದಾಳೆ ಎಂದಾಗ ನನ್ನ ಸಂಭ್ರಮ ಗರಿಗಟ್ಟಿತು. ಹೇಳಿ ಕಳಿಸಿದ ಕೆಲವೇ ಕ್ಷಣಗಳಲ್ಲಿ ಅವಳು ಪುಟುಪುಟು ಓಡಾಡುತ್ತ, ಮುಖದ ತುಂಬ ನಗೆಮಲ್ಲಿಗೆ ಮುಡಿದು ಬಂದಾಗ ಮಾತು ಮರೆತು ಅವಳನ್ನೇ ದಿಟ್ಟಿಸಿದ್ದೆ; ಮನದಲ್ಲೇ ಅವಳ ಹೋರಾಟದ ಕೆಚ್ಚಿಗೆ ಬಾಗಿದ್ದೆ. ನಾಲ್ಕೂವರೆ ಅಡಿ ಎತ್ತರದ, ಅಗಲ ಮುಖದ ಐವತ್ತರ ಆಸುಪಾಸಿನ ಹೆಣ್ಣುಮಗಳು. ಮೂಗಿನ ಎರಡೂ ಹೊಳ್ಳೆಗಳಿಗೆ ಸಾಲದೆಂಬಂತೆ ಅದರ ಕಂಬಕ್ಕೂ ಒಂದೊಂದು ನತ್ತು-ಮುಕುರ ಧರಿಸಿದ್ದಳು. ಕೊರಳಲ್ಲಿ ಬೆಳ್ಳಿಯ ವಿಚಿತ್ರ ಕಂಠಾಭರಣ ತೂಗುತ್ತಿತ್ತು.

ಉಟ್ಟದ್ದು ಸಾಧಾರಣದ ಪತ್ತಲ. ಎಷ್ಟೋ ದಿನಗಳ ಪರಿಚಯದವರೆಂಬಂತೆ ಬಳಿ ಬಂದು ಅಪ್ಪಿ, 'ಅಸ್ಸೋ ಅಸ್ಸೋ' ಎಂದು ತನ್ನ ಪಕ್ಕದಲ್ಲಿ ಕೂರಿಸಿಕೊಂಡಾಗ, ಹೆತ್ತಬ್ಬೆಯ ಉಡಿಯಲ್ಲಿ ತಲೆ ಇಟ್ಟಂಥ ಸುಖ. ಎರಡು ಕರಾವಳಿಗಳ ನಡುವಿನ ಭೌತಿಕ ಅಂತರ ಗಾಳಿಗೆ ತೂರಿಹೋಗಿತ್ತು.

''ನಮ್ಮೂರಿನ ವಸುಂಧರಾ ನದಿ ಡ್ಯಾಂ ಕೆಲಸ ನಡೆದಾಗ, ನೀವು ಸರಕಾರಿ ಅಧಿಕಾರಿಗಳ್ನ ಎದುರಿಸಿದ ಕಥೇನ ನಿನ್ನಿಂದ್ಲೇ ತಿಳಿಬೇಕಂತ ಬಂದಿದ್ದಾರೆ. ಅವರಿಗೆ ನೀನೇ ಹೇಳು'' ...ಮುಖಿಯಾನ ಮಾತು ಮುಗಿಯುತ್ತಿದ್ದಂತೆ, ''ಓ... ಅದಾ...'' ಎಂದು ಕುಲುಕುಲು ನಕ್ಕಳು. ನಗು ಅವಳ ಇಡೀ ವ್ಯಕ್ತಿತ್ವವನ್ನೇ ಆವರಿಸಿ, ಸುತ್ತಲಿನ ಎಲ್ಲರ ಮೇಲೂ ತುಳುಕಿತು.

''ನಮ್ ನೆಲ, ನಮ್ ಜಲ, ನಮ್ ಗಾಳಿ. ಇದನ್ನ ನಾಶ ಮಾಡಾಕೆ ಯಾರಿಗೂ ಅವಕಾಶ ಕೊಡಲ್ಲ ಅಂತ ನಡೀತಿದ್ದ ಚಳವಳಿಯ ಕಾಲ ಅದು. ಆಗ್ಲೇ ಹತ್ತು ವರ್ಷ ಆಯ್ತು. ಅಲ್ಲೆಲ್ಲೋ ಗಣಿಗಾರಿಕೆ ಮಾಡೋ ಪ್ರಯತ್ನ ನಡೆದಿತ್ತು. ಅವ್ರಿಗೆ ನೀರು ಬೇಕಂತ ನಮ್ಮ್ ಹಳ್ಳೀ ಪಕ್ಕದ್ ವಸುಂಧರಾ ನದಿಗೆ ಡ್ಯಾಂ ಕಟ್ಟೋಗೆ ಹೊರಟಿದ್ರು. ಅದು ಕಟ್ಟಿದ್ರೆ ನಾವು ಎಲ್ಲಿಗೆ ಹೋಗ್ಬೇಕು ? ನಮ್ಗೆ ಇದ್ದದ್ದು ಅದೊಂದೇ ಆಧಾರ. ಹೀಗಾಗಿ ನಾವ್ ಅದ್ನ ವಿರೋಧ ಮಾಡಿದ್ವಿ. ರಸ್ತೆ ಬಂದ್ ಮಾಡೋದು, ಸೇತುವೆ ಕೆಲಸದವ್ರನ್ನ ಓಡ್ಸೋದು, ಪೊಲೀಸ್‌ರಿಂದ ಮನೆಗಂಡಸರನ್ನ ಪಾರು ಮಾಡೋದು... ಇಂಥಾ ಕೆಲ್ಸ ನಡೀತಿದ್ದ ಕಾಲ. ಅವತ್ತು ಹಾಡಿಯ ಎಲ್ಲ ಗಂಡಸ್ರೂ ರಸ್ತೆ ಚಳವಳಿಗೆ ಹೋಗಿದ್ರು. ಪೊಲೀಸರ ಜೀಪ್ ಬರೋ ದಾರೀಲೆಲ್ಲ ಮರದ ದಿಮ್ಮಿ ಕೆಡವಿದ್ರು ಅಂಥದ್ರಲ್ಲೂ ಡಿ.ಸಿ ಮತ್ತು ಎಸ್ಪಿ ಒಂದಷ್ಟು ಪೊಲೀಸ್ರನ್ನ ಕರ್ಕೊಂಡು ಹಾಡಿ ಕಡೆ ಬರ್ತಿದ್ರು. ನಾನು ಕಾಡಿಂದ ಅಂಟ್‌ವಾಳಕಾಯಿ ತರೋಕೆ ಹೊರ್ಟಿದ್ದೆ. ನನ್ನ ಜೊತೆ ಮೂವರು ಇದ್ರು. ನಾವು ದೂರದಿಂದ್ಲೇ ಪೊಲೀಸರನ್ನ ನೋಡಿದ್ವಿ. ಅವ್ರ ಕೈಯಲ್ಲಿ ಬಂದೂಕುಗಳು ಬೇರೆ ಇದ್ವು. ಹಾಡಿ ಒಳ್ಗೆ ಹೊಕ್ರೆ ಏನೇನ್ ಮಾಡ್ತಾರಂತ ಹೇಳಾಕ್ ಆಗಲ್ಲ, ಹೀಗಾಗಿ ನಾವ್ ಓಡಿ ಬಂದು, ಅವ್ರ್ನ ತಡ್ದು, ಒಂದ್ ಜೋರಾಗ್ ಕೂಗ್ ಹಾಕ್ದಿ. ಹಾಡೀಲಿದ್ದ ಎಲ್ಲ ಚಿಳ್ಳೆಪಿಳ್ಳೆಗಳು, ತೊಟ್ಟಿಲ ಕೂಸೆತ್ತಿಕೊಂಡು ಬಾಣಂತಿಯರು, ಮುದುಕಿಯರು ಎಲ್ಲ ಓಡಿ ಬಂದ್ರು.

''ಡಿ.ಸಿ. ಏನೋ ಹೇಳಿದ್ದೇ ತಡ, ಪೊಲೀಸ್‌ನವ್ರು ನಮ್ಮ್ ಕಡೆ ಬಂದೂಕು ಹಿಡ್ದ. ನಮ್ಮ್ ಭಾಷೆ ಬರೋನು ಒಬ್ಬ 'ಗಂಡಸ್ರೆಲ್ಲ ಎಲ್ಲಿದ್ದಾರೆ ಅಂತ ಹೇಳ್ದಿದ್ರೆ ಈ ಹಾಡೀ ಎಲ್ಲಾ ಮನೇನೂ ಸುಟ್ಟ್‌ಹಾಕ್ತೀವಿ' ಅಂದ. ಏನ್ ಮಾಡ್ಬೇಕು ನಾವು ? ಎಲ್ರೂ ಬರೀ ಹೆಂಗಸ್ರೇ ಇದ್ದದ್ದು. ಅದೇನ್ ಅನ್ನಿಸ್ತೊ, ನನ್ಗೆ ಎಲ್ಲಿತ್ತೋ ರೋಷ, ''ಹಿಂಗೆ, ಇಕಾ ಹೀಂಗೆ'' ಎಂದು ಹೇಳುತ್ತಿದ್ದಂತೆ, ಮುಖಿಯಾ ''ಅಕ್ಕಾ, ಬಾಯಲ್ಲಿ ಹೇಳು ಸಾಕು. ಈಗ ಮತ್ತೆ ಮಾಡಿ ತೋರ್ಸೋದೇನೂ ಬೇಡ'' ಎಂದೊಡನೆ ಅಲ್ಲಿದ್ದ ಎಲ್ಲರೂ ಗೊಳ್ಳೆಂದು ನಕ್ಕರು. ಅವಳು ನಕ್ಕರೂ ತನ್ನ ಸಂಭ್ರಮವನ್ನೇನೂ ಕಡಿಮೆ ಮಾಡದೆ ಮುಂದುವರಿಸಿದಳು. ''ಇಕಾ ಹೀಗೆ ಒಂದ್ ಕ್ಷಣದಲ್ಲಿ ಸಿಟ್ನಿಂದ ಉಟ್ಟಿದ್ ಸೀರೇನ ಒಮ್ಮೆಲೆ ಕಿತ್ತೊಗೆದು, ದಾರಿಗೆ ಅಡ್ಡ ನಿಂತು 'ಹುಷಾರ್, ಒಂದು ಹೆಜ್ಜೆ ಮುಂದಿಟ್ರೆ, ನೀವು ಹಾಡಿ ಒಳ್ಗೆ ಹೋಗ್ಬೇಕಂದ್ರೆ ನನ್ನ್ ಮುಟ್ಟಿನೇ, ನನ್ನ ದಾಟೀನೇ ಮುಂದೆ ಹೋಗ್‌ಬೇಕು... ಹೋಗೋದೇ ಆದ್ರೆ ಇನ್ನೊಂದ್ ಮಾತ್ ನೆನಪಿರ್ಲಿ... ಒಮ್ಮೆ ನನ್ನ್ ಮೈ ಮುಟ್ಟಿದ್ರಿ ಅಂದ್ರೆ ನೀವು ನನ್ನ ಮದ್ವೆ ಆಗ್ಬೇಕಾಗತ್ತೆ. ಇದು ಈ ಹಾಡಿಯ ನಿಯಮ. ಮರೀಬ್ಯಾಡಿ' ಅಂತ ದೊಡ್ಡ್ ದನಿಯಲ್ಲಿ ಕಿರುಚಿದೆ. ನನ್ನ ಹಿಂದೆ ಇಡೀ ಹಾಡಿಯ ಹೆಣ್ಮಕ್ಕು ದಾರಿಗೆ ಅಡ್ಡವಾಗಿ ನಿಂತಿದ್ರು. ಮತ್ತೆ ಉಸಿರೆತ್ತದೆ ಡಿ.ಸಿ, ಎಸ್ಪಿ , ಪೊಲೀಸ್ರು ಎಲ್ರೂ ಬಂದ ದಾರಿಗೆ ಸುಂಕ ಇಲ್ಲ ಅಂತ ವಾಪಸ್ ಹೋದ್ರು'' ಎಂದು ಮುಗಿಸಿದಳು.

ಹೋರಾಟದ ಅಂದಿನ ಜೋಶ್ ಈಗಲೂ ಅವಳಲ್ಲಿ ಎದ್ದುಕಾಣುತ್ತಿತ್ತು. ಅನಂತರವೂ ಅವಳು ಪೊಲೀಸರ ಕುರಿತು ಇತರ ವಿಚಾರಗಳನ್ನು ಹೇಳುತ್ತಲೇ ಇದ್ದಳು. ನಾನು ಮಾತ್ರ ಅವಳ ಈ ಪ್ರತಿರೋಧವನ್ನು ಅರಗಿಸಿಕೊಳ್ಳುವುದರಲ್ಲಿ ಮಗ್ನಳಾಗಿದ್ದೆ. ಹುಟ್ಟಿನಿಂದ ಮುಪ್ಪಿನವರೆಗೂ ತನ್ನ ದೇಹವೇ ತನಗೆ ಶತ್ರುವಾಗಿ ಕಾಡುವ ವಿಚಿತ್ರ ಪರಿಸ್ಥಿತಿ ಹೆಣ್ಣಿನದು. ಆ ಕಾರಣದಿಂದಲೇ ಅವಳು ವ್ಯವಸ್ಥೆ ಹೇರಿದ ಎಲ್ಲ ನಿರ್ಬಂಧ ಮತ್ತು ದಮನಕ್ಕೆ ಕೊರಳೊಡ್ಡಿದಾಕೆ. ಹೀಗಿರುತ್ತ ತನ್ನ ಅತ್ಯಂತ ಅಸಹಾಯಕ ಸಂದರ್ಭದಲ್ಲಿ ತನ್ನ ಅದೇ ದೇಹವನ್ನು ಅಸ್ತ್ರವನ್ನಾಗಿ ಮಾಡಿಕೊಂಡು ಅಧಿಕಾರಶಾಹಿಯನ್ನು ನಿರ್ಬಲರನ್ನಾಗಿ, ನಿಶ್ಶಸ್ತ್ರರನ್ನಾಗಿ ಮಾಡಿದ ಇಂಥ ಅಪರೂಪ ಸಂದರ್ಭದ ವೈಶಿಷ್ಟ್ಯ ಮತ್ತು ವೈಚಿತ್ರ್ಯವನ್ನು ನಾನು ಇನ್ನೂ ಅರಗಿಸಿಕೊಳ್ಳುತ್ತಿದ್ದೆ. ಇಡೀ ಸನ್ನಿವೇಶವನ್ನು ವರದಿ ಮಾಡುತ್ತಿದ್ದ ಅವಳಲ್ಲಾಗಲಿ, ಕೇಳುವ ಜನರಲ್ಲಾಗಲಿ ಮುಜುಗರ, ಸಂಕೋಚಗಳಿರಲಿಲ್ಲ; ಅದು ಅವರ ಮನೋಭಿತ್ತಿಯಲ್ಲಿ ತಮ್ಮ ಹೋರಾಟದ ಗೆಲುವಿನ ಮೈಲಿಗಲ್ಲಾಗಿ ಕುಳಿತಿತ್ತು. ಅಲಾಯಿ ಹಾಡಿಯವರನ್ನು ಉಳಿಸಿದ ಹೆತ್ತಬ್ಬೆಯಾಗಿ ಎಲ್ಲರ ಪ್ರೀತಿಯನ್ನು ಗಳಿಸಿದ್ದಳು !

''ಅಲಾಯಿ, ಒಂದು ವೇಳೆ, ಒಂದು ವೇಳೆ...'' ಎಂದು ತೊದಲಿದೆ. ''ಹೇಳುವ ನನಗಿಲ್ಲದ ಸಂಕೋಚ ನಿನಗ್ಯಾಕೆ ? ಕೇಳು ಅದೇನು ಕೇಳಬೇಕಿತ್ತು ?'' ''ಒಂದು ವೇಳೆ ನೀನು ಹಾಕಿದ ಷರತ್ತು ಕೇಳಿಯೂ ನಿನ್ನ್ ಮೈ ಮುಟ್ಟಿದ್ದಿದ್ರೆ ಏನ್ ಮಾಡ್ತಿದ್ದೆ'' ಎಂಬ ಕಿಡಿಗೇಡಿತನದ ಪ್ರಶ್ನೆ ಎಸೆದೆ. ''ಆಹಾಹಾ... ಮುಟ್ಟ್‌ತಿದ್ನಾ ? ಅವನ್ಗೆ ಅಷ್ಟು ಧೈರ್ಯ ಎಲ್ಲಿಂದ ಬರ್ಬೇಕು ? ಅವ್ರು ಅಲ್ಲೀವರ್ಗೆ ರೋಫ್ ಹಾಕ್ತಿದ್ದವ್ರು, ತಬ್ಬಿಬ್ಬಾಗಿ ಮುಖ ತಿರುಗ್ಸಿ ಓಡಿದ್ರು. ಅಷ್ಟಕ್ಕೂ ನೀನು ಅಂದ ಹಾಗೆ ಮುಟ್ಟೋಕೆ ಬಂದಿದ್ರೆ... ಕ್ಯಾಕರಿಸಿ ಅವನ್ ಮುಖಕ್ಕೆ ಉಗುಳ್‌ತಿದ್ದೆ'' ಎನ್ನುವಷ್ಟರಲ್ಲಿ ಅವಳ ಮೈ ರೋಷದಿಂದ ಕಂಪಿಸಿದ್ದು ಕಂಡಿತು.

'ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು' ಎಂಬ ಕವಿವಾಣಿ ಮರೆಯಲಾದೀತೇ ? ಹೋರಾಟದ ಕಥನದಲ್ಲಿ 'ಅವನ ಕಥೆ'ಗೆ ಅವಕಾಶ, ಪ್ರಾಶಸ್ತ್ಯ ದೊರೆತಂತೆ 'ಅವಳ ಸಾಧನೆ'ಗೆ ದೊರೆಯುವುದಿಲ್ಲ. ಒಬ್ಬ ಒನಕೆ ಓಬವ್ವ, ಒಬ್ಬ ಕಿತ್ತೂರ ಚೆನ್ನಮ್ಮ, ಒಬ್ಬ ಬೆಳವಡಿ ಮಲ್ಲಮ್ಮ ಅಪವಾದಗಳಾಗಿ ಕಾಣಸಿಗುತ್ತಾರೆ. ಅವರಾದರೋ ಹೋರಾಟದ ಪರಿಸರದಿಂದ ಬಂದು; ಒಂದು ಪೂರ್ವಸಿದ್ಧತೆಯಿಂದ ಹೋರಾಟದ ಕಣಕ್ಕೆ ಧುಮುಕಿದವರು. ಅಲಾಯಿ ಅತ್ಯಂತ ಅನಿರೀಕ್ಷಿತ ಸಂದರ್ಭವನ್ನು ತನ್ನ ಕೈಗೆತ್ತಿಕೊಂಡು ನಿರ್ವಹಿಸಿದ ಕ್ರಮ ಅಪರೂಪದ ನಿದರ್ಶನ. ಜೊತೆಗೆ ಅಲಾಯಿಯ ಪ್ರತಿರೋಧ ಹಾಡಿಯ ಉಳಿದವರಲ್ಲಿ ಹೋರಾಟದ ಕೆಚ್ಚನ್ನು ಹೆಚ್ಚಿಸಿ, ಇಂದು ವಸುಂಧರಾ ನದಿಗೆ ಯೋಜಿಸಿದ್ದ ಅಕ್ರಮ ಅಣೆಕಟ್ಟು ನಿರ್ಮಾಣ ಕಾರ್ಯವನ್ನು ಸ್ಥಗಿತಗೊಳಿಸುವಲ್ಲಿ ಯಶಸ್ಸು ಕಂಡಿದೆ.

ತಾಯಿ ಅಲಾಯಿ, ನಿನಗಿದೋ ಲಾಲ್ ಸಲಾಂ !

ಡಾ॥ ಸಬಿಹಾ ಭೂಮೀಗೌಡ
ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗೋತ್ರಿ
ಮಂಗಳೂರು - ೫೭೪ ೧೯೯

# ಸೂಜಿ



ಅದೆಷ್ಟು ದಿನಗಳಿಂದ
ಹೀಗೇ ಬಿದ್ದುಕೊಂಡಿದೆ
ಅನಾಥ ಕವಿತೆ ಹನಿಗಳು
ದಾರವೂ ಅಲ್ಲೇ ತೊಡರಿಕೊಂಡು
ಬಿದ್ದಿದೆ.

ದಿನವೂ ಹುಡುಕುತ್ತಲೇ ಇದ್ದೇನೆ
ಕಾಣದೆಡೆಗಳಲ್ಲಿ
ಮೂಲೆ ಮೂಲೆಯಲ್ಲಿ
ಕಾಣೆಯಾಗಿಬಿಟ್ಟಿದೆ ಹೇಗೋ
ನೆಟ್ಟ ಕಣ್ಣಿನ ಚೂಪು ಮೊನಚಿನ
ಸೂಜಿ.

ಮಾಲೆ ಪೋಣಿಸಬಹುದಿತ್ತು
ತೇಪೆ ಹಚ್ಚಬಹುದಿತ್ತು
ತುಸು ಪ್ರಯತ್ನಿಸಿದರೆ
ಆದಷ್ಟೂ ಹತ್ತಿರ ಜೋಡಿಸಬಹುದಿತ್ತು
ದೂರದ ಮನಸ್ಸುಗಳನ್ನು...

ಮರೆಗುಳಿ ಮನಸ್ಸು
ಎಷ್ಟೊಂದು ಸತಾಯಿಸಿಬಿಟ್ಟಿತು
ನೋಡು
ಈಗ ನೆನಪಾಯಿತು
ಸೂಜಿ ಭದ್ರವಾಗಿಯೇ ಇಹುದಲ್ಲ

ಸ್ಮಿತಾ ಅಮೃತರಾಜ್, ಸಂಪಾಜೆ
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು, ಕೊಡಗು - ೫೭೧ ೨೩೪



# ತೆಯ್ಯಂ

ಮಳೆ ! ಒಂದು ಕ್ಷಣವೂ ಬಿಡದ ಮಳೆ !

ಯಾರ ಮೇಲೋ ಸುರಿದು ಹಟ ತೀರಿಸುವ ಹಾಗೆ ಬಲು ಬಿರುಸಾಗಿ ಹೊಯ್ಯುತ್ತಿದೆ !

ಮಳೆ ಹುಟ್ಟು ಹಾಕಿದ ವಿಪರೀತ ಚಳಿಯಿಂದಾಗಿ ಹೊದ್ದು ಮಲಗಿ ಎಲ್ಲವನ್ನೂ ಮರೆತು ನಿದ್ರಿಸಿದೆ.

ಬೆಚ್ಚಿ ಎಚ್ಚರಗೊಂಡಾಗ ಚೆನ್ನಾಗಿ ನಸುಕು ಹರಿದಿತ್ತು. ಸರಕ್ಕನೆ ಎದ್ದು ಬಾಗಿಲು ತೆರೆದು ಹೊರಗೆ ನೋಡಿದೆ. ಜಗತ್ತು ನಿನ್ನೆ ರಾತ್ರಿ ಕಂಡದ್ದೆಲ್ಲ ಪೂರ್ತಿ ಬದಲಾಗಿದೆ! ಅಂಗಳದ ತುಂಬ ನೀರು ಮಡುಗಟ್ಟಿದೆ. ನೋಡಿದ ಲ್ಲೆಲ್ಲೆಡೆಯೂ ಕಡಲಿನಲ್ಲೊ ಎಂಬ ಹಾಗೆ ನೀರೇ !

ಮುಂದಿನ ಮೂರು ದಿನವೂ ಮಳೆ ಎಡೆಬಿಡದೆ ಸುರಿ ಯುತ್ತಲೇ ಇತ್ತು. ಹೊರಗೆ ಹೋಗಬೇಕೆಂದು ಅನ್ನಿಸಲಿಲ್ಲ. ಮನೆಯಲ್ಲಿ ಇದ್ದುದನ್ನಷ್ಟೇ ಸೇವಿಸಿ ಸುಮ್ಮಗೆ ಇದ್ದುಬಿಟ್ಟೆವು.

ಸುಮ್ಮಗೆ ಕುಳಿತಿರುವಾಗ ಹಸಿವೆ ಮತ್ತು ಆಹಾರದ ಮೇಲಿನ ಆಸೆ ಹೆಚ್ಚಾಗುತ್ತದೆ – ವಿಶೇಷವಾಗಿ ಮಳೆಗಾಲದಲ್ಲಿ.

ಮನೆಯಲ್ಲಿ ಏನೂ ಇಲ್ಲವೆಂದು ಹೇಳಿದರೆ ಮಕ್ಕಳು ಹೊಟ್ಟೆ ಅದುಮಿ, ಬಟ್ಟೆ ಬಿಗಿದು ಸುಮ್ಮಗೆ ಇರುತ್ತಾರಾ ? ಮನೆಯಲ್ಲಿದ್ದುದನ್ನೆಲ್ಲ ಹೆಕ್ಕಿ ತೆಗೆದು ಬೇಯಿಸಿ ಕೊಟ್ಟಿದ್ದೆ.

ಇವತ್ತು ಏನು ಮಾಡುವುದು ? ಮಧ್ಯಾಹ್ನದ ಗಂಜಿಗೆ ಮನೆಯಲ್ಲಿ ಅಕ್ಕಿ ಒಂದು ಕಾಳೂ ಇಲ್ಲ. ಕೊಂಡುಕೊಳ್ಳಲು ಒಂದು ಪೈಸೆಯೂ ಇಲ್ಲ. ಸಾಲ ಪಡೆಯಲು ಹತ್ತಿರದಲ್ಲೆಲ್ಲೂ ಬೇರೆ ಮನೆಗಳಿಲ್ಲ. ಇದ್ದರೂ ಯಾರು ಕೊಡ್ತಾರೆ ? ಇದು ದರಿದ್ರದ ಕರ್ಕಾಟಕ ಮಾಸ !

ಮಧ್ಯಾಹ್ನದ ಗಂಜಿಯ ಸಮಸ್ಯೆ ಮನಸ್ಸನ್ನು ಹಿಂಡುತ್ತಲೇ ಇತ್ತು. ತನ್ಮಧ್ಯೆ ಹೊಳೆಯಿತು ಒಂದು ಯೋಜನೆ. ಹೊಳೆದ ಯೋಜನೆಯೇನೋ ಪರವಾಗಿಲ್ಲ. ಗಂಜಿಯ ಸಮಸ್ಯೆಯನ್ನು ನಿವಾರಿಸುತ್ತದೆ. ಆದರೆ ಈ ಮಳೆ ! ಈ ಮಳೆಯೊಮ್ಮೆ ಬಿಡಬೇಕಲ್ಲ ?

'ಮಳೆಯೊಮ್ಮೆ ಬಿಡಲಿ !' ತೀವ್ರವಾಗಿ ಹಂಬಲಿಸಿದಳು ಅಮ್ಮಿಣಿ.

ಮಳೆ ಬಿಡಲಾರದೇ ?

ಈ ಪ್ರಶ್ನೆ ಮನಸ್ಸಿನಲ್ಲಿ ಮೂಡಿದಾಗ ಚಿಕ್ಕಂದಿನಲ್ಲಿ ಸಂಭವಿಸಿದ ಒಂದು ಅದ್ಭುತ ಘಟನೆ ಸರಕ್ಕನೆ ಜ್ಞಾಪಕಕ್ಕೆ ಬಂತು.

**ಮೂಲ : ಕೆ. ಎಂ. ಕೆ. ಕುಞ್ಞಬ್ದುಲ್ಲ**
**ಕನ್ನಡಕ್ಕೆ : ಕೆ. ಕೆ. ನಾಯರ್**

ಅದು ಮಳೆಗಾಲವಾಗಿತ್ತು. ಮನೆಯಿಂದ ಹೊರಟಾಗ ಆಗಸ ತಿಳಿಯಾಗಿತ್ತು. ಕೊಡೆ ಒಯ್ಯಲಿಲ್ಲ. ಶಾಲೆಯತ್ತ ನಡೆಯುತ್ತಾ ಮಧ್ಯ ದಾರಿ ತಲುಪಿದಾಗ ಭಾರಿ ಸದ್ದಿ ನೊಂದಿಗೆ ಮಳೆ ಹೊಯ್ಯುತ್ತಾ ಬರುತ್ತಿರುವುದು ಕಾಣಿಸಿತು. ಜೊತೆಯಲ್ಲಿ ಬಿಸಿಲಿತ್ತು...

ಶಾಲೆಗೆ ಸೇರ್ಪಡೆಯಾಗುವುದಕ್ಕೂ ಮೊದಲು, ಮಳೆ ಮತ್ತು ಬಿಸಿಲು ಜತೆಗೂಡಿ ನಗುತ್ತಾ ನಲಿಯುತ್ತಾ ಬರುವಾಗ, ಅಂದು ಚಿಕ್ಕಮಕ್ಕಳಾಗಿದ್ದ ನಾವು ಅವನ್ನು ನೋಡುತ್ತಾ ಹಾಡುತ್ತಿದ್ದೆವು; ಹಾಡುತ್ತಾ ಹಾಡುತ್ತಾ ಮಳೆಯನ್ನು ಓಡಿಸುತ್ತಿದ್ದೆವು :

'ಬಿಸಿಲು ಮತ್ತು ಮಳೇ... ನರಿಯಣ್ಣನಿಗೆ ಮದುವೇ...
ಓಡಿಹೋಗು ಮಳೇ... ಓಡಿಹೋಗು ಮಳೇ...'

ಅಂತಹ ಬಿಸಿಲು - ಮಳೆಗಳನ್ನು ನೆನೆಯುತ್ತಾ ಹಾಡನ್ನು ಹಾಡುತ್ತಾ ಮಳೆಯನ್ನು ಓಡಿಸುವಾಗ ಮಳೆ ಓಡಿ ಹೋಗುವುದನ್ನು ನೋಡಲು ಎಂತಹ ಚಂದ ! ಈಗಲೂ ಆ ದೃಶ್ಯ ಕಣ್ಣಮುಂದೆ ಇದೆ !

ಈಗ ಅಬ್ಬರಿಸುತ್ತಾ ಬರುತ್ತಿರುವ ಈ ಮಳೆ ಅಂತಹ ಹೂಮಳೆಯಲ್ಲ. ಗಾಳಿಯೂ ಬಿಸಿಲೂ ಮುಗಿಲೂ ಒಟ್ಟಾಗಿ ತೆಂಗಿನ ತೋಟಗಳನ್ನು ಹಿಡಿದಲುಗಾಡಿಸುತ್ತಾ, ಬತ್ತದ ಗಿಡಗಳನ್ನು ಒದ್ದು ಬೀಳಿಸುತ್ತಾ, ಊರನ್ನು ನಡುಗಿಸುತ್ತಾ ಈಗ ಬರುತ್ತಿರುವುದು ಬಿರುಮಳೆ !

ಮಳೆಯಿಂದ ರಕ್ಷಣೆ ಪಡೆಯಲು ಹತ್ತಿರದಲ್ಲೆಲ್ಲೂ ಮನೆಗಳೋ ಅಂಗಡಿಗಳೋ ಇಲ್ಲ. ಪುಸ್ತಕಗಳ ಚೀಲವೂ ನಾನೂ ತೋಯ್ದು ತೊಪ್ಪೆಯಾಗುವೆನಲ್ಲ ದೇವ್ರೇ...! ಮನಸ್ಸು ಮರುಗಿತು.

ದೇವರೊಡನೆ ನೇರವಾಗಿ ಮೊರೆಯಿಡಲೇ. ಯೋಚಿಸಿದೆ. ಬಳಿಕ ಮಮ್ಮಲ ಮರುಗುತ್ತಾ ಪ್ರಾರ್ಥಿಸಿದೆ :

'ದೇವ್ರೇ...! ಹೊಯ್ಯುತ್ತಾ ಬರುತ್ತಿರುವ ಈ ಮಳೆ ನನ್ನ ಸನಿಹಕ್ಕೆ ಬಾರದೆ ದೂರ ಹೋಗುವ ಹಾಗೆ ಮಾಡು ! ನಾನು ನಿನ್ನ ತೆಯ್ಯಂ ಸ್ವರೂಪವನ್ನು ಕಟ್ಟುವ ಪಣಿಕ್ಕರ್‌ನ ಪುಟ್ಟ ಮಗಳಲ್ಲವಾ...!'

ಆಶ್ಚರ್ಯ !

ಪ್ರಾರ್ಥನೆಯನ್ನು ದೇವರು ಆಲಿಸಿದ. ನನ್ನ ಸನಿಹದ ತನಕ ಹೊಯ್ಯುತ್ತಾ ಬಂದ ಮಳೆ ನನ್ನ ಮೈ ಮುಟ್ಟದೆ ಗತಿ ಬದಲಾಯಿಸಿ ದೂರಕ್ಕೆ ಸಾಗಿತ್ತು !

ಅಂದಿನ ಆಶ್ಚರ್ಯಕ್ಕಿಂತ ಹೆಚ್ಚಿನ ಆಶ್ಚರ್ಯ ವಾದದ್ದು ಈಗ ! ಇದೋ ಈಗ...! ಗತಕಾಲವನ್ನು ನೆನೆಯುತ್ತಿರುವಾಗಲೇ...! ಅಂಗಳದಲ್ಲಿ ಹೊಯ್ಯುತ್ತಾ

ಇದ್ದ ಜಡಿಮಳೆ, ಸಂಪೂರ್ಣ ಮಾಯವಾಗಿಬಿಟ್ಟಿದೆ! ಮುಗಿಲು ಮುಚ್ಚಿಕೊಂಡಿರುವ ಬಾನ ಸೆರಗಿನಲ್ಲೂ ಮಳೆ ಕಾಣೆ! ಎಂತಹ ಆಶ್ಚರ್ಯ...! ಓಣಂ ಹಬ್ಬಾವಧಿಯ ಮುಂಜಾನೆಯ ಹೊನ್ನಬಣ್ಣದ ಹೊಂಬಿಸಿಲಿನ ಹಾಗೆ ಇದೋ ಹೊರಾಂಗಣದಲ್ಲಿ ಎಲ್ಲೆಡೆಯೂ ಬಿಸಿಲು ತುಂಬಿ ತುಳುಕುತ್ತಿದೆ!

'ನನ್ನ ನೋಟವಿರುವುದು ನಿನ್ನ ಕೃತಿಗಳಲ್ಲಲ್ಲ; ಹೃದಯದಲ್ಲಿ.'

ದೈವವಚನ.

ಯಾವ ಮತದ ಗ್ರಂಥದಲ್ಲಿ ಓದಿದ್ದು? ನೆನಪಿಲ್ಲ. ಮತ ಯಾವುದಾದರೇನು, ದೇವರು ಒಬ್ಬನೇ ತಾನೇ!

ತುಂಬು ಹುಮ್ಮಸ್ಸಿನೊಂದಿಗೆ ಮಕ್ಕಳ ಬಳಿಗೆ ಧಾವಿಸಿದಳು ಅಮ್ಮಿಣಿ.

ಅಡಿ-ಮುಡಿ ಹೊದ್ದು ನಿದ್ರಿಸುತ್ತಿರುವ ಮಕ್ಕಳನ್ನು ತಟ್ಟಿ ಎಚ್ಚರಿಸಿದಳು. ನಂತರ ತುಂಬು ಸಂಭ್ರಮದೊಂದಿಗೆ ಹೇಳಿದಳು :

''ಮಕ್ಕಳೇ, ಬೇಗನೆ ಏಳಿ...! ವಾತಾವರಣ ತುಂಬ ತಿಳಿಯಾಗಿದೆ... ನಾವು ಕರ್ಕಾಟಕತೆಯ್ಯಂ ಕಟ್ಟುವಾ...''

ಹನ್ನೆರಡು ವರ್ಷದ ರಾಜನೂ ಅವನ ತಮ್ಮ ಕುಞ್ಞಿಕೃಷ್ಣನೂ ಎದ್ದರು.

ಅಮ್ಮಿಣಿ ಯೋಚಿಸತೊಡಗಿದಳು, ಇವರಿಬ್ಬರಲ್ಲಿ ತೆಯ್ಯಂ ಆಗುವವರು ಯಾರು?

ಇವರ ಅಪ್ಪ ರಾಮನ್ ಪಣಿಕ್ಕರ್ ಮನೆಯಲ್ಲಿರುತ್ತಿದ್ದರೆ ಎಲ್ಲವನ್ನೂ ಆತನೇ ಮಾಡುತ್ತಿದ್ದ. ಈಗ ಯಾವುದಾದರೂ ಅಂಗಡಿಯ ಮಹಡಿ ಮೇಲೆ ಕುಳಿತು ಇಸ್ಪೀಟ್ ಆಡುತ್ತಾ ಕಾಲಹರಣ ಮಾಡುತ್ತಿರಬಹುದು. ಒಂದು ವಾರದಲ್ಲಿ ಒಮ್ಮೆ ಮಾತ್ರ ಮನೆಗೆ ಬಂದುಹೋಗುತ್ತಾನೆ.

ಆತ ಇಸ್ಪೀಟ್ ಆಡುತ್ತಾ ವ್ಯರ್ಥವಾಗಿ ಸಮಯ ಕಳೆಯುತ್ತಿರುವ ಬಗ್ಗೆ ಆಕ್ಷೇಪಿಸಬಹುದೇ? ಕೂಡದು. ಮಲಯನ್ ಪಣಿಕ್ಕರ್ ಜನಸಾಮಾನ್ಯರು ಮಾಡುವ ಕೆಲಸಗಳನ್ನು ಮಾಡಕೂಡದು. ದೇವರ ಸ್ವರೂಪವನ್ನು ಕಟ್ಟುವಾತನಿಂದ ಸಾಮಾನ್ಯ ಕೆಲಸಗಳನ್ನು ಮಾಡಿಸುವುದೇ? ನಂತರ ಜನರಿಂದ ತೆಯ್ಯಂಗೆ ರವಷ್ಟಾದರೂ ಮರ್ಯಾದೆ ಮನ್ನಣೆ ಸಿಕ್ತದಾ...? ಇವತ್ತೋ ನಿನ್ನೆಯೋ ಶುರು ವಾದದ್ದಲ್ಲ ಈ ಕಟ್ಟುಕಟ್ಟಳೆ.

ಹಿಂದಿನ ಕಾಲದಲ್ಲಿ ಮಲಯನ್ ಪಣಿಕ್ಕರ್‌ನನ್ನು, ಊರನ್ನಾಳುವ ಅರಸರೋ ಊರ ಜಮೀನ್ದಾರರೋ ಅಕ್ಕಿ ಮತ್ತು ಇತರ ಅಗತ್ಯ ವಸ್ತುಗಳನ್ನಿತ್ತು ಪರಿಪಾಲಿಸುತ್ತಿದ್ದರು. ಈಗ?

ಕಾಲ ಬದಲಾಗಿದೆ. ಕಲಿಕಾಲ ಶುರುವಾಗಿದೆ. ಪರಿಪಾಲನೆ ಸವಿನೆನಪಾಗಿ ಮಸಣದಲಿ ಮಣ್ಮರೆಯಾಗಿದೆ.

'ತೆಯ್ಯಂ ಈಗಲೂ ಕಟ್ಟಲ್ಪಡುತ್ತಿದೆ; ಕುಣಿಯುತ್ತಿದೆ; ತೀವ್ರತೆಯೊಂದಿಗೆ; ದೈವತ್ವದೊಂದಿಗೆ...' ಅಮ್ಮಿಣಿ ಅಂದುಕೊಂಡಳು.

ರಾಜನೂ ಕುಞ್ಞಿಕೃಷ್ಣನೂ ಮುಖ ತೊಳೆದು ಬಂದರು. ಅವರಿಗೆ ಬೇಯಿಸಿದ ಮರಗೆಣಸು ಮತ್ತು ಕರಿಚಹಾ ಕೊಟ್ಟಳು. ಚಹಾ ಕುಡಿಯುವಾಗ ಕುಞ್ಞಿಕೃಷ್ಣ ಹೇಳಿದ :

''ಅಮ್ಮಾ... ನಾನೇ ತೆಯ್ಯಂ ಆಗ್ತೇನೆ.''

''ಅದಕ್ಕೆ, ತೆಯ್ಯಂ ಕುಣಿತ ನಿನಗೆ ಗೊತ್ತಾ?'' ಅಮ್ಮ ಕೇಳಿದಳು.

''ನನಗೆ ತೆಯ್ಯಂ ವೇಷವನ್ನ ತೊಡಿಸಿ ನೋಡು.'' ಸವಾಲಿನ ಹಾಗೆ ಕುಞ್ಞಿಕೃಷ್ಣ ಹೇಳಿದ.

ಮನೆಯ ಅಟ್ಟದ ಮೇಲೆ ಭದ್ರವಾಗಿರಿಸಲಾದ ತೆಯ್ಯದ ವೇಷಭೂಷಣಗಳ ಪೆಟಾರಿಯಿಂದ ಶಿವನ ಕಿರಾತವೇಷವನ್ನು ಒಂದೊಂದಾಗಿ ಎತ್ತಿ ಜಗಲಿಗೆ ತರಲಾಯ್ತು. ಬಳಿಕ ತೆಯ್ಯಂ ಧರಿಸುವ ಕಿರೀಟವನ್ನೆತ್ತಿ ಕುಞ್ಞಿಕೃಷ್ಣನ ತಲೆಮೇಲೆ ಇರಿಸಲಾಯ್ತು. ಹಾಗೆಯೇ ಕುಞ್ಞಿಕೃಷ್ಣನಿಗೆ ಹಣೆ, ಕಿವಿ, ಎದೆ, ತೋಳು, ಕೈ, ಕಾಲುಗಳ ಆಭರಣಗಳನ್ನೂ ತೊಡಿಸಿ ಕೆಂಪು ಪಟ್ಟೆ ವಸ್ತ್ರವನ್ನು ಉಡಿಸಲಾಯಿತು. ಚಾಯಿಲ್ಯದಿಂದ ತುಟಿಗೆ ಕೆಂಪನ್ನೂ ಅರದಾಳದಿಂದ ಮೋರೆಗೆ ರೋಜಾರಂಗನ್ನೂ ನೀರ ಸುಣ್ಣದಿಂದ ಗಡ್ಡವನ್ನೂ ರೂಪಿಸುವುದರೊಂದಿಗೆ ಕರ್ಕಾಟಕ ತೆಯ್ಯಂ ಮೈದಾಳಿತು.

ಮೊದಲ ಬಾರಿ ತಾನು ರೂಪಿಸಿದ ತೆಯ್ಯವನ್ನು ನೋಡಲು ಅಮ್ಮಿಣಿಗೆ ಆತುರವಾಯ್ತು. ಅವಳು ತೆಯ್ಯವನ್ನು ಹಿಡಿದು ಬಾಗಿಲ ಮುಂದೆ ಬೆಳಕಿನಲ್ಲಿ ನಿಲ್ಲಿಸಿದಳು. ಬಳಿಕ ತುಸು ದೂರದಲ್ಲಿ, ಮಂಡಿಯ ವರೆಗಿನ ನೀರಿನಲ್ಲಿಳಿದು ತೆಯ್ಯದ ಚಂದ ಸವಿದಳು.

ಚಂದ ಸವಿಯುತ್ತಿರಲು ಸಂಭವಿಸಿತು ಒಂದು ಮಾಯಾಜಾಲ...!

ಮುಂಬಾಗಿಲಿನಲ್ಲಿ ನಿಂತಿರುವುದು ಮಗನಲ್ಲ; ಕರ್ಕಾಟಕತೆಯ್ಯವೂ ಅಲ್ಲ; ಸಾಕ್ಷಾತ್ ಕಿಲಾಡಿಕೃಷ್ಣ! ತನ್ನ ಮನದ ಮೋಹನ ರೂಪನಾದ ಶ್ರೀಕೃಷ್ಣ...!

ಹತ್ತಿರ ಹೋಗಿ ಅಮ್ಮಿಣಿ ತೆಯ್ಯವನ್ನು ಬರಸೆಳೆದು ಅಪ್ಪಿಕೊಂಡಳು. ಎರಡು ಕೆನ್ನೆಗಳಿಗೂ ಲೊಚಲೊಚನೆ ಮುತ್ತ ಕೊಟ್ಟಳು. ನಂತರ ಪುನಃ ತಲೆಯೆತ್ತಿ ತೆಯ್ಯವನ್ನು ನೋಡಿದಳು.

ಆಗ ಕುಞ್ಞಿಕೃಷ್ಣ ಅಮ್ಮನನ್ನು ನೋಡಿ ಮುಗುಳ್ನಕ್ಕ. ನಗುತ್ತಾ ಹೇಳಿದ :

''ಅಮ್ಮನ ಮೋರೆ ಬಣ್ಣ ಮೆತ್ತಿದ್ದರಿಂದ ಎಂಥಾ ಚೆಂದ...''

ಮಗನ ವರ್ಣನೆ ಕೇಳಿದಾಗಲಷ್ಟೇ ಅಮ್ಮಿಣಿ ಚಿತ್ತಭ್ರಮಣೆಯಿಂದ ಎಚ್ಚರಗೊಂಡದ್ದು! ಅವಳು ತತ್‌ಕ್ಷಣ, ತನ್ನ ಉಡುಮುಂಡಿನ ಚುಂಗಿನಿಂದ ಮುಖವನ್ನು ಒರೆಸಿದಳು. ನಂತರ ಮಕ್ಕಳನ್ನು ಬೀಳ್ಕೊಡಲು ಸೂಕ್ತ ಸಿದ್ಧತೆಗೆ ಮುಂದಾದಳು.

ಪುಟ್ಟ ಚಂಡೆಯನ್ನು ಅದರ ದಾರದ ಮೂಲಕ ರಾಜನ ಕುತ್ತಿಗೆಗೆ ಹಾಕಿದಳು. ಕಿರುಗಂಟೆಯನ್ನು ಕುಞ್ಞಿಕೃಷ್ಣನ ಕೈಗಿತ್ತಳು. ಶುಭ ಹರಸಿ ಮಕ್ಕಳನ್ನು ಬೀಳ್ಕೊಟ್ಟಳು.

ಮಂಡಿಮಟ್ಟದ ನೀರಿನಲ್ಲಿ, ಮಕ್ಕಳು ಚಂಡೆ ಬಡಿಯುತ್ತಾ, ಗಂಟೆ ಕಿಣಿಕಿಣಿಸುತ್ತಾ ತಾಳಬದ್ಧವಾಗಿ ಹೆಜ್ಜೆ ಹಾಕುತ್ತಾ ಸಾಗಿದರು.

ತೆಯ್ಯಂ ಮೊದಲು ಹೋದದ್ದು ಗೋವಿಂದನ ಮನೆಗೆ. ಮನೆಯಂಗಳದಲ್ಲಿ ತೆಯ್ಯಂ ಕುಣಿಯಿತು. ಸ್ತೋತ್ರ ಹಾಡಿತು. ತಾಳಬದ್ಧವಾಗಿ ಚಂಡೆ ಬಾರಿಸಲ್ಪಟ್ಟಿತು. ಎಲ್ಲವೂ ಕೊನೆಗೊಂಡಾಗ, ಗೋವಿಂದನ್ ಅಡುಗೆ ಮನೆಯತ್ತ ಕೂಗಿ ಹೇಳಿದ, ''ಪಾರೂ, ... ಇದೋ, ಶಿವನು ಬಂದು ನಮ್ಮನ್ನು ಹರಸಿದ್ದಾನೆ... ಇನ್ನು ನಮ್ಮ ಕಷ್ಟಗಳು ದೂರವಾಗ್ತವೆ. ತೆಯ್ಯಂಗೆ ದಕ್ಷಿಣೆ ಕೊಡು.''

ವಿಭೂತಿ ಕದಡಿದ ಓಕುಳಿ ನೀರನ್ನು ಪಾರು ಅಂಗಳದಲ್ಲಿ ಚೆಲ್ಲಿದಳು. ಬಡತನ ಹೊರ್ಟುಹೋಯ್ತು. ಇನ್ನು ಐಶ್ವರ್ಯ ಬರ್ತದೆ. ಶಿವನು ಬಂದನಲ್ಲ... ಶತಮಾನಗಳಿಂದ ಮುಂದುವರಿಯುತ್ತಲೇ ಇದೆ ನಂಬಿಕೆ.

ಒಂದು ತಟ್ಟೆಯಲ್ಲಿ ಒಂದಿಷ್ಟು ಅಕ್ಕಿಯೊಂದಿಗೆ ಪಾರು ಬಂದಳು. ರಾಜ ಅದನ್ನು ಇಸಿದುಕೊಂಡು ಜೋಳಿಗೆಗೆ ಸುರಿದ.

ಚಂಡೆ ಬಡಿಯುತ್ತಾ, ಗಂಟೆ ಬಾರಿಸುತ್ತಾ ಅವರು ಒಂದೊಂದು ಮನೆಗೂ ಹೋಗಿ ಮರಳಿ ಬಂದರು. ಕಂಡಕ್ಕೋರನ್‌ನ ಮನೆಗೆ ಹೋದಾಗ ಆತ ವರಾಂಡದಲ್ಲಿ

ಚಕ್ಕಳಬಕ್ಕಳ ಕುಳಿತು ಬೇಯಿಸಿದ ಮರಗೆಣಸನ್ನು ತಿನ್ನುತ್ತಾ, ಕಳ್ಳು ಕುಡಿಯುತ್ತಾ ಇದ್ದ.

ಸ್ತೋತ್ರ ಹಾಡುವಿಕೆ ಮುಗಿದಾಗ ಚಿಕ್ಕಣಿ ತೆಯ್ಯದೊಡನೆ ಅಕ್ಕರೆಯೊಂದಿಗೆ ಕಂಡಕ್ಕೋರನ್ ಕೇಳಿದ :

''ಒಂದಿಷ್ಟು ಕಳ್ಳು ಕುಡೀತ್ಯಾ ?''

ತೆಯ್ಯಂ ತಲೆಯಾಡಿಸಿತು.

ತೆಯ್ಯಂ ಕಳ್ಳು ಕುಡಿಯಲು ಒಪ್ಪಿಕೊಂಡಾಗ ರಾಜ ಕರೆದ :

''ಕುಞ್ಞೀಷ್ಣಾ...''

ಆತನ ಕರೆಯಲ್ಲಿ ನಿಷೇಧಾಜ್ಞೆಯಿತ್ತು.

ಅಣ್ಣನ ನಿಷೇಧಾಜ್ಞೆಯನ್ನು ಪಾಲಿಸಲು ಕುಞ್ಞೀಷ್ಣ ಸಿದ್ಧನಿರಲಿಲ್ಲ. ಈಗ ಕುಞ್ಞೀಷ್ಣ ರಾಜನ ತಮ್ಮನಲ್ಲ; ತೆಯ್ಯಂ ಆಗಿರುವನು; ತೆಯ್ಯಂ! ತೆಯ್ಯಂಗೆ ಹಿಂದಿನಿಂದಲೂ ಕಳ್ಳು ತುಂಬಾನೆ ಇಷ್ಟ.

ತೆಯ್ಯಂ ಕಂಡಕ್ಕೋರನ್‌ನ ಮುಂದೆ ಚಕ್ಕಳಬಕ್ಕಳ ಕುಳಿತ.

ಬೇಯಿಸಿದ ಮರಗೆಣಸು ಮತ್ತು ಕಳ್ಳು ಹಸಿದ ಹೊಟ್ಟೆಯಲ್ಲಿ ಹೊಯ್ದಿಳಿದ ಬಿರುಮಳೆಯ ಹಾಗೆ ತುಂಬಿದುವು.

ಮುಂದಿನ ಮನೆ ಗೋಪಾಲಕೃಷ್ಣನದು. ಮನೆಯ ಅಂಗಳದಲ್ಲಿ ಕಿರಾತತೆಯ್ಯಂ ಶಿವತಾಂಡವ ಕುಣಿಯಿತು. ನೋಡುತ್ತ ನಿಂತವರೆಲ್ಲರೂ ಮೂಗಿನ ಮೇಲೆ ಬೆರಳೇರಿಸಿದರು. ಸಾಕ್ಷಾತ್ ಶಿವನೇ ಸ್ವತಃ ನರ್ತನದ ಹೆಜ್ಜೆ ಹಾಕುತ್ತಿರುವನೇ? ಎಂತಹ ಚುರುಚುರುಕು...! ನೋಡಿದವರೆಲ್ಲರೂ ತಬ್ಬಿಬ್ಬಾದರು!

ಗೋಪಾಲಕೃಷ್ಣನ ಮನೆಯನ್ನು ದಾಟಿದ ಬಳಿಕ ಕಾಣುವುದು ಕುಟ್ಯಾಲಿ ಹಾಜಿಯ ಮನೆ. ಹಾಜಿಯ ಹಿತ್ತಿಲಿನ ಅತ್ತಣದ ದಾರಿಗುಂಟ ತೆಯ್ಯಂ ಬಿಟ್ಟ ಬಾಣದ ಹಾಗೆ ಧಾವಿಸತೊಡಗಿತು.

ಹಿಂದಿನಿಂದ ರಾಜ ಕೂಗಿ ಹೇಳಿದ :

'ಕುಞ್ಞೀಷ್ಣಾ... ಅದು ಹಾಜಿಯವರ ಮನೆಯಲ್ಲವಾ...? ಮಾಪಿಳ್ಳೆಯರ ಮನೇಲಿ ತೆಯ್ಯಂ ಕುಣಿಯಕೂಡ್ದು...'

''ಚಂಡೆ ಬಡೀತಾ ತೆಪ್ಗೆ ಬಂದ್ರೆ ಸಾಕು. ಹೇಳ್ತಿರೋದು ತೆಯ್ಯಂ.''

ಅಣ್ಣನೊಡನೆ ತೆಯ್ಯಂ ಕೂಗಿ ಹೇಳಿತು.

ತೆಯ್ಯದ ಹಿಂದೆ ರಾಜ ಓಡಿದ. ಓಡುವುದರ ಮಧ್ಯೆ ಮತ್ತೊಮ್ಮೆ ನೆನಪಿಸಿದ :

''ಕುಞ್ಞೀಷ್ಣಾ... ಅದು ಮುಸ್ಲಿಮರ ಮನೆ ಕಣೋ!''

''ನನಗೆ ಗೊತ್ತು. ಅಪ್ಪನನ್ನು ಅಜ್ಜ ಮನೆಯಿಂದ ಹೊರಗಟ್ಟಿದಾಗ ಮಲಗಲು ಮನೆ ಕೊಟ್ಟದ್ದು ಈ ಮಾಪಿಳ್ಳೆಯಲ್ಲವಾ... ಉಳಕೊಳ್ಳಲು ಸಿಕ್ಕಿದ ಮನೆ ಮತ್ತು ಐದು ಸೆಂಟು ಸ್ಥಳ ಯಾರದ್ದು...? ಈ ಮಾಪಿಳ್ಳೆಯದ್ದಲ್ಲವಾ...? ಕತೆಯೆಲ್ಲವೂ ಶಿವನಿಗೆ ಗೊತ್ತು. ಹೇಳ್ತಿರೋದು ಈ ಶಿವ, 'ತೆಪ್ಪಗೆ ಹಿಂದೆ ಬಂದ್ರೆ ಸಾಕು' ಅಂತ...''

ಅವನು ಅಪ್ಪ ಹಾಡುತ್ತಿದ್ದ ಪೊಟ್ಟನ್ ತೆಯ್ಯದ ಸ್ತೋತ್ರವನ್ನು ಜ್ಞಾಪಕಕ್ಕೆ ತಂದುಕೊಂಡ. ಆ ಸ್ತೋತ್ರದಲ್ಲೂ ಮಾಪಿಳ್ಳೆಯನ್ನು ಹೊಗಳುವ ಸಾಲುಗಳು ಇವೆಯಲ್ಲ! ಮಾಪಿಳ್ಳೆತೆಯ್ಯಂ ಎಂಬ ಕೋಲವನ್ನೂ ಕಟ್ಟಿ ನರ್ತಿಸುತ್ತಿದ್ದೇವಲ್ಲ...! ಅಂದಮೇಲೆ ಎಲ್ಲಿದೆ ಮಾಪಿಳ್ಳೆಯರ ಒಡನಾಟಕ್ಕೆ ನಿಷೇಧಾಜ್ಞೆ? ಎಲ್ಲಾದ್ರೂ ತೊಲಗ್ಲಿ ಅದು...

ತೆಯ್ಯದ ಹಿಂದೆ ರಾಜನೂ ಓಡಿದ!

ಕುಟ್ಯಾಲಿ ಹಾಜಿಯ ಮನೆಯಂಗಳದಲ್ಲಿ ಗಂಟೆಯ ದನಿಗೆ, ಚಂಡೆಯ ಸದ್ದಿಗೆ ತಾಳಬದ್ಧವಾಗಿ ನರ್ತಿಸತೊಡಗಿತು ತೆಯ್ಯಂ!

ಚಂಡೆಯ ಸದ್ದು ಕೇಳಿದೊಡನೆ ಹಾಜಿಯವರ ಮನೆಯವರೆಲ್ಲರೂ ವರಾಂಡಕ್ಕೆ ಧಾವಿಸಿ ಬಂದರು. ಅಚ್ಚರಿಯೊಂದಿಗೆ ತೆಯ್ಯದ ನರ್ತನವನ್ನು ನೋಡತೊಡಗಿದರು.

ಹಾಜಿಯ ಹೆಂಡತಿ ಹೇಳಿದಳು : ''ಇದು ನಮ್ಮ ಅಮ್ಮಿಣಿಯ ಮಗ ಕುಞ್ಞೀಸನಲ್ಲವಾ... ? ಕುಞ್ಞೀಸನ ತೆಯ್ಯವನ್ನು ನೋಡೋಕೆ ಎಂಥಾ ಚೆಂದ!...''

ರಾಜನ ಚಂಡೆಯ ಸದ್ದು ಕೇಳಿ ನೆರೆಹೊರೆಯ ಮನೆಗಳ ಮುಸ್ಲಿಂ ಹುಡುಗಿಯರೆಲ್ಲರೂ ಧಾವಿಸಿ ಬಂದರು. ಅವರು ತೆಯ್ಯದ ಸುತ್ತಲೂ ನಿಂತುಕೊಂಡರು. ಜೀವಮಾನದಲ್ಲಿ ಒಮ್ಮೆ ಕೂಡ ಅವರು ತೆಯ್ಯವನ್ನು ನೋಡಿರಲಿಲ್ಲ. ನರ್ತನದ ಹೆಜ್ಜೆ ಸೊಬಗನ್ನು ಸವಿದಿರಲಿಲ್ಲ. ಅಪರೂಪವಾಗಿ ದೊರೆತ ಅವಕಾಶವನ್ನು ಅವರು ತೀವ್ರ ಕುತೂಹಲದೊಂದಿಗೆ ನೋಡುತ್ತಾ ಆಸ್ವಾದಿಸಿದರು.

ಹಾಜಿಯ ಮಗಳು ಐವತ್ತು ರೂಪಾಯಿಯನ್ನು ತೆಯ್ಯದ ಕೈಯಲ್ಲಿ ಇರಿಸಿದಳು. ತೆಯ್ಯಂ ಅವಳ ತಲೆ ಮೇಲೆ ಕೈಯಿರಿಸಿ ಅನುಗ್ರಹಿಸಿತು.

ಹಣವನ್ನು ತೆಯ್ಯಂ ರಾಜನ ವಶಕ್ಕೆ ಕೊಡುವುದೇ ತಡ, ಮುಸ್ಲಿಂ ಹುಡುಗಿಯರೆಲ್ಲರೂ ತೆಯ್ಯದ ಕೈಗಳನ್ನು ಹಿಡಿದೆಳೆದರು... ಶ್ರೀಕೃಷ್ಣನನ್ನು ಗೋಪಿಕೆಯರು ಹಿಡಿದೆಳೆಯುವ ಹಾಗೆ. ತರುವಾಯ ಅವರು ತೆಯ್ಯದೊಡನೆ ಲಲ್ಲೆಗರೆದರು : ''ಪುಟ್ಟಾಣಿ ತೆಯ್ಯವೇ, ಬಾ ನಮ್ಮ ಮನೆಗೆ ತೆಯ್ಯದ ಕುಣಿತ ಕುಣಿಯೋಕೆ... ಕೈ ತುಂಬ ದುಡ್ಡು ಕೊಡ್ತೇವೆ...''

ಬೇಕಾಗಿರುವುದು ಅದು – ತೆಯ್ಯದ ಕೈ ಹಿಡಿದು ಎಳೆದವರಿಗೆ. ತನ್ಮಧ್ಯೆ ಒಬ್ಬ ಜಾಣೆ ತೆಯ್ಯದ ಕಿರೀಟವನ್ನು ಮುಟ್ಟಿ ನೋಡಿದಳು. ಚಿನ್ನದ ಹಾಗೆ ಹೊಳೆಯುವ ಚುಕ್ಕಿಗಳು ಮತ್ತು ಗೆರೆಗಳು. ಅಪ್ಪಟ ಚಿನ್ನ ಹೌದೇ ಎಂಬ ಸಂದೇಹ ನಿವಾರಿಸಿಕೊಳ್ಳಲು.

ಕೈ ಹಿಡಿದವರೊಡನೆ ತೆಯ್ಯಂ ಹೇಳಿತು : ''ಎಲ್ಲರ ಮನೆಗೂ ತೆಯ್ಯಂ ಬರುತ್ತದೆ. ಎಲ್ಲರಿಗೂ ಬೇಕಲ್ಲ ಶಿವನ ಅನುಗ್ರಹ.''

ತೆಯ್ಯದ ಹಿಂದೆ ವರ್ಣರಂಜಿತ ಉಡುಗೆಗಳನ್ನು ಧರಿಸಿರುವ ಮುಸ್ಲಿಂ ಹುಡುಗಿಯರೂ ಹೆಜ್ಜೆ ಹಾಕಿದರು; ತೆಯ್ಯಂಗಳ ಒಂದು ಗುಂಪಿನ ಹಾಗೆ...

ಆ ವಠಾರದಲ್ಲಿರುವ ಮುಸ್ಲಿಂ ಮನೆಗಳಿಗೆಲ್ಲ ತೆಯ್ಯಂ ಭೇಟಿ ಕೊಟ್ಟು ಕುಣಿದು ಮರಳಿತು. ರಾಜನಿಗೆ ಕೈತುಂಬ ದುಡ್ಡು ಸಿಕ್ಕಿತು. ಅವನು ಅಂದುಕೊಂಡ : ಇದು ಶಿವನ ಮಹಿಮೆಯೇ...

ಮುಸ್ಲಿಂ ಮನೆಗಳಿಗೆ ತೆಯ್ಯಂ ಹೋಗಿಬರುತ್ತಿರುವುದನ್ನು ಕಂಡು ಸಹಿಸಲೊಲ್ಲದ ಇನ್ನೊಂದು ಜನವಿಭಾಗ ಕಣ್ಣುಗಳಲ್ಲಿ ರುದ್ರನನ್ನು ನೆಲೆಗೊಳಿಸಿ ನೋಡುತ್ತಾ ಇತ್ತು. ಅದರ ಹಲ್ಲುಗಳು ಮಸೆಯಲ್ಪಡುವಾಗ ಮನುಷ್ಯರಿಗೆ ಗೊತ್ತಿಲ್ಲದ ಭಾಷೆಯಲ್ಲಿ ಗುರ್‌ರ್ ಎನ್ನುತ್ತಿತ್ತು.

ಮುಸ್ಲಿಂ ಮನೆಗಳು ಮುಗಿದ ಬಳಿಕ ತುಸು ದೂರದಲ್ಲಿ ಇರುವುದು ಡಾಕ್ಟರ್ ವೇಣುಗೋಪಾಲನ್ ನಂಬಿಯಾರರ ಮಹಡಿ ಮನೆ. ಡಾಕ್ಟರ್‌ರ ಹೆಂಡತಿ ಅಲ್ಸೇಶ್ಯನ್ ನಾಯಿಯನ್ನು ನೇವರಿಸುತ್ತಾ, ಸೋಫಾದಲ್ಲಿ ಕುಳಿತು ಆನಂದಿಸುತ್ತಾ ಇದ್ದಳು. ಡಾಕ್ಟರ್‌ರ ಮನೆಯ ಗೇಟನ್ನು ತಳ್ಳಿ ತೆರೆದು ತೆಯ್ಯಂ ಒಳಗೆ ಪ್ರವೇಶಿಸಿತು. ಸೊಸೈಟಿ ಲೇಡಿಗೆ ಅದು ಹಿಡಿಸಲಿಲ್ಲ. ಒಪ್ಪಿಗೆಯಿಲ್ಲದೆ ಗೇಟು ತೆರೆಯುವುದಾ ?

ಡಾಕ್ಟರ್‌ರ ಹೆಂಡತಿ ನಾಯಿಯ ಸರಪಳಿಯನ್ನು ಬಿಚ್ಚಿ ಹೇಳಿದರು :

ಒಡತಿಯ ಆದೇಶ ಕೇಳಿಸುವುದೇ ತಡ, ನಾಯಿ ತೆಯ್ಯದತ್ತ ಬೊಗಳುತ್ತಾ ನುಗ್ಗಿತು.

ಹುಲಿಯ ಹಾಗೆ ಕಚ್ಚಿ ಸಿಗಿಯಲು ಬರುತ್ತಿರುವ ನಾಯಿಯನ್ನು ಕಂಡು ತೆಯ್ಯವೂ ಚಂಡೆಯವನೂ ಹಿಂತಿರುಗಿ ಓಡಿದರು. ಚಂಡೆಯವನು ಓಡಿದ್ದು ಒಂದು ದಿಕ್ಕಿಗೆ. ತೆಯ್ಯಂ ಓಡಿದ್ದು ಇನ್ನೊಂದು ದಿಕ್ಕಿಗೆ.

ನಾಯಿಯೂ ತೆಯ್ಯವೂ ಸ್ಪರ್ಧಿಸುತ್ತಾ ಓಡುತ್ತಿರುವ ದೃಶ್ಯವನ್ನು ಡಾಕ್ಟರ ಹೆಂಡತಿ ನೋಡುತ್ತಾ ಆನಂದಿಸಿದಳು.

ತೆಯ್ಯಂ ಪ್ರಾಣಭಯದೊಂದಿಗೆ ಪಲಾಯನ ಮಾಡುತ್ತಿರುವಾಗ ತೆಯ್ಯದ ವೇಷಭೂಷಣಗಳೂ ಒಂದೊಂದಾಗಿ ಕಳಚಿಹೋಗಿ ದಾರಿಯಲ್ಲಿ ಬಿದ್ದವು. ತೆಯ್ಯಂ ಉಟ್ಟುಕೊಂಡಿದ್ದ ಕೆಂಪು ಪಟ್ಟೆ ವಸ್ತ್ರಕ್ಕೆ ನಾಯಿ ಬಾಯಿ ಹಾಕಿತ್ತು. ತೆಯ್ಯಂ ತನ್ನ ವಸ್ತ್ರ ಕಳಚಿ ಓಡುವಾಗ ಕೈಯಲ್ಲಿದ್ದ ಗಂಟೆಯನ್ನು ನಾಯಿಯ ಮೂತಿಗೆ ರೊಯ್ಯನೆ ಎಸೆಯಿತು. ನಾಯಿಯ ನೆಗೆತ ತುಸು ತಡೆಯಲ್ಪಟ್ಟಿತು. ತನ್ಮಧ್ಯೆ ಎದುರಿಗೆ ಕಾಣಿಸಿದ ದೊಡ್ಡ ತೋಡಿಗೆ ತೆಯ್ಯಂ ಸರಕ್ಕನೆ ಹಾರಿತು. ನಿಮಿಷದೊಳಗೆ ನಾಯಿಯೂ ತೋಡಿನ ದಡಕ್ಕೆ ತಲುಪಿತು.

ಸ್ವಲ್ಪವೂ ಹೆದರದೆ ತೆಯ್ಯಂ ತೋಡಿನಲ್ಲಿ ಮುಳುಗು ಹಾಕಿ ನೀರ ಮೇಲೆ ನಿಮಿರಿತು; ಬೋರಲಾಗಿಯೂ ಅಂಗಾತವಾಗಿಯೂ ಈಜಾಡತೊಡಗಿತು. ತೆಯ್ಯದ ಚಲನೆಗೆ ತಕ್ಕಂತೆ ದಡದಲ್ಲಿ ನಾಯಿ ಬೊಗಳುತ್ತಾ ಅತ್ತಿತ್ತ ಓಡಾಡಿತು.

ನಾಯಿ ಹಿಂತಿರುಗಲು ತಯಾರಿಲ್ಲ. ತೆಯ್ಯದತ್ತ ನೋಡುತ್ತಾ ಬೊಗಳುತ್ತಲೇ ಇದೆ.

ತನ್ನನ್ನು ಹಿಡಿಯಲಾಗದ ನಾಯಿಗೆ ಮೊಣಕೈ ತೋರಿಸುತ್ತಾ ತೆಯ್ಯಂ ಹೇಳಿತು :

'ಸೋತರೆ... ಇಗಾ ಕೈಯ ಮಂಡಿ ಕಚ್ಚಿಕ್ಕೊ...'

ಅದೇ ಹೊತ್ತಿನಲ್ಲಿ ಅಮ್ಮಿಣಿ ಬೆತ್ತದ ಬಡಿಗೆ ಹಿಡಿದುಕೊಂಡು ಕೆಲವು ಮಂದಿಯನ್ನು ಕೂಡಿಸಿಕೊಂಡು ತೋಡಿನ ದಡಕ್ಕೆ ತಲುಪಿದಳು. ದಾರಿಯುದ್ದಕ್ಕೂ ತೆಯ್ಯದ ವೇಷಭೂಷಣಗಳು ಚದುರಿ ಬಿದ್ದು ಹೋಗಿರುವುದನ್ನು ಕಂಡಳು.

ಡಾಕ್ಟರ್‌ರ ಹೆಂಡತಿಯ ಧಿಕ್ಕಾರವನ್ನು ಸಹಿಸಲಾಗದೆ ಅಮ್ಮಿಣಿಯೂ ಸಂಗಡಿಗರೂ ಪ್ರತಿಕ್ರಿಯೆಯ ಕುರಿತು ಯೋಚಿಸುತ್ತಿರುವರು.

ಮಲಯಾಳಂ ಮೂಲ : **ಕೆ.ಎಂ.ಕೆ. ಕುಞ್ಞಬ್ದುಲ್ಲ**
ಕನ್ನಡಕ್ಕೆ : **ಕೆ. ಕೆ. ನಾಯರ್**
'ತೃಪ್ತಿ', ೪ನೇ ಅಡ್ಡರಸ್ತೆ, ಸಪ್ತಗಿರಿ ನಗರ, ಮಣಿಪಾಲ - ೫೭೬ ೧೦೪



ಮಾರ್ಕ್ಸ್ ಪ್ರಭುತ್ವದ ಕಟ್ಟಾ ವಿರೋಧಿ. ಪ್ರಭುತ್ವವು ಇಲ್ಲವಾಗುವ ದೆಸೆಯನ್ನು ಅವನು ಆದರಿಸುತ್ತಿದ್ದ. ಇದೊಂದು ಶುದ್ಧ ಕಾಲ್ಪನಿಕ ನಿರೀಕ್ಷೆ ಎನ್ನುವವರಿದ್ದಾರೆ. ಆದರೆ ಅವನು ನಿರಂಕುಶ ಪ್ರಭುತ್ವಕ್ಕೆ ಕಾತುರನಾಗಿರಲಿಲ್ಲ ಎಂಬುದು ಸ್ಪಷ್ಟ. ಹಾಗೆ ನೋಡಿದರೆ ಅವನು ಪ್ರತಿಪಾದಿಸಿದ ಪ್ರಭುತ್ವದ ಕಮರಿಹೋಗುವಿಕೆಯು ಕಾಲ್ಪನಿಕವೇನಲ್ಲ, ಕೇಂದ್ರೀಯ ಆಡಳಿತವು ನಶಿಸಿ ಹೋಗುತ್ತದೆಂದಲ್ಲ ಅವನು ಹೇಳಿದ್ದು. ಯಾವುದೇ ಆಧುನಿಕ ಸಂಸ್ಕೃತಿಗೆ ಬೇಕಾಗುವಂತೆ ಕಮ್ಯುನಿಸ್ಟ್ ಸಮಾಜಕ್ಕೂ ಕೇಂದ್ರೀಯ ಆಡಳಿತ ಬೇಕು. ಮಾರ್ಕ್ಸ್ ಮಾತುಗಳಲ್ಲಿ ಹೇಳುವುದಾದರೆ ಅದು ''ಎಲ್ಲ ಸಮುದಾಯಗಳಲ್ಲಿ ಸಮಾನ ಚಟುವಟಿಕೆಗಳಿಂದಾಗಿ ಉದ್ಭವವಾಗುವ'' ಅಂಶ. ಹಿಂಸೆಯನ್ನು ಸಾಧನವಾಗಿ ಉಳ್ಳ ಪ್ರಭುತ್ವ ಅಳಿಯದೆ ಇರುವುದಿಲ್ಲವೆಂಬುದು ಅವನ ಮಾತು. ''ಕಮ್ಯುನಿಸ್ಟ್ ಘೋಷಣಾ ಪತ್ರ''ದಲ್ಲಿ ಹೇಳಿರುವಂತೆ ಕಮ್ಯುನಿಸ್ಟ್ ವ್ಯವಸ್ಥೆಯಲ್ಲಿ ಸಾರ್ವಜನಿಕ ಅಧಿಕಾರವು ತನ್ನ ರಾಜಕೀಯ ಲಕ್ಷಣವನ್ನು ಕಳೆದುಕೊಂಡಿರುತ್ತದೆ. ಕಮರಿಹೋಗುವುದು ಕೇವಲ ಒಂದು ವಿಧದ ಅಧಿಕಾರ, ಒಂದು ಪ್ರಭಾವಿ ಸಾಮಾಜಿಕ ವರ್ಗದ ಆಳ್ವಿಕೆ, ಬೇರೆ

# ಪ್ರಭುತ್ವದ ನಾನಾ ಬಗೆಗಳು

**೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೇರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೫೮ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ॥ ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಹನ್ನೊಂದನೆಯ ಕಂತು.**

ವರ್ಗಗಳ ಮೇಲಿನ ಅದರ ದಬ್ಬಾಳಿಕೆ. ಉದ್ಯಾನಗಳ ಉಸ್ತುವಾರಿ ಇರುವುದಿಲ್ಲ ಅಥವಾ ವಾಹನ ಚಾಲಕರಿಗೆ ಪರವಾನಗಿ ನೀಡಲು ಪರೀಕ್ಷೆ ಇರುವುದಿಲ್ಲ ಎಂದಲ್ಲ. ಪ್ರಭುತ್ವವನ್ನು ಯಾವ ಅಂಜಿಕೆಯೂ ಇಲ್ಲದೆ ವಸ್ತುನಿಷ್ಠವಾಗಿ ನೋಡುವವನು ಮಾರ್ಕ್ಸ್. ಅದು ರಾಜಕೀಯವಾಗಿ ಅಲಿಪ್ತವಲ್ಲ, ಸಾಮಾಜಿಕ ಹಿತಾಸಕ್ತಿಗಳನ್ನು ಸಮಾನ ದೃಷ್ಟಿಯಿಂದ ನೋಡುವಂಥದಲ್ಲ. ದುಡಿಮೆ ಮತ್ತು ಬಂಡವಾಳಗಳ ನಡುವೆ ಘರ್ಷಣೆಯಿದ್ದಾಗ ಬಂಡವಾಳಶಾಹಿ ಪ್ರಭುತ್ವವು ಬಂಡವಾಳಕ್ಕೆ ತಾನೆ ಪುಷ್ಟಿ ದೊರಕಿಸಿಕೊಡುವುದು ! ಆಸ್ತಿಯ ವಿರುದ್ಧ ಕ್ರಾಂತಿಯನ್ನು ಮಾಡುವ ಪ್ರಭುತ್ವವಿಲ್ಲ. ಆದರೆ ಸಾಮಾಜಿಕ ವ್ಯವಸ್ಥೆಯನ್ನು ಬದಲಿಸಬೇಕೆಂಬುವವರ ಇರಾದೆಯನ್ನು ತಡೆಗಟ್ಟಲು ಅದು ಸಕ್ರಿಯವಾಗುತ್ತದೆ. ವ್ಯವಸ್ಥೆಯು ನ್ಯಾಯಯುತವಲ್ಲದಿದ್ದರೆ ಪ್ರಭುತ್ವವೂ ನ್ಯಾಯಯುತವಾಗಿರುವುದಿಲ್ಲವೆಂದರ್ಥ. ಅದನ್ನು ಅಂತ್ಯಗೊಳಿಸ ಬೇಕೆನ್ನುತ್ತಾನೆ ಮಾರ್ಕ್ಸ್; ಆದರೆ ನಾಟಕ ಮಂದಿರಗಳನ್ನು ಅಥವಾ ವಿಜ್ಞಾನ ಸಂಶೋಧನೆಯ ಸಂಸ್ಥೆಗಳನ್ನು ಮುಚ್ಚಬೇಕೆನ್ನುವುದಿಲ್ಲ.

ಪ್ರಭುತ್ವಕ್ಕೆ ಪಕ್ಷಪಾತವಿದೆಯೆಂಬುದು ಚರ್ಚಿಸಬೇಕಾದ ವಿಷಯವಲ್ಲ. ರಾಜಕೀಯ ಪ್ರತಿಭಟನೆಯಲ್ಲಿ ಪಾಲ್ಗೊಳ್ಳುವವರಿಗೆಲ್ಲಾ ಅದು ತಿಳಿದಿದೆ. ಎಲ್ಲಿಯ ವರೆಗೆ ಪ್ರಭುತ್ವದ ಟೀಕಾಕಾರರು ಮೇಲುಗೈ ಸಾಧಿಸಿರುವುದಿಲ್ಲವೋ ಅಲ್ಲಿಯವರೆಗೆ ಪ್ರಭುತ್ವವು ಉದಾರಿ, ಆ ಹಂತ ಮೀರಿದಾಗ ಅದು ತನ್ನ ಪ್ರಾಬಲ್ಯವನ್ನು ಸಂಕೋಚ ಇಲ್ಲದೆ ಪ್ರದರ್ಶಿಸುತ್ತದೆ. ಮಿಲಿಟರಿ ಟ್ಯಾಂಕುಗಳನ್ನು ಬೀದಿಗೆ ತರಲು ಸಹ ಅದು ಹೇಸುವುದಿಲ್ಲ. ಹಿಂಸೆಯು ಅದರ ಮೂಲ ಲಕ್ಷಣ. ಈ ಹಿಂಸೆ ಯಾರ ರಕ್ಷಣೆಗಾಗಿ ಎಂಬುದನ್ನಷ್ಟೆ ಮಾರ್ಕ್ಸ್ ಒತ್ತುಕೊಟ್ಟು ಹೇಳುವುದು. ಪೊಲೀಸರಿಗೆ ಗೊತ್ತು ಅವರು ಯಾವುದರ ಪಕ್ಷಪಾತಿಗಳೆಂದು. ಬ್ರಿಟನ್ನಿನ ಲೇಬರ್ ಪಕ್ಷದ ಸರ್ಕಾರವು ದುಡಿಯು ವವರನ್ನು ಹತ್ತಿಕ್ಕಲು ಸಹ ಹೇಸುವುದಿಲ್ಲ. ಸರ್ಕಾರಗಳು ಅಂತರರಾಷ್ಟ್ರೀಯ ಬಂಡವಾಳದ ಏಜೆಂಟರು ಎಂದು ಮಾರ್ಕ್ಸ್ ಹೇಳುತ್ತಿದ್ದ. ಅದೀಗ ಪರಮಸತ್ಯ ಎಂದು ಸಾಬೀತಾಗಿದೆ. ಉದಾರವಾದಿಗಳ ಅನುಭವಕ್ಕೂ ಅದು ಬಂದಿದೆ. ಪ್ರಜಾಪ್ರಭುತ್ವ ಮಾದರಿಯದೆನ್ನಲಾದ ಸರ್ಕಾರವು ಯಾವ ಮಾದರಿಯದೇ ಇರಲಿ, ಅದು ತನ್ನ ನಿಜ ಸ್ವಭಾವವನ್ನು ಬಿಟ್ಟುಕೊಟ್ಟಿಲ್ಲ. ಹಾಗಿದ್ದರೆ ಪೊಲೀಸರು, ನ್ಯಾಯಾಲಯ, ಜೈಲು, ಅರೆ-ಮಿಲಿಟರಿ ತಂಡಗಳು, ಎಲ್ಲವನ್ನೂ ರದ್ದು ಮಾಡಬೇಕೇ ? ಭಯೋತ್ಪಾದಕರೋ, ಪರಮಾಣು ಬಾಂಬಿನ ಬತ್ತಳಿಕೆಯವರೋ ಬಂದೆರಗಿದರೆ

**ಡಾ॥ ಜಿ. ರಾಮಕೃಷ್ಣ**

ಆಗೇನು ಮಾಡುವುದು? ಎಡಪಂಥೀಯರಿಗೂ ಇದು ತಲೆನೋವಿನ ಸಂಗತಿಯೇ. ಅಂದರೆ ಪ್ರಭುತ್ವದ ಎಲ್ಲ ಹಿಂಸೆಯೂ ಯಥಾಸ್ಥಿತಿಯನ್ನು ಕಾಪಾಡುವ ಆಶಯ ಹೊಂದಿಲ್ಲ. ಪ್ರಭುತ್ವಕ್ಕೆ ವರ್ಗ ನಿರ್ದಿಷ್ಟವಾದ ಹಾಗೂ ವರ್ಗಾತೀತವಾದ ಕೆಲಸಗಳಿವೆ; ಅದನ್ನು ಮಾರ್ಕ್ಸ್ ತನ್ನ 'ಬಂಡವಾಳ' ಗ್ರಂಥದ ಮೂರನೆಯ ಸಂಪುಟದಲ್ಲಿ ಚರ್ಚಿಸಿದ್ದಾನೆ. ಮ್ಯಾಂಚೆಸ್ಟರ್‌ನಲ್ಲಿ ಭಾರತ ಮೂಲದ ವಿದ್ಯಾರ್ಥಿಯೊಬ್ಬನನ್ನು ಗೂಂಡಾಗಳು ಚುಚ್ಚುತ್ತಿದ್ದಾಗ ಪೊಲೀಸರು ಅದನ್ನು ಪ್ರತಿಬಂಧಿಸಿದರೆ ಅದು 'ಬಂಡವಾಳಶಾಹಿಯ' ರಕ್ಷಣೆಗಾಗಿ ಆಗಿರುವುದಿಲ್ಲ. ನಮ್ಮಲ್ಲಿ ಅತ್ಯಾಚಾರಗಳು ಎಲ್ಲೆಯಿಲ್ಲದಷ್ಟು ನಡೆಯುತ್ತಿವೆ; ಅದನ್ನು ತಡೆಯಲು ಪೊಲೀಸರು ಬಂದರೆ ಅದು ಬಂಡವಾಳಶಾಹಿಯ ರಕ್ಷಣೆ ಎನಿಸಿಕೊಳ್ಳದು. ಕಂಪ್ಯೂಟರಿನಲ್ಲಿ ಮಕ್ಕಳಿಗೆ ಲೈಂಗಿಕ ಪ್ರಚೋದನಾ ಸಾಮಗ್ರಿ ಸಿಗದಂತೆ ಮಾಡಿದರೆ ಅದು ಮಾನವ ಹಕ್ಕುಗಳ ಉಲ್ಲಂಘನೆಯಾಗಿ ಬಿಡುತ್ತದೆಯೆ? ಮಾನವ ಸ್ವಾತಂತ್ರ್ಯ ಇರುವವರೆಗೆ ಅದರ ದುರುಪಯೋಗ ಸಹ ಸಾಧ್ಯ. ಹಾಗೆ ದುರುಪಯೋಗ ಮಾಡಿಕೊಳ್ಳುತ್ತಲೇ ಹೋಗುವವರಿಗೆ ಒಂದು ಕಾರಾಗೃಹವಿದ್ದರೆ ಪ್ರಮಾದವೇನು?

ಮಾರ್ಕ್ಸ್ ಇದಾವುದನ್ನೂ ನಿರಾಕರಿಸಿಲ್ಲ. ಪ್ರಭುತ್ವವು ಒಳ್ಳೆಯ ಕೆಲಸಗಳಿಗೆ ಬಲವಾದ ಆಸರೆ ನೀಡಬಹುದಾದ ಅಂಗವೆಂದು ಅವನ ನಂಬಿಕೆ. ೧೯ನೆಯ ಶತಮಾನದ ಇಂಗ್ಲೆಂಡಿನ ಅನೇಕ ಕಲ್ಯಾಣಕಾರಿ ಶಾಸನಗಳನ್ನವನು ಸ್ವಾಗತಿಸಿದ್ದ. ನೆಲೆಯಿಲ್ಲದ ಮಕ್ಕಳಿಗೆ ಒಂದು ಆಶ್ರಯತಾಣ ಕಲ್ಪಿಸಿದರೆ ಅದು ಪ್ರಭುತ್ವದ ದೋಷವೆಂದು ಯಾರು ಹೇಳುತ್ತಾರೆ? ಅಥವಾ ಸಂಚಾರಿ ನಿಯಮಗಳನ್ನು ಮಾಡುವುದನ್ನು ಟೀಕಿಸಬೇಕೆ? ಮಾರ್ಕ್ಸ್‌ನ ಟೀಕೆ ಬೇರೆಯದು: ವಿವಿಧ ಗುಂಪುಗಳನ್ನು ಮತ್ತು ವರ್ಗಗಳನ್ನು ಶಾಂತಿಯುತವಾಗಿ ಜೊತೆ ಮಾಡಿ ಪ್ರಭುತ್ವವು ಸಾಮರಸ್ಯ ತರುತ್ತದೆಂಬ ಮಾತನ್ನು ಮಹಾ ಬೊಗಳೆ ಎಂದು ಅವನು ತಿರಸ್ಕರಿಸಿದ. ಅವನ ಪ್ರಕಾರ ಪ್ರಭುತ್ವವು ಅಸಾಂಗತ್ಯಗಳಿಗೆ ಉಗಮಸ್ಥಾನ, ಅದು ವಿಭಜನೆಯ ಹರಿಕಾರ. ಸಮಾಜವನ್ನು ಒಂದಾಗಿರುವಂತೆ ನೋಡಿಕೊಳ್ಳುವುದು ಅದರ ಕೆಲಸ ಹೌದು, ಆದರೆ ಆಳುವ ವರ್ಗದ ಹಿತಾಸಕ್ತಿಗಳಿಗೆ ತಕ್ಕಂತೆ ಅದು ಆ ಕೆಲಸ ಮಾಡುತ್ತದೆ. ಸಮಭಾವವು ತೋರಿಕೆಯ ಮುಖ, ಪಕ್ಷಪಾತವು ನೈಜವಾದ ಮುಖ. ''ಪ್ರಭುತ್ವವು ಬಡಜನರಿಗೆ ಹೊಸ ಹೊಸ ಸಂಕೋಲೆಗಳನ್ನು ತೊಡಿಸುತ್ತದೆ. ಶ್ರೀಮಂತರಿಗೆ ಹೊಸ ಅಧಿಕಾರಗಳನ್ನು ನೀಡುತ್ತದೆ. ...ಆಸ್ತಿಯ ಬಗೆಗಿನ ಕಾನೂನನ್ನು ಬಿಗಿಗೊಳಿಸುತ್ತದೆ ಮತ್ತು ಅಸಮಾನತೆಯನ್ನು ಹೆಚ್ಚಿಸುತ್ತದೆ. ಕಸಿದುಕೊಂಡ ಸಂಪತ್ತು ಸ್ವಾಭಾವಿಕ ಹಕ್ಕಿನದಾಗಿ ಬಿಡುತ್ತದೆ. ಕೆಲವು ದುರಾಸೆಯ ಜನರ ಹಿತಕ್ಕಾಗಿ ಇಡೀ ಮನುಕುಲವನ್ನು ನಿರಂತರ ದುಡಿಮೆಗೆ ದಬ್ಬುತ್ತದೆ, ಜನರನ್ನು ಕಂಗಾಲಾಗಿಸಿ ಸೇವಕರನ್ನಾಗಿ ಮಾಡುತ್ತದೆ.'' ಇದು ಮಾರ್ಕ್ಸ್ ಹೇಳಿದ್ದಲ್ಲ, ಅವನಿಗಿಂತ ಮುಂಚೆಯೇ ಫ್ರಾನ್ಸಿನ ರೂಸೋ ಇದನ್ನು ಹೇಳಿದ್ದ, ತನ್ನ ''ಅಸಮಾನತೆಯ ಬಗೆಗಿನ ವ್ಯಾಖ್ಯಾನ'' ಎಂಬ ಗ್ರಂಥದಲ್ಲಿ. ಪ್ರಭುತ್ವ ಮತ್ತು ವರ್ಗ ಹಿತಾಸಕ್ತಿಯ ನಡುವೆ ನಿಚ್ಚಳ ಸಂಬಂಧ ಇರುವುದನ್ನು ಗುರುತಿಸಿದ ಮಾರ್ಕ್ಸ್ ಒಬ್ಬನೇ ಹುಚ್ಚ ಎನ್ನುವಂತಿಲ್ಲ! ಹಾಗೆ ನೋಡಿದರೆ, ಮೊದಲಿಗೆ ಹೆಗೆಲ್‌ನ ಪ್ರಭಾವದಿಂದಾಗಿ ಪ್ರಭುತ್ವವನ್ನು ಆದರಣೀಯ ಘಟಕವೆಂದೇ ಮಾರ್ಕ್ಸ್ ಭಾವಿಸಿದ್ದ. ಆದರೆ ಆಗ್ಗೆ ಅವನಿನ್ನೂ 'ಮಾರ್ಕ್ಸ್‌ವಾದಿ' ಆಗಿರಲಿಲ್ಲ. ನಂತರವೂ ತನ್ನನ್ನು ತಾನು ಮಾರ್ಕ್ಸ್‌ವಾದಿಯೆಂದು ಕರೆದುಕೊಳ್ಳಲಿಲ್ಲ. ಚಾರಿತ್ರಿಕವಾಗಿ ಸಮಾಜದ ಬೆಳವಣಿಗೆಗಳನ್ನು ಗುರುತಿಸುವ ಸಮಾಜಶಾಸ್ತ್ರಜ್ಞ ತಾನೆಂಬುದಷ್ಟೇ ಅವನ ಹೆಮ್ಮೆ.

ಸಾಮರಸ್ಯ, ಒಮ್ಮತ ಇತ್ಯಾದಿ ಮಾತನಾಡುವವರು ಉದ್ಯಮಗಳ ಪೂಜಾರಿಗಳಾಗಿ ಬಿಡುತ್ತಾರೆ. ಅದರ ಸಮರ್ಥಕರ ವಿವರಣೆ ಇದು: ''ಒಂದು ಕಡೆ ದುರಾಸೆಯ ಯಜಮಾನರು – ಇನ್ನೊಂದು ಕಡೆ ಜಗಳಗಂಟಿ ಕೆಲಸಗಾರರು; ಇವರ ನಡುವೆ ಪ್ರಭುತ್ವವಿದೆ; ಅದು ತರ್ಕದ ಅವತಾರ ಪುರುಷ, ಸಮಾನತೆ-ಸೌಮ್ಯತೆ-ಉದಾರತ್ವ ಅದರ ಲಕ್ಷಣ; ಸಂಘರ್ಷದಲ್ಲಿ ತೊಡಗಿರುವವರನ್ನು ನಿಸ್ವಾರ್ಥದಿಂದ ಒಂದುಮಾಡಲು ಯತ್ನಿಸುತ್ತದೆ.'' ಇಲ್ಲಿ ಒಂದು ಪ್ರಶ್ನೆ ಇದೆ: ಸನ್ಮತಿಯವರಿಗೆ ನಿಲ್ಲಲು ಮಧ್ಯದ ಜಾಗವೇ ಏಕೆ ಶ್ರೇಷ್ಠ? ತಾನು ಮಧ್ಯೆ, ಇತರರೆಲ್ಲಾ ತೀವ್ರಗಾಮಿಗಳು, ಎಂದು ತನ್ನನ್ನು ತಾನು ಕರೆದುಕೊಳ್ಳಲು ಪ್ರಭುತ್ವಕ್ಕೇಕೆ ಲಾಲಸೆ? ಅಲ್ಲೇ ತಿಕ್ಕಾಟದ ಆರಂಭ: ''ನಾನು ಮಿತವಾದಿ, ಸೌಮ್ಯ'' ಎಂದು ಪ್ರಭುತ್ವವು ತನ್ನನ್ನು ಬಣ್ಣಿಸಿಕೊಂಡರೆ, ''ಅಲ್ಲ, ನೀನು ಕಟುಕ, ಪಕ್ಷಪಾತಿ'' ಎಂದು ಅದನ್ನು ಕರೆಯುವವರೂ ಇರುತ್ತಾರೆ. ವ್ಯಕ್ತಿಗಳ ಸಂದರ್ಭದಲ್ಲೂ ಇದು ನಿಜ. ಹಿಟ್ಲರ್ ಎಂದಾದರೂ ಬಹಿರಂಗವಾಗಿ ''ನಾನು ಸೌಮ್ಯನಲ್ಲ, ನಾನು ಕಟುಕ'' ಎಂದು ಹೇಳಿಕೊಂಡು ತಿರುಗಾಡಿದನೆ? ಅವನ ಕ್ರಿಯೆಯು ಸೌಮ್ಯತ್ವ- ಕಟುಕತ್ವಗಳ ಸೂಚಕ; ಅವನ ಮಾತಲ್ಲ. ಗುಲಾಮರನ್ನು ಮತ್ತು ಅವರ ಮಾಲೀಕರನ್ನು ಒಂದೇ ತಕ್ಕಡಿಗೆ ಹಾಕುತ್ತೀರೇನು? ಅಥವಾ ಅಮೆರಿಕಾದ ಮೂಲನಿವಾಸಿಗಳು ಮತ್ತು ಅವರನ್ನು ನಿರ್ಮೂಲನ ಮಾಡಿದವರನ್ನು ಒಂದೇ ಸ್ವಭಾವದವರು ಎನ್ನೋಣವೇ? ಜನಾಂಗೀಯವಾದ ಮತ್ತು ಅದರ ವಿರುದ್ಧದ ನೆಲೆಗಳ ನಡುವೆ ''ಮಧ್ಯದ ಸ್ಥಾನ'' ಎಂಥದು? ಒಂದಲ್ಲ ಒಂದನ್ನು ಒಪ್ಪಬೇಕಲ್ಲವೇ? ಸ್ಪೃಶ್ಯಭಾವನೆ ಮತ್ತು ಅಸ್ಪೃಶ್ಯಭಾವನೆಗಳ ನಡುವೆ ''ಪವಿತ್ರವಾದ ನಿಸ್ವಾರ್ಥಿ'' ಮಧ್ಯದ ಸ್ಥಾನವನ್ನು ಎಲ್ಲಿಂದ ಹುಡುಕಿ ತರೋಣ?

ಮಾರ್ಕ್ಸ್‌ನ ಚಿಂತನೆ ಲಘುವಾದುದಲ್ಲ. ಅವನು ಪ್ರಭುತ್ವವನ್ನು ಆದರಿಸದಿದ್ದುದು ಅದು ಒಂದು ರೀತಿಯ ಮುಚ್ಚುಮರೆಯ ಅಧಿಕಾರ ಎಂಬ ಕಾರಣಕ್ಕೆ. ''ಸ್ತ್ರೀ-ಪುರುಷರು ತಮ್ಮ ಅಸ್ತಿತ್ವವನ್ನು ನಿರ್ಧರಿಸಿಕೊಳ್ಳಲು ಸ್ವತಃ ಸಮರ್ಥರಲ್ಲವಾದ್ದರಿಂದ ಆ ಹಕ್ಕನ್ನು ನಾನು ಕಿತ್ತುಕೊಂಡಿದ್ದೇನೆ'' ಎಂಬ ಹಮ್ಮು ಪ್ರಭುತ್ವದ್ದು. ''ಯೋಚನೆ ಬೇಡ, ನಿಮ್ಮ ಪರವಾಗಿ ನಾನು ನಿಮ್ಮ ಅಸ್ತಿತ್ವವನ್ನು ನಿರ್ಧರಿಸುತ್ತೇನೆ'' ಎಂದು ಪ್ರಭುತ್ವವು ಹೇಳಿದರೆ ಅದನ್ನು ಒಪ್ಪುವುದು ಹೇಗೆ ಮತ್ತು ಏಕೆ? ಅದಕ್ಕೆ ''ಪ್ರಜಾಪ್ರಭುತ್ವ'' ಎಂಬ ಸೋಗಿನ ಹೆಸರು ಕೊಟ್ಟುಬಿಟ್ಟರೆ ವಸ್ತುಸ್ಥಿತಿ ಬದಲಾಗಿಬಿಡುತ್ತದೆಯೆ? ಸ್ವತಃ ಮಾರ್ಕ್ಸ್ ಆರಂಭಕ್ಕೆ ''ಪುರೋಗಾಮಿ ಪ್ರಜಾಪ್ರಭುತ್ವವಾದಿ'' ಎಂದು ತನ್ನನ್ನು ತಾನು ಭಾವಿಸಿಕೊಂಡಿದ್ದ, ಕ್ರಮೇಣ ಅನುಭವದ ಮೂಸೆಯಲ್ಲಿ ಕ್ರಾಂತಿಕಾರಿಯಾಗಿ ಬದಲಾದ; ಏಕೆಂದರೆ ತಥಾಕಥಿತ ಪ್ರಜಾಪ್ರಭುತ್ವದಲ್ಲಿ ನಿಜವಾದ ಬದಲಾವಣೆಗೆ ಎಷ್ಟು ಸೀಮಿತತೆ ಉಂಟೆಂದು ಅವನಿಗೆ ಅರಿವಾಯಿತು. ಪ್ರಭುತ್ವದ ಘನ ಅಧಿಕಾರವನ್ನು ಅವನು ಪ್ರಶ್ನಿಸುವುದು ಪ್ರಜಾಪ್ರಭುತ್ವವಾದಿಯಾಗಿಯೇ ಎಂಬುದನ್ನು ಮರೆಯಬಾರದು. ಜನಪ್ರಿಯ ಸಾರ್ವಭೌಮತ್ವವು ಅವನ ಆಶಯ; ಆದ್ದರಿಂದ ಪಾರ್ಲಿಮೆಂಟ್ ವ್ಯವಸ್ಥೆಯ ಪ್ರಜಾಪ್ರಭುತ್ವದ ಮುಸುಕಿನಲ್ಲಿ ಅದು ಕಳೆದುಹೋಗುವುದು ಅವನಿಗೆ ಒಪ್ಪಿತವಲ್ಲ. ಅವನಾಗಲಿ, ಲೆನಿನ್ ಆಗಲಿ, ಪಾರ್ಲಿಮೆಂಟನ್ನು ಧಿಕ್ಕರಿಸಲಿಲ್ಲ. ಆದರೆ ಪಾರ್ಲಿಮೆಂಟಿಗೆ ಇಡಿಯಾಗಿ ಪ್ರಜಾಪ್ರಭುತ್ವವನ್ನು ಸಮರ್ಪಿಸಿಬಿಡುವುದು ಇಬ್ಬರಿಗೂ ಮಾನ್ಯವಲ್ಲ. ಪ್ರಜಾಪ್ರಭುತ್ವವು ಸ್ಥಳೀಯವಾಗಿರಬೇಕು. ಸರ್ವಜನರ ವ್ಯಾಪ್ತಿಯಲ್ಲಿರಬೇಕು. ನಾಗರಿಕ ಸಮಾಜದ ಪ್ರತಿಯೊಂದು ಘಟಕವನ್ನೂ ಆವರಿಸಿರಬೇಕು. ಆರ್ಥಿಕ ಮತ್ತು ರಾಜಕೀಯ ವಲಯಗಳಿಗೂ ಇದು ಅನ್ವಯಿಸುತ್ತದೆ. ಅಂದರೆ ಅದು ನಿಜವಾದ ಸ್ವಯಮಾಡಳಿತ, ಯಾವುದೋ ಪ್ರತಿಷ್ಠಿತ ರಾಜಕೀಯ ಬಣಕ್ಕೆ ವಹಿಸಲ್ಪಟ್ಟ ಆಡಳಿತವಲ್ಲ. ನಾಗರಿಕರು ಎಲ್ಲರೂ ಸೇರಿ ಸ್ವತಃ ಆಳ್ವಿಕೆ ನಡೆಸುವ ಪ್ರಭುತ್ವವು ಮಾರ್ಕ್ಸ್‌ಗೆ ಬೇಕು. ಒಂದು ಅಲ್ಪ ಸಂಖ್ಯಾತ ವರ್ಗವು ಬಹುಸಂಖ್ಯಾತ ವರ್ಗದ ಮೇಲೆ ಆಳ್ವಿಕೆ ನಡೆಸುವ ಪ್ರಭುತ್ವ ಅವನಿಗೆ ಬೇಡ. ಆದರೆ ಅವನ ಕಾಲದ ಮತ್ತು ನಮ್ಮ ಇಂದಿನ ಸನ್ನಿವೇಶವೇನು? ನಾಗರಿಕ ಸಮಾಜದಿಂದ ಪ್ರಭುತ್ವವು ದೂರಸಾಗಿ ಎಲ್ಲೋ ಮೇಲೇರಿ ನಿಂತಿದೆ. ಇದು ಸರಳವಾದ ವಿಷಯ: ಅಮೂರ್ತ ನೆಲೆಯಲ್ಲಿ ನಾಗರಿಕರೆಲ್ಲಾ



ಸಮಾನರು, ಆದರೆ ದಿನನಿತ್ಯದ ಸಾಮಾಜಿಕ ಅಸ್ತಿತ್ವವನ್ನು ಗಮನಿಸಿದರೆ ಅವರ ನಡುವೆ ಅಗಾಧ ಕಂದರಗಳಿವೆ. ಎಲ್ಲರೂ ಒಂದೇ ಪ್ರಭುತ್ವದಡಿ ಇದ್ದಾರೆಂಬುದು ಸಾಂತ್ವನ ನೀಡಬೇಕೆ ? ಸಾಮಾಜಿಕ ಅಸ್ತಿತ್ವದಲ್ಲಿ ಘರ್ಷಣೆಗಳಿವೆ. ಆದರೆ ಅಂಥವೇನೂ ಇಲ್ಲವೆಂಬಂತೆ ಪ್ರಭುತ್ವವು ನಟಿಸುತ್ತದೆ. ಪ್ರಭುತ್ವವು ಸಮಾಜದಿಂದ ಉತ್ಪನ್ನವಾಗಿದೆ. ಆದರೆ ಮೇಲಕ್ಕೇರಿ ಅಲ್ಲಿಂದ ಸಮಾಜಕ್ಕೆ ರೂಪ ಕೊಡಹೊರಟಿದೆ. ಸಮಾಜವು ಪ್ರಭುತ್ವದಿಂದ ಹೊಮ್ಮಿಲ್ಲ. ಬದಲಾಗಿ ಪ್ರಭುತ್ವವು ಸಮಾಜದ ಮೇಲಿನ ಪರಾವಲಂಬಿ ಜೀವಿಯಾಗಿಹೋಗಿದೆ. ಇದೆಂತಹ ತಲೆಕೆಳಗಿನ ವಿಚಿತ್ರ ! ಒಬ್ಬ ವಿಮರ್ಶಕ ಹೇಳಿದ : ''ಪ್ರಜಾಪ್ರಭುತ್ವ ಮತ್ತು ಬಂಡವಾಳಶಾಹಿ ಎರಡನ್ನೂ ತಲೆಕೆಳಗು ಮಾಡಿ ನಿಲ್ಲಿಸಲಾಗಿದೆ.'' ಅಂದರೆ, ರಾಜಕೀಯ ಸಾಂಸ್ಥಿಕ ಅಂಗಗಳು ಬಂಡವಾಳಶಾಹಿಯನ್ನು ನಿಯಂತ್ರಿಸುವ ಬದಲು ಬಂಡವಾಳಶಾಹಿಯು ರಾಜಕೀಯ ಸಾಂಸ್ಥಿಕ ಅಂಗಗಳನ್ನು ನಿಯಂತ್ರಿಸುತ್ತಿದೆ ! ಹಾಗೆಂದ ವಿಮರ್ಶಕ ಬೇರಾರೂ ಅಲ್ಲ, ಅಮೆರಿಕಾದ ಕಾರ್ಮಿಕ ಸಚಿವ ರಾಬರ್ಟ್ ರೈಕ್. ಅವನು ಖಂಡಿತ ಮಾರ್ಕ್ಸ್‌ವಾದಿ ಅಲ್ಲವೆಂದು ಬೇರೆ ಹೇಳಬೇಕೆ ! ಮಾರ್ಕ್ಸ್‌ನ ಆಶಯ ಪ್ರಭುತ್ವ ಮತ್ತು ಸಮಾಜದ ನಡುವಣ ಕಂದಕವನ್ನು ಮುಚ್ಚುವುದು. ರಾಜಕೀಯ ಮತ್ತು ದೈನಂದಿನ ಜನಜೀವನದ ನಡುವಿನ ಕಂದಕವನ್ನು ಮುಚ್ಚಬೇಕು. ಇವುಗಳಲ್ಲಿ ಕ್ರಮವಾಗಿ ಮೊದಲನೆಯದು ಎರಡನೆಯದರಲ್ಲಿ ಸೇರಿಹೋಗಬೇಕು. ಅದುವೇ ಪ್ರಜಾಪ್ರಭುತ್ವ. ಪ್ರಭುತ್ವವು ಸ್ತ್ರೀ -ಪುರುಷರಿಂದ ಕಸಿದುಕೊಂಡಿರುವ ಅವರ ದಿನನಿತ್ಯದ ಅಧಿಕಾರಗಳು ಅವರಿಗೆ ಮರಳಬೇಕು. ಆ ಅರ್ಥದಲ್ಲಿ ಸಮಾಜವಾದವು ಪ್ರಜಾಪ್ರಭುತ್ವವನ್ನು ಪೂರ್ಣತೆಯತ್ತ ಕೊಂಡೊಯ್ಯುತ್ತದೆ; ನಿಷೇಧ ಅಥವಾ ಅವನತಿಯತ್ತ ಅಲ್ಲ. ಪ್ರಜಾಪ್ರಭುತ್ವದ ಸಮರ್ಥಕರು ಇದಕ್ಕೇಕೆ ಆಕ್ಷೇಪವೆತ್ತಬೇಕು ?

ಮಾರ್ಕ್ಸ್‌ವಾದಿಗಳು ಸಾಮಾನ್ಯವಾಗಿ ಇಂದು ಹೇಳುವುದು, ನಿಜವಾದ ಅಧಿಕಾರ ಇರುವುದು ಬ್ಯಾಂಕುಗಳ, ಕಾರ್ಪೊರೇಟ್ ಸಂಸ್ಥೆಗಳ ಮತ್ತು ಹಣಕಾಸು ವ್ಯವಹಾರ ನಡೆಸುವ ಇತರ ಸಂಸ್ಥೆಗಳ ಕೈಯಲ್ಲಿ ಎಂದು. ಅವುಗಳ ನಿರ್ದೇಶಕರನ್ನು ಯಾರೂ ನೇರವಾಗಿ ಅಧಿಕಾರದ ಸ್ಥಾನಕ್ಕೆ ಚುನಾಯಿಸಿಲ್ಲ, ಆದರೆ ಅವರು ಕೋಟಿಗಟ್ಟಲೆ ಜನರ ಜೀವನವನ್ನು ನಿಯಂತ್ರಿಸುತ್ತಾರೆ. ಅವರದೇ ವಿಶ್ವದ ಯಾಜಮಾನ್ಯ ಮತ್ತು ರಾಜಕೀಯ ಅಧಿಕಾರವು ಆ ಯಜಮಾನರ ಅಡಿಯಾಳು. ಸರ್ಕಾರವು ಆಗಿಂದಾಗ್ಗೆ ಅವರಿಗೆ ಛೀಮಾರಿ ಹಾಕುತ್ತದೆ, ಇಲ್ಲವೇ ಹಾಕುವಂತೆ ನಟಿಸುತ್ತದೆ; ಆದರೆ ಅವರ ನಿರ್ಗಮನಕ್ಕೆಂದೂ ಕುಮ್ಮಕ್ಕು ಕೊಡುವುದಿಲ್ಲ. ಹಾಗೇನಾದರೂ ಮಾಡಹೋದರೆ ಸರ್ಕಾರವು ಉರುಳಿ ಸಚಿವರು ಜೈಲು ಸೇರಬೇಕಾಗುತ್ತದೆ ! ಅವರ ಅಂಗರಕ್ಷಕರೇ ಅವರನ್ನು ಎಳೆದೊಯ್ದು ಜೈಲಿಗೆ ದಬ್ಬುತ್ತಾರೆ. ಹೆಚ್ಚೆಂದರೆ ಸರ್ಕಾರವು ಮಾನವನಿಗುಂಟಾಗುವ ಹಾನಿಯ ಕೊಳಕನ್ನು ಅಲ್ಲಿ-ಇಲ್ಲಿ ಸ್ವಲ್ಪ ಗುಡಿಸಿ ಸಾರಿಸಬಹುದು. ಅದು ಮಾನವೀಯತೆಯ ಸೂಚನೆಗಿಂತಲೂ ತನ್ನ ಅಸ್ತಿತ್ವದ ರಕ್ಷಣೆಗೆ ಕೈಗೊಂಡ ಕ್ರಮವೂ ಆಗಬಹುದು. ಅದನ್ನೇ ಸಾಮಾಜಿಕ-ಪ್ರಜಾಪ್ರಭುತ್ವ ಎನ್ನುತ್ತಾರೆ. ರಾಜಕೀಯವು ಅರ್ಥಶಾಸ್ತ್ರದ ಕಾವಲುಗಾರ ಎಂದಂತಾಯಿತು. ಅಂತಹ ಸಂದರ್ಭದಲ್ಲಿ ಪ್ರಭುತ್ವವು ಸಮಾಜವಾದಿ ಉದ್ದೇಶಗಳನ್ನೇನಾದರೂ ಪೂರೈಸಬಲ್ಲುದೇ ? ತನ್ನ ''ಫ್ರಾನ್ಸಿನಲ್ಲಿ ಅಂತರ್ಯುದ್ಧ'' ಎಂಬ ಗ್ರಂಥದಲ್ಲಿ ಮಾರ್ಕ್ಸ್ ಬರೆದಿದ್ದಿದು : ದುಡಿಯುವ ವರ್ಗವು ಸಿದ್ಧ ಮಾದರಿಯ ಪ್ರಭುತ್ವವನ್ನು ತನ್ನ ಆಕಾಂಕ್ಷೆಗಳ ಪೂರೈಕೆಗೆ ಬಳಸಿಕೊಳ್ಳಲಾಗುವುದಿಲ್ಲ. ಏಕೆಂದರೆ ಆ ಮಾದರಿಯಲ್ಲಿ ಯಥಾಸ್ಥಿತಿಯ ಪರವಾದ ಪಕ್ಷಪಾತವು ಅಂತರ್ಗತವಾಗಿದೆ. ಅದಕ್ಕೆ ರಕ್ತಕ್ಷಯ ರೋಗ ಹತ್ತಿದೆ. ಪ್ರಜಾಪ್ರಭುತ್ವದ ಕಡುಬಡತನ ಅದನ್ನು ಕಾಡುತ್ತಿದೆ; ಅದರ ಪರಿಣಾಮವೇ ಪ್ರಜಾಪ್ರಭುತ್ವ ವಿರೋಧಿ ಸಂದರ್ಭ. ಅದನ್ನೇ ಹಾಸ್ಯಾಸ್ಪದ ಎಂಬಂತೆ ಪ್ರಜಾಪ್ರಭುತ್ವವೆಂದು ಬಣ್ಣಿಸುತ್ತಾರೆ.




ಹಾಗಾದರೆ ಮಾರ್ಕ್ಸ್‌ಗೆ ನೈಜ ಪ್ರಜಾಪ್ರಭುತ್ವ ಮಾದರಿ ಯಾವುದಾದರೂ ಉಂಟೆ ? ಇದೆ, ಅದು ೧೮೭೧ರಲ್ಲಿ ಅಸ್ತಿತ್ವಕ್ಕೆ ಬಂದಿದ್ದ ಪ್ಯಾರಿಸ್ ಕಮ್ಯೂನ್. ಅದು ಜನಪ್ರಿಯ ಸ್ವಯಮಾಡಳಿತ ಸರ್ಕಾರದ ಮಾದರಿ. ಕೆಲವು ತಿಂಗಳುಗಳ ಕಾಲ ಪ್ರಕ್ಷುಬ್ಧ ವಾತಾವರಣದಲ್ಲಿ ಪ್ಯಾರಿಸ್ಸಿನ ದುಡಿಯುವ ಜನ ತಮ್ಮ ಭವಿಷ್ಯವನ್ನು ತಮ್ಮ ಕೈಯಲ್ಲಿ ಹಿಡಿದಿದ್ದರು. ''ಫ್ರಾನ್ಸಿನಲ್ಲಿ ಅಂತರ್ಯುದ್ಧ'' ಎಂಬ ಗ್ರಂಥದಲ್ಲಿ ಮಾರ್ಕ್ಸ್ ಅದರ ರಚನೆ ಮತ್ತು ಕಾರ್ಯವೈಶಿಷ್ಟ್ಯವನ್ನು ವಿವರಿಸಿದ್ದಾನೆ. ಕಮ್ಯೂನಿನಲ್ಲಿ ಸ್ಥಳೀಯ ಸದಸ್ಯರಿದ್ದರು; ಬಹುತೇಕ ದುಡಿಯುವ ಮಂದಿ. ಅವರು ಜನರಿಂದ ಚುನಾಯಿತರಾಗಿದ್ದರು ಮತ್ತು ಅವರನ್ನು ಹಿಂದಕ್ಕೆ ಕರೆಸಿಕೊಳ್ಳುವ ಅಧಿಕಾರ ಜನರಿಗಿತ್ತು. ದುಡಿಮೆಗಾರರಾಗಿ ಪಡೆಯುತ್ತಿದ್ದ ವೇತನವನ್ನಷ್ಟೇ ಪಡೆದು ಅವರು ಸಾರ್ವಜನಿಕ ಕೆಲಸ ಮಾಡಬೇಕಿತ್ತು. ಪ್ರಭುತ್ವದ ಸೈನ್ಯವನ್ನು ರದ್ದುಗೊಳಿಸಲಾಗಿತ್ತು. ಪೊಲೀಸರು ಕಮ್ಯೂನಿನ ಆದೇಶ ಪಾಲಿಸಲು ಜವಾಬ್ದಾರರಾಗಿದ್ದರು. ಹಿಂದಿನ ಪ್ರಭುತ್ವದ ಅಧಿಕಾರವನ್ನು ಈಗ ಕಮ್ಯುನಾರ್ಡರು ಪಡೆದಿದ್ದರು. ಪಾದ್ರಿಗಳಿಗೆ (ಮತಧರ್ಮ ಪ್ರಚಾರಕರಿಗೆ) ಸಾರ್ವಜನಿಕ ಜೀವನಕ್ಕೆ ಪ್ರವೇಶವಿರಲಿಲ್ಲ. ಶಿಕ್ಷಣ ಸಂಸ್ಥೆಗಳು ಜನಸಾಮಾನ್ಯರಿಗೆ ತೆರೆದುಕೊಂಡವು ಮತ್ತು ಅವು ಚರ್ಚ್ ಮತ್ತು ಪ್ರಭುತ್ವದ ಹಿಡಿತದಿಂದ ಮುಕ್ತವಾಗಿದ್ದವು. ಮ್ಯಾಜಿಸ್ಟ್ರೇಟರು, ನ್ಯಾಯಾಧೀಶರು, ಸಾರ್ವಜನಿಕ ಸೇವೆಗಿರುವ ನೌಕರರು, ಎಲ್ಲಾ ಚುನಾಯಿತರು. ಅವರು ಜನರಿಗೆ ಉತ್ತರದಾಯಿಗಳು ಮತ್ತು ಜನ ಅವರನ್ನು ಹಿಂದಕ್ಕೆ ಕರೆಸಿಕೊಳ್ಳಬಹುದಿತ್ತು. ಸಹಕಾರಿ ಉತ್ಪಾದನೆಯನ್ನು ಜನರಿಗೆ ತಂದು ಖಾಸಗಿ ಆಸ್ತಿಯನ್ನು ರದ್ದುಗೊಳಿಸುವ ಉದ್ದೇಶವನ್ನು ಸಹ ಕಮ್ಯೂನ್ ಹೊಂದಿದ್ದಿತ್ತು. ಮಾರ್ಕ್ಸ್ ಹೇಳುವಂತೆ ''ಮೂರು ಅಥವಾ ಆರು ವರ್ಷಗಳಿಗೊಮ್ಮೆ ಆಳುವ ವರ್ಗದ ಯಾವ ವ್ಯಕ್ತಿಯು ಜನರನ್ನು ಪ್ರತಿನಿಧಿಸದ ಪ್ರತಿನಿಧಿಯಾಗಿರಬೇಕೆಂದು ಚುನಾಯಿಸುವ ಬದಲು ಸಾರ್ವತ್ರಿಕ ಚುನಾವಣೆಯು ಕಮ್ಯೂನಿಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಸಾಧನವಾಯಿತು. ಅದು ಮೂಲತಃ ದುಡಿಯುವ ಜನರ ಸರ್ಕಾರ... ಆ ರಾಜಕೀಯ ಅಂಗದ ಮುಖಾಂತರ ದುಡಿಮೆಗಾರರ ಆರ್ಥಿಕ ವಿಮೋಚನೆಗೆ ಒಂದು ಯುಕ್ತ ಸಾಧನವನ್ನು ಕಡೆಗೂ ಕಂಡುಕೊಳ್ಳಲು ಸಾಧ್ಯವಾಯಿತು.'' ಪ್ಯಾರಿಸ್ ಕಮ್ಯೂನ್ ಬಾಳಿದ್ದು ಅಲ್ಪಕಾಲ ಮಾತ್ರ. ಅದು ನಿರ್ಮಾಣಗೊಂಡ ರೀತಿಯ ಬಗ್ಗೆ ಮಾರ್ಕ್ಸ್‌ಗೆ ತೃಪ್ತಿ ಇರಲಿಲ್ಲ. ಕೆಲವು ಕಮ್ಯುನಾರ್ಡ್‌ಗಳು ಸಮಾಜವಾದಿಗಳೇ ಆಗಿರಲಿಲ್ಲ. ಆದರೆ ಅದರಲ್ಲಿ ಸಮಾಜವಾದಿ ರಾಜಕೀಯಕ್ಕೆ ತಕ್ಕುದಾದ ಹಲವು ಅಂಶಗಳಿದ್ದವು. ಅದರ ಕಾರ್ಯ ನಿರ್ವಹಣೆ ದುಡಿಯುವ ವರ್ಗದ ಅನುಭವದಿಂದ ಬಂದಿದ್ದು, ಯಾವುದೋ ಆಡಳಿತ ಸಂಸ್ಥೆಯು ಹಾಕಿಕೊಟ್ಟ ನಿಯಮಗಳನ್ನು ಆಧರಿಸಿದ್ದಲ್ಲ. ಕೆಲಕಾಲವಾದರೂ ಸರಿಯೆ, ಅದು ಹೃದಯ ತುಂಬಿಬರುವ ಸಂದರ್ಭ ವಾಗಿತ್ತು. ಪ್ರಭುತ್ವವು ಎಲ್ಲೋ ಮೇಲೆ ನಿಂತು ಪರಕೀಯವಾಗಿ ಆಳುವ ಘಟಕವಾಗಿರಲಿಲ್ಲ. ಅದು ನಿಜಾರ್ಥದಲ್ಲಿ ಜನಪ್ರಿಯ ಸ್ವಯಮಾಡಳಿತವುಳ್ಳ ಸರ್ಕಾರವಾಗಿತ್ತು.

ಪ್ಯಾರಿಸಿನಲ್ಲಿ ಆ ಕೆಲವು ತಿಂಗಳ ಕಾಲ ಅಸ್ತಿತ್ವದಲ್ಲಿ ಇದ್ದುದು ''ದುಡಿಯುವ ವರ್ಗದ ಸರ್ವಾಧಿಕಾರ'' ಎಂದು ಮಾರ್ಕ್ಸ್ ಬಣ್ಣಿಸಿದ್ದಾನೆ. ಆ ಪದಗುಚ್ಛವನ್ನು ಕೇಳಿಯೇ ಎಷ್ಟೋ ಜನ ಸಂಯಮ ಕಳೆದುಕೊಂಡಿರುವುದುಂಟು. ಅದರ ಅರ್ಥ ''ಜನಪ್ರಿಯ ಪ್ರಜಾಪ್ರಭುತ್ವ'' ಎಂದಷ್ಟೆ. ಅದು ಸಮಾಜದ ಬಹುಸಂಖ್ಯಾತರ ಆಳ್ವಿಕೆ. ''ಸರ್ವಾಧಿಕಾರ'' ಎಂಬ ಪದದಿಂದ ಭೀತಿಗೊಳ್ಳಬೇಕಾಗಿಲ್ಲ. ಅದರ ಇಂದಿನ ಅರ್ಥವ್ಯಾಪ್ತಿಯು ಮಾರ್ಕ್ಸ್‌ನ ಕಾಲದಲ್ಲಿದ್ದುದಕ್ಕಿಂತ ಬೇರೆಯಾಗಿದೆ. ಆಗ್ಗೆ ಅದರರ್ಥ ''ರಾಜಕೀಯ ಸಂವಿಧಾನದ ಕಾನೂನೇತರ ನಿಯಮ'' ಎಂದು. ಯಾವಾಗಲೂ ರಾಜಕೀಯವಾಗಿ ಮಾರ್ಕ್ಸ್‌ನೊಡನೆ ಗುದ್ದಾಡುತ್ತಿದ್ದ ಆಗಸ್ಟ್ ಬ್ಲಾಂಕಿ ''ದುಡಿಯುವ ವರ್ಗದ ಸರ್ವಾಧಿಕಾರ'' ಎಂಬುದನ್ನು ಮೊದಲು ಬಳಸಿದ್ದು. ೧೮೧೫ರಿಂದ ೧೮೮೦ರವರೆಗೆ ಫ್ರಾನ್ಸಿನಲ್ಲಿ ಬಂದ ಎಲ್ಲ ಸರ್ಕಾರಗಳೂ ಅವನನ್ನು ಕಾರಾಗೃಹಕ್ಕೆ ದೂಡಿದ್ದವೆಂಬುದು ಅವನ ಹೋರಾಟದ ಛಲದ ಸೂಚಕ. ''ಜನಸಾಮಾನ್ಯರ ಪರವಾದ ಆಳ್ವಿಕೆ'' ಎಂಬುದು ಅವನ ಇಂಗಿತ. ಆದರೆ ಮಾರ್ಕ್ಸ್ ಅದನ್ನು ''ಜನಸಾಮಾನ್ಯರಿಂದ ಆಳ್ವಿಕೆ'' ಎಂಬರ್ಥದಲ್ಲಿ ಬಳಸಿದ. ಬ್ಲಾಂಕಿಯು ಪ್ಯಾರಿಸ್ ಕಮ್ಯೂನಿನ ಅಧ್ಯಕ್ಷನಾಗಿ ಚುನಾಯಿತನಾದ, ಆದರೆ ಹೆಸರಿಗೆ ಮಾತ್ರ ಅಧ್ಯಕ್ಷ, ಏಕೆಂದರೆ, ಅವನು ಆಗ್ಗೆ ಕಾರಾಗೃಹದಲ್ಲಿದ್ದ.

ಕೆಲವೇಳೆ ಮಾರ್ಕ್ಸ್ ಪ್ರಭುತ್ವವು ಆಳುವ ವರ್ಗದ ನೇರ ಸಾಧನವಷ್ಟೇ ಎಂಬರ್ಥ ಬರುವಂತೆ ಬರೆಯುತ್ತಾನೆ. ಆದರೆ ಅವನ ಚಾರಿತ್ರಿಕ ಬರಹಗಳಲ್ಲಿ ಅವನು ಹೆಚ್ಚು

ಸೂಕ್ಷ್ಮವಾದ ಅರ್ಥಗಳನ್ನು ಸೂಚಿಸುತ್ತಾನೆ. ರಾಜಕೀಯ ಪ್ರಭುತ್ವದ ಜವಾಬ್ದಾರಿಯು ಆಳುವ ವರ್ಗದ ತಕ್ಷಣದ ಹಿತಾಸಕ್ತಿಗಳನ್ನು ಕಾಪಾಡುವುದಷ್ಟೇ ಅಲ್ಲ, ಅದು ಸಾಮಾಜಿಕವಾಗಿ ಸುಬದ್ಧತೆಯನ್ನು ಉಳಿಸುವ ಕೆಲಸವನ್ನು ಮಾಡಬೇಕು. ಈ ಎರಡು ಉದ್ದೇಶಗಳು ಅಂತಿಮವಾಗಿ ಪರಸ್ಪರ ವಿರೋಧವಾಗಿರಬೇಕಿಲ್ಲ, ಆದರೆ ಅಲ್ಪಕಾಲಿಕವಾಗಿ ಅಥವಾ ಮಧ್ಯಕಾಲಿಕವಾಗಿ ಅವೆರಡರ ನಡುವೆ ತೀವ್ರ ಸಂಘರ್ಷವಿರಲು ಸಾಧ್ಯ. ಊಳಿಗಮಾನ್ಯ ವ್ಯವಸ್ಥೆಯಡಿಯ ಪ್ರಭುತ್ವಕ್ಕೆ ವರ್ಗ ಸಂಬಂಧಗಳ ವಿಚಾರದಲ್ಲಿ ಅಷ್ಟೇನೂ ಸ್ವಾತಂತ್ರ್ಯವಿರುವುದಿಲ್ಲ; ಆದರೆ ಬಂಡವಾಳಶಾಹಿಯಡಿಯ ಪ್ರಭುತ್ವಕ್ಕೆ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯವುಂಟು. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಯಜಮಾನನು ರಾಜಕೀಯ ಮತ್ತು ಆರ್ಥಿಕ ಯಾಜಮಾನ್ಯಗಳೆರಡನ್ನೂ ಹೊಂದಿರುತ್ತಾನೆ. ಆದರೆ ಬಂಡವಾಳಶಾಹಿಯಲ್ಲಿ ಅವೆರಡೂ ವಿಭಜಿತವಾಗಿರುತ್ತದೆ. ನಮ್ಮ ಲೋಕಸಭಾ ಸದಸ್ಯನು ನಮ್ಮ ಧಣಿಯಲ್ಲ (ಧಣಿಗಳು ಪಾರ್ಲಿಮೆಂಟ್ ಸದಸ್ಯರಾಗಕೂಡದೆಂದೇನೂ ಇಲ್ಲ, ಅಂಬಾನಿ ಬೇಕಾದರೆ ಪಾರ್ಲಿಮೆಂಟ್ ಪ್ರವೇಶಿಸಬಹುದು) ಆದರೆ ಸಾಮಾನ್ಯವಾಗಿ ಬಂಡವಳಿಗನು ನೇರವಾಗಿ ಆಳ್ವಿಕೆ ಮಾಡುವುದಿಲ್ಲವಾದ್ದರಿಂದ ಬಂಡವಾಳಶಾಹಿ ಪ್ರಭುತ್ವವು ವರ್ಗ ಸಂಬಂಧಗಳನ್ನು ಮೀರಿ ನಿಲ್ಲುವಂಥದು. ಅದು ಕೇವಲ ತೋರಿಕೆಯಲ್ಲ, ಪ್ರಭುತ್ವವು ಭೌತಿಕ ಹಿತಾಸಕ್ತಿಗಳಿಂದ ಎಷ್ಟು ಮುಕ್ತವಾಗಿದೆ ಎಂಬುದು ಬದಲಾಗುತ್ತಿರುವ ಚಾರಿತ್ರಿಕ ಸನ್ನಿವೇಶಗಳನ್ನಾಧರಿಸಿರುತ್ತದೆ. ''ಉತ್ಪಾದನೆಯ ಏಷ್ಯದ ಮಾದರಿ'' ಎಂಬುದೊಂದನ್ನು ಮಾರ್ಕ್ಸ್ ಗುರುತಿಸಿದ್ದ, ಅದರಲ್ಲಿ ನೀರಾವರಿಗೆ ವಿಶೇಷ ಗಮನ ನೀಡಲಾಗುತ್ತದೆ. ನೀರಾವರಿ ವ್ಯವಸ್ಥೆಯನ್ನು ಪ್ರಭುತ್ವವು ಮಾತ್ರವೇ ನಿರ್ಮಿಸಿಕೊಡುತ್ತದೆಯಾದ್ದರಿಂದ ಆ ಮಾದರಿಯಲ್ಲಿ ಪ್ರಭುತ್ವವೇ ಪ್ರಮುಖ ಸಾಮಾಜಿಕ ಶಕ್ತಿ ಎನಿಸಿಕೊಳ್ಳುತ್ತದೆ. ಮಾರ್ಕ್ಸ್ ವಾದವನ್ನು ಅಪಾರ್ಥ ಮಾಡಿಕೊಳ್ಳುವ ಕೆಲವರು ಪ್ರಭುತ್ವವೂ ಒಂದೇ, ಆರ್ಥಿಕವಾಗಿ ಸಾರ್ವಭೌಮತ್ವ ಹೊಂದಿರುವ ವರ್ಗವೂ ಒಂದೇ, ಎಂದು ಹೇಳಿಬಿಡುತ್ತಾರೆ. ಕೆಲ ಸಂದರ್ಭಗಳಲ್ಲಿ ಹಾಗಾಗಿರುತ್ತದೆಂಬುದು ನಿಜ, ಆಸ್ತಿವಂತರೇ ಪ್ರಭುತ್ವ ಚಲಾಯಿಸುತ್ತಾರೆ. ಅಮೆರಿಕಾದ ಜಾರ್ಜ್ ಬುಷ್ ಒಂದು ಉದಾಹರಣೆ. ಆತ ಮತ್ತು ಆತನ ತೈಲ ಕಂಪನಿ ವೃಂದ ನೇರವಾಗಿ ಆಳ್ವಿಕೆ ನಡೆಸಿತು. ಮಾರ್ಕ್ಸ್‌ವಾದದ ಅಪಾರ್ಥವನ್ನು ನಿಜವಾಗಿಸಿದ ಆತ! ಆದರೆ ಮನಮೋಹನ ಸಿಂಗ್ ಆ ರೀತಿಯ ಆಸ್ತಿವಂತನಲ್ಲ; ಆತ ಆಸ್ತಿವಂತರ ಪ್ರತಿನಿಧಿ ಮತ್ತು ಮುಖವಾಡ. ಬಂಡವಾಳಶಾಹಿಯಡಿ ಪ್ರಭುತ್ವವು ಸಂಕೀರ್ಣವಾದ್ದು, ಮಾನವ ಅಸ್ತಿತ್ವದಲ್ಲಿ ಸಂಕೀರ್ಣತೆಗಳಿಗೆ ಕೊರತೆಯೆ! ಬಂಡವಾಳಶಾಹಿಯಡಿ ಒಂದು ವರ್ಗವು ಬೇರೊಂದು ವರ್ಗದ ಪರವಾಗಿ ಆಳ್ವಿಕೆ ನಡೆಸಬಹುದು. ಅದಕ್ಕೆ ಮಾರ್ಕ್ಸ್ ಕೊಡುವ ಉದಾಹರಣೆ ೧೯ನೆಯ ಶತಮಾನದ ಇಂಗ್ಲೆಂಡಿನದು. ಆಗ್ಗೆ ಉದಾರವಾದಿ ಬಂಡವಳಿಗರು ಆಳುವ ರಾಜಕೀಯ ವರ್ಗ; ಆದರೆ ಆಗಿನ ಪ್ರಮುಖ ಆರ್ಥಿಕ ಬಣವು ಔದ್ಯಮಿಕ ಮಧ್ಯಮ ವರ್ಗವಾಗಿತ್ತು. ರಾಜಕೀಯ ವರ್ಗವು ಆರ್ಥಿಕ ವರ್ಗದ ಪ್ರತಿನಿಧಿಯಂತೆ ಕರ್ತವ್ಯ ನಿರ್ವಹಿಸುತ್ತಿತ್ತು. ಫ್ರಾನ್ಸಿನ ಲೂಯಿ ಬೋನಪಾರ್ಟ್ ಸಣ್ಣ ಹಿಡುವಳಿಯುಳ್ಳ ರೈತರ ಪ್ರತಿನಿಧಿ (ನಮ್ಮ ಚರಣ ಸಿಂಗ್, ದೇವೇಗೌಡ, ಅವರಂತೆ!), ಆದರೆ ಅವನು ಸಂರಕ್ಷಿಸುತ್ತಿದ್ದುದು ಬ್ಯಾಂಕರುಗಳ ಬಂಡವಾಳಶಾಹಿಯನ್ನು. ಅಥವಾ ಹಿಟ್ಲರನ ನಾಜಿ ಪಕ್ಷವನ್ನು ನೋಡಿ: ಅದು 'ರಾಷ್ಟ್ರೀಯ ಸಮಾಜವಾದಿ' ಪಕ್ಷ, ಆದರೆ ಅದರ ಬೆನ್ನೆಲುಬು ಉನ್ನತಮಟ್ಟದ ಬಂಡವಾಳಶಾಹಿ. ಸಿದ್ಧಾಂತವು ಕೆಳ-ಮಧ್ಯಮ ವರ್ಗದ ಪರವಾದ್ದು (ಇಂದಿನ ಮನಮೋಹನ ಸಿಂಗ್ ಕಾಂಗ್ರೆಸ್ ಇದ್ದಂತೆ), ಆದರೆ ಆಳ್ವಿಕೆ ಉಚ್ಚ ಬಂಡವಳಿಗ ವರ್ಗದ ಪರವಾದ್ದು (ಅದಕ್ಕೂ ಮನಮೋಹನ ಸಿಂಗ್ ಇಂದಿನ ಮಾದರಿ). ಇದರಲ್ಲಿ ಅನುಕೂಲ ಮತ್ತು ಸ್ವಾರಸ್ಯವೇನು ಗೊತ್ತೇ? ಕೆಳ-ಮಧ್ಯಮ ವರ್ಗವನ್ನು ತುಷ್ಟೀಕರಿಸಲು ಹಿಟ್ಲರ್ ಆಗಾಗ್ಗೆ ಉನ್ನತ ವರ್ಗದ ಪರಾವಲಂಬಿಗಳನ್ನು ಹಿಗ್ಗಾಮುಗ್ಗ ನಿಂದಿಸುತ್ತಿದ್ದ. ಅರ್ಥ ಸಚಿವ ಚಿದಂಬರಂ 'ಅತಿ ಶ್ರೀಮಂತ'ರೆಂದು ೪೨,೮೦೦ ಮಂದಿಯನ್ನು ತಮ್ಮ ಬಜೆಟ್‌ನಲ್ಲಿ ಗುರುತಿಸಿದ್ದಾರೆ. ಅವರೆಲ್ಲಾ ಮಾತನಾಡುವುದು ನೋಡಿದರೆ ಅತಿಸಾಮಾನ್ಯ ಜನಗಳ ಬಗ್ಗೆ ಅವರಿಗೆಲ್ಲಾ ಅದೆಷ್ಟು ಅಗಾಧವಾದ ಕಾಳಜಿ ಎನಿಸಿಬಿಡಬಹುದು; ವಿಶೇಷತಃ ರಾಜಕೀಯವಾಗಿ ಪ್ರಬುದ್ಧರಲ್ಲದವರಿಗೆ ಎನ್ನಿ. ಹಿಟ್ಲರನ ನಾಜಿ ಆಳ್ವಿಕೆ ಮತ್ತು ನಮ್ಮ ಜಾಗತೀಕರಣ - ನಿರ್ಧಾರಿತ ಉದಾರವಾದಿ ಬಂಡವಾಳಶಾಹಿಯು ತೀವ್ರಗಾಮಿ ದೃಷ್ಟಿಯವೇ; ಆದರೆ ಅವಕ್ಕೆ ಉದಾರವಾದಿ ಮಧ್ಯಮ ವರ್ಗದ ನಾಗರಿಕತೆ ರುಚಿಸುವುದಿಲ್ಲ, ಅಷ್ಟೇ. ಅಂದರೆ, ಅವು ಬಲಪಂಥೀಯ ತೀವ್ರಗಾಮಿತನ, ಎಂದರ್ಥ.

# ನೆಲದ ಕರುಣೆಯ ಹಕ್ಕಿ



**ಅಂ**ದು ಆದಿಮ ಕವಿ ಕೋಗಿಲೆ
ಮಾನಿಷಾದವೆಂದ ಶೋಕ-ಶ್ಲೋಕ
ರಾಮಾಯಣಕೆ ನಾಂದಿಯಾಗಿ

ಆ ಸುಯ್ಲು ಕಾಲ ಸಪ್ಪಳದಿ
ಜೀವ ನದಿಯಲಿ ತೇಲಿ
ಬರುತಿದೆ ಸುರುಳಿ ಸುತ್ತಿ
ಇದನೆ ಕನ್ನಡಿಸುತಿದೆ
ಬೇಡ ಕೊಲೆ ಬೇಡವೆಂದು
ನೆಲದ ಕರುಣೆಯ ಹಕ್ಕಿ
ನಮ್ಮ ಮಡಿವಾಳ

ಅತ್ತ ಕಪ್ಪತ ಗುಡ್ಡದ ಅಪ್ಪನೆಟ್ಟಾಲಕ್ಕೆ
ಜೋತು ಬಿದ್ದಿರುವ ತಲೆಕಿಂದ್ಲು
ಬಾವಲಿ ಹಕ್ಕಿ ಕೂಗಿ ಹೇಳುತಿದೆ
ಅಲ್ಲಮನ ಸೊಲ್ಲು:

ಒಂದನ್ನೊಂದು ಕೊಂದು ತಿಂಬುದೆ
ಜೀವಧರ್ಮ

ಇದಕೆ ಹೊರತಾದ ಸವಣನ
ನಾನಾರನೂ ಕಾಣೆನೆಂದು
ಆದರೂ ರಾಯಬಾಗದ ನಮ್ಮ
ಕಲಿವೀರಹಕ್ಕಿ
ಕವಿದ ಸೀಮೆ ಜಾಲಿಯ ಸವರಿ
ದಾರಿ ತಪ್ಪಿ ದಾರಿ ಹುಡುಕುತ್ತ

ಈ ನೆಲದ ನೆತ್ತರ ಕಲೆಯ ಹೇಗೆ
ತೊಳೆದು ಮಡಿಯ ಮಾಡಲಿಯೆಂದು
ಉಬ್ಬೆ ಬಾನಿಯಲಿ ಕುದ್ದು ಬೆಂದು
ಕತ್ತಾಲೆ ಬೆಳದಿಂಗಳ ಪಯಣ
ಹೊರಟಿದೆ
ಉಳವಿ ಎಲ್ಲಿ?

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಬಿಇಎಸ್‌ಇಸಿ ರಸ್ತೆ, ನಾಗರಭಾವಿ
ಬೆಂಗಳೂರು - ೫೬೦೦೭೨

ಕೆಲವು ಉದಾರವಾದಿಗಳಿರುತ್ತಾರೆ. ಅವರಿಗೆ ಅಧಿಕಾರವೆಂದರೆ ಕಸಿವಿಸಿ. ಮಾರ್ಕ್ಸ್‌ಗೆ ಹಾಗೇನೂ ಇಲ್ಲ. ಅಧಿಕಾರಹೀನರ ಹಿತಾಸಕ್ತಿಗಾಗಿ ಹೊರಟಾಗ ಎಲ್ಲ ಅಧಿಕಾರವೂ ಅಸಹ್ಯ ಎಂದುಬಿಟ್ಟರೆ ಅವರಿಗೆ ಸಾಂತ್ವನ ನೀಡುವುದು ಹೇಗೆ ? ಹಾಗೆ ಹೇಳಿದರೆ ಅಧಿಕಾರ ಸ್ಥರಿಗೇನೋ ಭಾರಿ ಖುಷಿ, ಅಷ್ಟೆ. ''ಅಧಿಕಾರ'' ಎಂದೊಡನೆ ಅದೇನೋ ಹೇಯವಾದ್ದು ಎನ್ನುವವರು ಧನ್ಯರೇ ಇರಬೇಕು ! ಅರ್ಥಮಾಡಿಕೊಳ್ಳ ಬೇಕಾದ ವಿಷಯವೇನೆಂದರೆ ಅಧಿಕಾರವೇ ಬೇರೆ, ನಿರಂಕುಶ ಆಡಳಿತವೇ ಬೇರೆ, ಎಂಬುದು. ''ದಲಿತರು ಬಂದರು ದಾರಿ ಬಿಡಿ'' ಎಂಬ ಘೋಷಣೆಯು ''ಅಧಿಕಾರಕ್ಕೆ ಧಿಕ್ಕಾರ'' ಎನ್ನುವುದಕ್ಕಿಂತಲೂ ಪೇಲವವಾಗಿ ಕಾಣಿಸುತ್ತದೆ. ಆದರೆ ಅಧಿಕಾರವು ವಿಮೋಚನೆಯ ಸಾಧನವಾದರೆ ಅಥವಾ ಇಂದಿನ ರಾಜಕೀಯ ವ್ಯವಸ್ಥೆಯನ್ನು ಬದಲಾಯಿಸಲು ಅಸ್ತ್ರವಾದರೆ ಆಗ ''ಅಧಿಕಾರ'' ಎಂಬುದರ ಅರ್ಥವೇ ಬದಲಾಗಿಬಿಡುತ್ತದೆ. ಸಮಾಜವಾದವೆಂದರೆ ಆಡಳಿತಗಾರರ ಒಂದು ಬಣದ ಜಾಗದಲ್ಲಿ ಇನ್ನೊಂದನ್ನು ತಂದು ಕೂರಿಸುವುದಲ್ಲ. ಪ್ಯಾರಿಸ್ ಕಮ್ಯೂನ್ ಕುರಿತು ಹೇಳುವಾಗ ಮಾರ್ಕ್ಸ್ ವಿಶದಪಡಿಸಿದ್ದು ಹೀಗೆ : ''ಆ ಕ್ರಾಂತಿಯು ಪ್ರಭುತ್ವವನ್ನು ಆಳುವ ವರ್ಗದ ಒಂದು ಬಣದಿಂದ ಇನ್ನೊಂದು ಬಣಕ್ಕೆ ವರ್ಗಾಯಿಸುವು ದಾಗಿರಲಿಲ್ಲ; ಆ ಹಾಳು ವರ್ಗ ಪ್ರಾಬಲ್ಯ ಎನ್ನುವುದಿದೆಯಲ್ಲ ಅದರ ಯಂತ್ರವನ್ನು ನುಚ್ಚುನೂರು ಮಾಡುವುದು ಕ್ರಾಂತಿಯ ಆಶಯವಾಗಿತ್ತು.''

ಅದನ್ನು ಪರಾಮರ್ಶಿಸಿಕೊಳ್ಳುವ ಬಗೆ ಇದು : ಸಮಾಜವಾದವು ಸಾರ್ವಭೌಮತ್ವದ ಕಲ್ಪನೆಯನ್ನೇ ಬದಲಿಸಿಬಿಡುತ್ತದೆ. ''ಅಧಿಕಾರ'' ಎಂದರೆ ನವದೆಹಲಿಯಲ್ಲಿಂದು ಏನು ಅರ್ಥ ಮಾಡಿಕೊಳ್ಳುತ್ತಾರೋ ಅದಕ್ಕಿಂತಲೂ ೧೮೭೧ರ ಪ್ಯಾರಿಸ್‌ನಲ್ಲಿ ಬೇರೊಂದು ಅರ್ಥವಿತ್ತು. ಅವೆರಡಕ್ಕೂ ಅಜಗಜಾಂತರ ಭಿನ್ನತೆಯಿದೆ. ಅಧಿಕಾರದ ಅತ್ಯಂತ ಫಲಕಾರಿ ಸ್ವರೂಪವೆಂದರೆ ಸ್ವಯಂ ನಮ್ಮ ಮೇಲಿನ ಅಧಿಕಾರ. ಪ್ರತಿ ವ್ಯಕ್ತಿಯೂ ತನಗೆ ತಾನೆ ಅಧಿಕಾರಿ. ಇದು ಪೂರ್ಣ ಸ್ವರೂಪದಲ್ಲಿ ಸಮುದಾಯದ ಲಕ್ಷಣವಾದಾಗ ಅದು ನಿಜವಾದ ಪ್ರಜಾಪ್ರಭುತ್ವ ಎನಿಸಿಕೊಳ್ಳಲು ಅರ್ಹವಾದ್ದು. ಯೂರೋಪಿನ 'ಜ್ಞಾನೋದಯ' ಎಂಬ ಘಟ್ಟದಲ್ಲಿ ಸಾರ್ವಭೌಮತ್ವದ ಬಗ್ಗೆ ಒಂದು ಮಾತು ಬಂತು : ನಾವೇ ನಿರ್ಮಿಸಿದ ಸಾರ್ವಭೌಮತ್ವಕ್ಕೆ ಮಣಿಯುವುದೊಂದೇ ನಿಜವಾದ ಸಾರ್ವಭೌಮತ್ವದ ಸ್ವರೂಪ. ಸ್ವಾತಂತ್ರ್ಯ ಎಂಬುದರ ಅಮೂಲ್ಯವಾದ ಅರ್ಥ ''ಸ್ವಯಂ ನಿರ್ಧಾರ'' ಎಂದು. ಮಾನವ ತನ್ನ ಸ್ವಾತಂತ್ರ್ಯದ ದುರುಪಯೋಗ ಮಾಡಿಕೊಳ್ಳಬಲ್ಲ, ನಿಜ; ಆದರೆ ಸ್ವಾತಂತ್ರ್ಯವಿಲ್ಲದಿದ್ದರೆ ಮಾನವ ಏನೂ ಅಲ್ಲ. ಅವನು ಮಾನವನಾಗುವುದು ಅದಿದ್ದಾಗಲೇ. ಆಗಾಗ್ಗೆ ಮಾನವ ಅವಸರದ ಇಲ್ಲವೆ ಬುದ್ಧಿರಹಿತ ತೀರ್ಮಾನ ಕೈಗೊಳ್ಳುತ್ತಾನೆ. ಅದೆಷ್ಟು ಕೆಟ್ಟದ್ದಾಗಿರಬಹುದೆಂದರೆ ಅಂತಹ ತೀರ್ಮಾನವನ್ನು ಒಬ್ಬ ವಿವೇಕಿ ನಿರಂಕುಶಾಧಿಕಾರಿಯೂ ಸಹ ಕೈಗೊಳ್ಳದಿರಬಹುದು. ಮುಖ್ಯವಾಗಿ ತೀರ್ಮಾನಗಳು ಸ್ವತಃ ಅವರದೇ ತೀರ್ಮಾನಗಳಾಗಿರಬೇಕು. ಇಲ್ಲವಾದಲ್ಲಿ ತೀರ್ಮಾನಗಳು ಜೊಳ್ಳಾಗಿರುತ್ತವೆ, ವಿಶ್ವಾಸಾರ್ಹ ವಾಗಿರುವುದಿಲ್ಲ. ತೋರಿಕೆಗೆ ಬಹಳ ಬುದ್ಧಿವಂತಿಕೆಯವೆಂದು ಕಾಣಬಹುದು, ಅಷ್ಟೆ.

ಪ್ರಸ್ತುತ ಬಂಡವಾಳಶಾಹಿಯ ಪತನದ ನಂತರ ಸಮಾಜವಾದಿ ವ್ಯವಸ್ಥೆಯಲ್ಲೂ ಅಧಿಕಾರ ಎಂಬುದಿರುತ್ತದೆ; ಆದರೆ ಅದರ ಸ್ವರೂಪ ಬದಲಾಗಿರುತ್ತದೆ. ಅಧಿಕಾರ ಎಂಬುದರ ವಿಚಾರದಲ್ಲಿಯೇ ಕ್ರಾಂತಿ ಉಂಟಾಗುತ್ತದೆ. ಅಂತೆಯೇ ಪ್ರಭುತ್ವದ ವಿಚಾರ ಸಹ. ''ಪ್ರಭುತ್ವ'' ಎಂಬುದರ ಒಂದರ್ಥದಲ್ಲಿ ''ಪ್ರಭುತ್ವದ ಸಮಾಜವಾದ'' ಎಂಬುದು ಒಂದು ವಿರೋಧದ ನೆಲೆಯದು. ಇನ್ನೊಂದರ್ಥದಲ್ಲಿ ಅದು ಸಮಂಜಸ. ಮಾರ್ಕ್ಸ್ ಹೇಳುವಂತೆ, ಸಮಾಜವಾದಿ ವ್ಯವಸ್ಥೆ ನೆಲೆಗೊಂಡಾಗಲೂ ಪ್ರಭುತ್ವವಿರುತ್ತದೆ. ಅದರಾಚೆಗಿನ ಸಾಮ್ಯವಾದಿ ವ್ಯವಸ್ಥೆಯಲ್ಲಿ ಪ್ರಭುತ್ವವು ಬಲಾತ್ಕರಿಸುವ ಅಂಗವಾಗಿ ಉಳಿಯುವುದಿಲ್ಲ; ಬದಲಾಗಿ, ಅದು ಆಡಳಿತಾತ್ಮಕ ಅಂಗವಾಗಿ ಮಾರ್ಪಡುತ್ತದೆ. ಅದನ್ನು ಪ್ರಭುತ್ವವೆಂದು ಗುರುತಿಸಲು ಆಗದಷ್ಟು ಬದಲಾವಣೆ ಆಗಿಹೋಗಿರುತ್ತದೆ. ಅದು ಹೇಗಿರಬಹುದೆಂಬುದರ ಒಂದು ಚಿತ್ರಣವನ್ನು ಕೊಡಬಹುದು : ಒಂದು ವಿಕೇಂದ್ರಿತ ಮಹಾಜಾಲ, ಅದರಲ್ಲಿ ಸ್ವಯಮಾಳ್ವಿಕೆಯ ಸಮುದಾಯಗಳಿವೆ. ಅದಕ್ಕೆ ಪ್ರಜಾಪ್ರಭುತ್ವದ ಕ್ರಮದಲ್ಲಿ ಚುನಾಯಿತವಾಗಿರುವ ಒಂದು ಕೇಂದ್ರೀಯ ಆಡಳಿತ ಇದೆ, ಆದರೆ ಅದರ ಆಳ್ವಿಕೆಯಲ್ಲಿ ಏಕಪ್ರಕಾರವಾದ ನಿರ್ಧಾರಿತ ಕ್ರಮವಿಲ್ಲ; ಬೇಕು ಬೇಕಾದಾಗ ಸೂಕ್ತವಾಗಿ ಸಡಿಲಿಸಿಕೊಳ್ಳಬಹುದು ಇಲ್ಲವೆ ಬಿಗಿಗೊಳಿಸಿಕೊಳ್ಳಬಹುದು. ಅದನ್ನೇ ಬೇಕಾದರೆ ಪ್ರಭುತ್ವವೆಂದು ಕರೆದುಕೊಳ್ಳಲಡ್ಡಿಯಿಲ್ಲ. ಅಯ್ಯೋ, ಪ್ರಭುತ್ವವೆಂದರೆ ಇಷ್ಟೇ ಏನು ಅನಿಸಬಹುದು. ಬೃಹತ್ ರಾಷ್ಟ್ರಪತಿ ಭವನ, ದೊಡ್ಡ ವಿಧಾನಸೌಧ, ರಾಜಕುಮಾರ ರಾಹುಲ ಗಾಂಧಿ, ಮಹಾಮಾತೆ ಸುಷ್ಮಾ ಸ್ವರಾಜ್, ಎಲ್ಲಾ ಇಲ್ಲದ ಇದು ಪ್ರಭುತ್ವವೆ ? ಹೌದು, ಅದೇ ಪ್ರಭುತ್ವ, ಅಷ್ಟೇ ಪ್ರಭುತ್ವ.

ಈಗಿರುವಂತೆ ಮಾರ್ಕ್ಸ್‌ನ ಕಾಲದಲ್ಲೂ ಅರಾಜಕತಾವಾದಿಗಳು ಇದ್ದರು. ''ಮೂಲಭೂತ ಅಧಿಕಾರ'' ಎಂದರೇನು ಎಂಬ ವಿಷಯದಲ್ಲಿ ಮಾರ್ಕ್ಸ್ ಜೊತೆ ಅವರದು ನಿರಂತರವಾದ ಚರ್ಚೆ. 'ಅಂತಿಮವಾಗಿ ನಿರ್ಧಾರಕವಾದ್ದು' ಎಂದು ಅದರ ಅರ್ಥವೇ ? ಅಲ್ಲವೆನ್ನುತ್ತಾನೆ ಮಾರ್ಕ್ಸ್. ಅವನ ಪ್ರಕಾರ ರಾಜಕೀಯ ಅಧಿಕಾರವೆಂಬುದಕ್ಕೆ ವಿಶಾಲವಾದ ರಾಜಕೀಯ ಹಿನ್ನೆಲೆ ಇದೆ. ಅದನ್ನು ಕುರಿತು ಹಲವು ಪ್ರಶ್ನೆಗಳು ಬರುತ್ತವೆ : ಆ ರಾಜಕೀಯ ಅಧಿಕಾರವು ಯಾವ ಭೌತಿಕ ಹಿತಾಸಕ್ತಿಗಳನ್ನು ಪೋಷಿಸುತ್ತದೆ ಎಂಬುದು ಅಂತಹ ಒಂದು ಪ್ರಶ್ನೆ. ಮಾರ್ಕ್ಸ್ ಪ್ರಕಾರ ಇದು ಅತ್ಯಂತ ಪ್ರಮುಖ ವಿಷಯ. ಸಂಪ್ರದಾಯವಾದಿಗಳು ಪ್ರಭುತ್ವವನ್ನು ಆದರ್ಶಮಯಗೊಳಿಸಿದ್ದರು. ಮಾರ್ಕ್ಸ್ ಅದನ್ನೂ ತಿರಸ್ಕರಿಸಿದ; ಅರಾಜಕತಾವಾದಿಗಳು ಪ್ರಭುತ್ವದ ಮಹತ್ವವನ್ನು ವಿಪರೀತವೆಂದು ಎಣಿಸಿದರು. ಮಾರ್ಕ್ಸ್ ಅದನ್ನೂ ತಿರಸ್ಕರಿಸಿದ. ಅಧಿಕಾರವನ್ನು ಸಾಮಾಜಿಕ ಸನ್ನಿವೇಶಗಳಿಂದ ಬೇರ್ಪಡಿಸಿ ಅದಕ್ಕೊಂದು ಸ್ವಾಯತ್ತತೆಯನ್ನು ಕಟ್ಟಿಕೊಡಲು ಮಾರ್ಕ್ಸ್ ಸಿದ್ಧನಿಲ್ಲ. ಅವನ ಚಿಂತನೆಯಲ್ಲಿ ಇದೊಂದು ಪ್ರಶಸ್ತವಾದ ಅಂಶ. ಆದರೆ ಅದರಲ್ಲೊಂದು ನ್ಯೂನತೆ ಇದೆ. ಅಧಿಕಾರವನ್ನು ಕುರಿತ ಜಿಜ್ಞಾಸೆಯಲ್ಲಿ ಅವನು ಗಣನೆಗೆ ತೆಗೆದುಕೊಳ್ಳದಿದ್ದ ಒಂದು ಅಂಶವನ್ನು ಅವನ ದೇಶಬಾಂಧವರಾದ ನೀಟ್ಷೆ ಮತ್ತು ಫ್ರಾಯ್ಡ್ ಬೇರೆ ಬೇರೆ ರೀತಿಗಳಲ್ಲಿ ಅರ್ಥೈಸಿದರು. ಅಧಿಕಾರವು ಸ್ವಾಯತ್ತವಲ್ಲದಿರಬಹುದು. ಆದರೆ ಅದರಲ್ಲಿನ ಒಂದು ಸಂಗತಿಯು ಸ್ವಾಯತ್ತವೆಂಬ ವೈಭವವನ್ನು ತನ್ನ ಪರಿಧಿಯಲ್ಲಿ ಕಂಡುಕೊಳ್ಳುತ್ತದೆ. ಉದಾಹರಣೆಗೆ, ಯಾವೊಂದು ನಿರ್ದಿಷ್ಟ ಉದ್ದೇಶವೂ ಇಲ್ಲದೆ ಅಧಿಕಾರವು ತನ್ನ ಪ್ರತಾಪವನ್ನು ಪ್ರದರ್ಶಿಸಬಲ್ಲದು; ಅಥವಾ ಯಾವ ನಿರ್ದಿಷ್ಟ ಗುರಿಯ ಸಾಧನೆಗಾಗಿ ಅಧಿಕಾರವನ್ನು ಚಲಾಯಿಸಬೇಕೋ ಅದನ್ನು ಮೀರಿ ಅಧಿಕಾರ ಚಲಾಯಿಸಬಹುದು. ಅಂದರೆ, ಅಧಿಕಾರಿಯು ತನ್ನ ಎಲ್ಲೆ ಮೀರಿ ವರ್ತಿಸಲು ಸ್ಪಷ್ಟವಾದ ಕಾರಣ ವೇನೂ ಬೇಕಿಲ್ಲ. ಯಾರನ್ನೋ ಅಧೀನದಲ್ಲಿಟ್ಟುಕೊಳ್ಳುವುದೇ ಪರಮಸಂತಸ ಎನಿಸಿಬಿಡ ಬಹುದು. ಶೇಕ್ಸ್‌ಪಿಯರನ ಒಂದು ನಾಟಕ ''ದ ಟೆಂಪೆಸ್ಟ್.'' ಅದರಲ್ಲಿ ಪ್ರಾಸ್ಪೆರೊ ಎಂಬ ಮಾಂತ್ರಿಕನಿದ್ದಾನೆ. ಅವನು ದೊರೆತನ ಕಳೆದುಕೊಂಡಿರುವ ಒಬ್ಬ ವೃದ್ಧ. ಅವನ ಸೇವಕ ಏರಿಯಲ್ ಅವರಿಬ್ಬರ ಸಂಬಂಧವೆಂಥದೆಂದರೆ ಯಜಮಾನನ ಸೇವೆ ಮಾಡಿ ಅವನನ್ನು ತೃಪ್ತಿಗೊಳಿಸಿ ತಾನು ಸ್ವತಂತ್ರವಾಗಿಬಿಡಬೇಕು, ತನ್ನ ಮೇಲಿನ ಸಾರ್ವಭೌಮತ್ವವನ್ನು ಕಳೆದುಕೊಳ್ಳಬೇಕು, ತನ್ನ ಸ್ವಂತದ್ದೇನೋ ಅದನ್ನು ಮಾಡಿಕೊಂಡಿರಬೇಕು ಎಂದು ಏರಿಯಲ್ ತಹತಹಿಸುತ್ತಾನೆ. ಅವನದೇ ಚೇಷ್ಟೆಗಳಿವೆ, ವಿನೋದಗಳಿವೆ; ತನ್ನ ಮಾಂತ್ರಿಕ ಶಕ್ತಿಯನ್ನು ಬೇರಾವ ಉದ್ದೇಶವೂ ಇಲ್ಲದೆ ಸುಮ್ಮನೆ ಅನುಭವಿಸಿ ಸುಖಿಸಬೇಕು. ಅದನ್ನು ಬಿಟ್ಟು ತನ್ನ ಶಕ್ತಿಯನ್ನೆಲ್ಲಾ ಅವನ ಯಜಮಾನನ ಸೇವೆಗಾಗಿ ಇನ್ನೆಷ್ಟು ಕಾಲ ಸವೆಸಬೇಕು, ಯಜಮಾನನ ಉಪಾಯಗಳು, ಆಕಾಂಕ್ಷೆಗಳು ಇನ್ನೆಷ್ಟು ಕಾಲ ಅವನನ್ನು ನಿಯಂತ್ರಿಸಬೇಕು !

ಅಂದರೆ, ಅಧಿಕಾರವು ಕೇವಲ ಒಂದು ಸಾಧನವಾಗಿ ಮಾತ್ರವೇ ಉಳಿಯದು; ಹಾಗೇನಾದರೂ ಭಾವಿಸಿಕೊಂಡರೆ ಅಧಿಕಾರವನ್ನು ತನ್ನ ಪರಿಧಿಯನ್ನು ಮೀರಿಹೋಗದ, ನಿರ್ದಿಷ್ಟ ಆಶಯಗಳನ್ನು ಪೂರೈಸಿಕೊಳ್ಳಲು ಬಳಸಲಾಗುವ, ಅಂಶವಷ್ಟೇ ಎಂದು ಪರಿಗಣಿಸಿದಂತಾಗುತ್ತದೆ. ಅದೂ ತೀರಾ ತಪ್ಪಾಗಿ ಅರ್ಥಮಾಡಿಕೊಂಡಂತೆಯೇ ಸರಿ. ಅಧಿಕಾರವು ಏಕೆ ಅಷ್ಟೊಂದು ಬಲಾತ್ಕಾರವನ್ನು ಹೇರುವಂಥದು ಎಂಬುದನ್ನು ನಗಣ್ಯವೆಂದು ತಳ್ಳಿಹಾಕುವುದು ತಪ್ಪಾದ ಅರ್ಥ ವಲ್ಲದೆ ಮತ್ತೇನು ? ಗ್ವಾಂಟನಾಮೊ, ಇರಾಕ್, ಆಫ್ಘಾನಿಸ್ತಾನಗಳಲ್ಲಿ ಅಮೆರಿಕಾದ ಸೈನಿಕರು ಅಪರಾಧಿಗಳ ಮೇಲೆ ಮತ್ತು ಅಪರಾಧಿಗಳಲ್ಲದವರ ಮೇಲೆ ತಮ್ಮ ಕ್ರೌರ್ಯದ ಕಾಮವಿಕಾರಗಳನ್ನು ಪ್ರದರ್ಶಿಸಿದ ವರದಿಗಳನ್ನು ಕೇಳಿದ್ದೇವಲ್ಲವೇ ? ಅದು ಅಧಿಕಾರದ ಒಂದು ನಿಕೃಷ್ಟ ಕುರೂಪ.

ಈಗ ಯೋಚನೆ ಮಾಡಿ, ಎಂತಹ ಪ್ರಭುತ್ವ ಅಪೇಕ್ಷಣೀಯ ಎಂದು.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

## ಹೊಸ ಅಂಗಿ

ನಮ್ಮವ್ವ

ಉಟ್ಟುಬಿಟ್ಟ

ಕುಪ್ಪಸ

ಲುಂಗಿ

ನನ್ನ

ಹೊಸ ಅಂಗಿ !!

**ಪುಂಡಲೀಕ ಪಾಟೀಲ**
'ಶಾಂತಲಾ' ಪ್ಲಾ. ನಂ. ೨೧೮,
ಬಾಕ್ಸಯಿಟ್ ರೋಡ, ವಿದ್ಯಾನಗರ
ಅಂಚೆ : ಹಿಂಡಲಗಿ, ಬೆಳಗಾವಿ - ೫೯೧೧೦೮

# ಆದರಣೀಯ ವ್ಯಕ್ತಿತ್ವದ ಗೋವಿಂದ ಪಾನ್ಸರೆ



ಸಂದರ್ಶನ ಲೇಖನ – **ಡಾ|| ಜಿ. ರಾಮಕೃಷ್ಣ**
ಚಿತ್ರಗಳು
**ಡಾ|| ಎನ್. ಗಾಯತ್ರಿ ಮತ್ತು ಸುನಿತಾ ಅಮೃತಸಾಗರ**

೮೪ ಪುಟಗಳ ಒಂದು ಮರಾಠಿ ಪುಸ್ತಕ ''ಆರ್‌ಪಾರ್ ಕಾಮ್ರೇಡ್'' (೨೦೧೧, ಎರಡನೆ ಆವೃತ್ತಿ ೨೦೧೨). ಖ್ಯಾತ ಸಾಹಿತಿ ಮತ್ತು ಹೋರಾಟಗಾರ ಉತ್ತಮ ಕಾಂಬ್ಳೆ ಸುಮಾರು ೨೦-೨೧ ಗಂಟೆಗಳ ಕಾಲ ಪಾನ್ಸರೆ ಅವರನ್ನು ಸಂದರ್ಶಿಸಿ ಸಿದ್ಧಪಡಿಸಿದ ಪುಸ್ತಕ ಅದು. ಅದನ್ನು ಕಾ|| ಗೋವಿಂದ ಪಾನ್ಸರೆ ಅಮೃತ ಮಹೋತ್ಸವ ಸಮಿತಿಯು ಪ್ರಕಟಿಸಿದೆ. ಕಡೆಯಲ್ಲಿ ಪಾನ್ಸರೆ ಹೇಳಿದ್ದಾರೆ, ''ಈ ಹೋರಾಟದ ಪ್ರವಾಹವನ್ನು ನೀವು ಮುಂದಕ್ಕೆ ಕೊಂಡೊಯ್ಯಬೇಕು, ಹಾಗೆ ಮಾಡುತ್ತೀರೆಂಬ ವಿಶ್ವಾಸ ನನಗಿದೆ'' ಎಂದು. ೧೯೩೩ರ ನವಂಬರ್ ೨೬ರಂದು ಮಹಾರಾಷ್ಟ್ರದ ಅಹ್ಮದ್‌ನಗರ್ ಜಿಲ್ಲೆಯ ಕೋಲ್ಹಾರ್ ಎಂಬಲ್ಲಿ ಜನಿಸಿದ ಪಾನ್ಸರೆಯವರ ವ್ಯಾಸಂಗ ಕೊಲ್ಹಾಪುರದಲ್ಲಿ. ಬಿ.ಎ. ಆನರ್ಸ್ ಮತ್ತು ಎಲ್‌ಎಲ್.ಬಿ. ಪದವೀಧರರು. ಪ್ರಾಥಮಿಕ ಶಾಲಾ ಶಿಕ್ಷಕ, ವೃತ್ತಪತ್ರಿಕೆಗಳ ವಿತರಕ, ಕೊಲ್ಹಾಪುರ ಪುರಸಭೆಯ ನೌಕರ, ಹೀಗೆ ಬೇರೆಬೇರೆ ವೃತ್ತಿ ಮಾಡಿರುವ ಪಾನ್ಸರೆ ೧೯೬೪ರಿಂದ ವಕೀಲರು ಮತ್ತು ಶಿವಾಜಿ ವಿಶ್ವವಿದ್ಯಾಲಯದ ಪತ್ರಿಕೋದ್ಯೋಗ ವಿಭಾಗದಲ್ಲಿ ಸಂದರ್ಶಕ ಪ್ರಾಧ್ಯಾಪಕರು, ೧೯೫೨ರಿಂದ ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯರಾದ ಪಾನ್ಸರೆ ೧೦ ವರ್ಷಗಳ ಕಾಲ ಮಹಾರಾಷ್ಟ್ರದಲ್ಲಿ ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿಯಾಗಿದ್ದರು. ಅವರ ಗ್ರಂಥ ''ಶಿವಾಜಿ ಯಾರು'' ಮರಾಠಿಯಲ್ಲಿ ೨೪ ಆವೃತ್ತಿಗಳನ್ನು ಕಂಡಿದೆ, ಕನ್ನಡದಲ್ಲಿ ೬ನೆಯ ಆವೃತ್ತಿಯನ್ನು ನವಕರ್ನಾಟಕ ಪ್ರಕಾಶನ ಹೊರತರುತ್ತಿದೆ. ಸಾಹು ಮಹಾರಾಜರನ್ನು ಕುರಿತ ಅವರ ಉತ್ತಮ ಗ್ರಂಥ ಮೂರು ಆವೃತ್ತಿಗಳನ್ನು ಕಂಡಿದೆ. ಇಪ್ಪತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿರುವ ಪಾನ್ಸರೆ ಖ್ಯಾತ ಹೋರಾಟಗಾರರು. ಭೀಮಕ್ರಾಂತಿ ಪುರಸ್ಕಾರ, ಕೊಲ್ಹಾಪುರ ಭೂಷಣ ಪುರಸ್ಕಾರ, ಭಾಯಿ ಮಾಧವರಾವ್ ಬಾಗಲ್ ಪುರಸ್ಕಾರ, ಹೀಗೆ ಅವರಿಗೆ ಹತ್ತಾರು ಪುರಸ್ಕಾರಗಳು, ಪ್ರಶಸ್ತಿಗಳು ಲಭಿಸಿವೆ. ಅವರ ಸಮಗ್ರ ಸಾಹಿತ್ಯ ಸಂಪುಟವು ೨೦೧೦ರಲ್ಲಿ ಪ್ರಕಟವಾಗಿತ್ತು. ''ಬೇರೆ ಪಕ್ಷಗಳು ತಮ್ಮ ಹಣೆಯ ಮೇಲಿನ ಕುಂಕುಮದ ಬಣ್ಣ ಬದಲಾಯಿಸಿಕೊಂಡರು ಇಲ್ಲವೆ ಅದರ ರೂಪ ಬದಲಿಸಿಕೊಂಡರು, ಅಷ್ಟೆ'' ಎನ್ನುವ ಪಾನ್ಸರೆ ''ನಾವೊಂದು ದಿನ ಯಶಸ್ಸು ಗಳಿಸುವೆವು'' ಎಂಬ ನಿಚ್ಚಳ ನಂಬಿಕೆಯಿಂದ ಮುಂದೆ ನಡೆಯುತ್ತಾ ಬಂದಿದ್ದಾರೆ. ಉತ್ತಮ ಕಾಂಬ್ಳೆ ಹೇಳುತ್ತಾರೆ, ''ಕಾಮ್ರೇಡ್ ಆಗಿ ಪಾನ್ಸರೆ ಹೋರಾಟಗಳನ್ನು ನಡೆಸಿದ್ದಾರೆ, ಕಾರಾಗೃಹ ವಾಸ ಹಲವು ಬಾರಿ ಅನುಭವಿಸಿದ್ದಾರೆ, ಪೊಲೀಸರ ಲಾಠಿ ಏಟು ತಿಂದಿದ್ದಾರೆ. ಕಾರ್ಮಿಕ ವರ್ಗದ ಹೋರಾಟಗಳಷ್ಟೇ ಸಾಮಾಜಿಕ ಪ್ರಶ್ನೆಗಳನ್ನು ಕುರಿತ ಹೋರಾಟಗಳಿಗೂ ಆದ್ಯತೆ ನೀಡಿರುವ ಪಾನ್ಸರೆ ಜಾತಿನಿರ್ಮೂಲನ, ದೇವದಾಸಿ ಪದ್ಧತಿಯ ರದ್ದತಿ, ಮಂಡಲ್ ಆಯೋಗದ ವರದಿ ಅನುಷ್ಠಾನ, ಪರಿಸರ ಸಂರಕ್ಷಣೆ, ಶಂಕರಾಚಾರ್ಯ ವಿರುದ್ಧದ ಆಂದೋಳನ, ಶೈಕ್ಷಣಿಕ ಸೌಲಭ್ಯಗಳ ವಿಸ್ತರಣೆ, ರಿಕ್ಷಾ ಚಾಲಕರ ಹಿತರಕ್ಷಣೆ, ಭೂಮಿ ಹೀನರ ಚಳುವಳಿ, ಹೀಗೆ ಎಲ್ಲ ಸಮಸ್ಯೆಗಳನ್ನೂ ಕೈಗೆತ್ತಿಕೊಂಡು ಹೋರಾಟ ನಡೆಸಿದ್ದಾರೆ, ನಾಯಕತ್ವ ನೀಡಿದ್ದಾರೆ'' ಎಂದು. ಅವರನ್ನು ಸಂದರ್ಶಿಸಲು 'ಹೊಸತು' ಸಂಪಾದಕ ಮಂಡಲಿಯ ಡಾ|| ಜಿ. ರಾಮಕೃಷ್ಣ ಮತ್ತು ಡಾ|| ಎನ್. ಗಾಯತ್ರಿ ಕೊಲ್ಹಾಪುರದಲ್ಲಿ ಅವರ ಪಕ್ಷದ ಕಚೇರಿಗೆ ಹೋಗಲೆಂದು ರಿಕ್ಷಾ ಹತ್ತಿ 'ಬಿಂದು ಚೌಕ್'ಗೆ ಹೋಗಬೇಕೆಂದಾಗ ''ಅಲ್ಲಿ ಎಲ್ಲಿಗೆ ಹೋಗಬೇಕು ?'' ಎಂದು ಕೇಳಿದರು. ''ಭಾರತ ಕಮ್ಯುನಿಸ್ಟ್ ಪಕ್ಷದ ಕಚೇರಿಗೆ'' ಎಂದು ಹೇಳಿದಾಗ ''ಓ, ಸುಮ್ಮನೆ ಕಾಮ್ರೇಡ್ ಪಾನ್ಸರೆಯವರನ್ನು ಕಾಣಲು ಎಂದು ನೀವು ಹೇಳಿದ್ದರೆ ಸಾಕಿತ್ತು. ಅವರು ಯಾರಿಗೆ ಪರಿಚಯವಿಲ್ಲ ಹೇಳಿ'' ಎಂದರು. ಸಂದರ್ಶನ ಜಾರಿಯಲ್ಲಿದ್ದಾಗ ಅನೇಕರು ಬಂದು-ಹೋಗಿ ಮಾಡುತ್ತಿದ್ದರು. ''ಸ್ವಲ್ಪಕಾಲ ಬಾಗಿಲು ಮುಂದು ಮಾಡೋಣವೆ ?'' ಎಂದು ಕೇಳಿದಾಗ ''ಇಲ್ಲ, ಅದು ಯಾವಾಗಲೂ ತೆರೆದಿರುತ್ತದೆ. ಯಾರು ಬೇಕಾದರೂ ಬಂದುಹೋಗುವಂತಿರುವುದು ನಮ್ಮ ಪದ್ಧತಿ'' ಎಂದರು. ಅವರ ಸಂದರ್ಶನದ ಆಯ್ದ ಭಾಗಗಳನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ.

**ಹೊಸತು :** ನಮಸ್ಕಾರ ಪಾನ್ಸರೆಯವರೆ, ನಿಮ್ಮನ್ನು ಭೇಟಿಯಾಗಲೆಂದೇ ನಾವು ಪುಣೆಗೆ ಹೋಗುವ ಹಾದಿಯಲ್ಲಿ ನಿಮ್ಮೂರಿಗೆ ಬಂದಿದ್ದೇವೆ. ನಮ್ಮ ಪತ್ರಿಕೆಯ ಪರಿಚಯ ನಿಮಗಿದೆಯೋ ಇಲ್ಲವೋ ತಿಳಿಯದು. ೧೩ ವರ್ಷಗಳಿಂದ ನವಕರ್ನಾಟಕ ಪ್ರಕಾಶನ ಅದನ್ನು ಹೊರತರುತ್ತಿದೆ. ಆ ಪ್ರಕಾಶನ ನಿಮಗೆ ಗೊತ್ತು. ನಮ್ಮ ಓದುಗರಿಗೆ ನಿಮ್ಮ ಪರಿಚಯವಾಗಲೆಂಬ ಆಶಯದಿಂದ ನಿಮ್ಮಲ್ಲಿಗೆ ಬಂದಿದ್ದೇವೆ.

**ಪಾನ್ಸರೆ :** ಬಹಳ ಸಂತೋಷ ನೀವು ಬಂದಿದ್ದು. ನಿನ್ನೆಯಷ್ಟೆ ನವಕರ್ನಾಟಕದ ಪತ್ರ ಬಂದಿದೆ : ''ಶಿವಾಜಿ ಯಾರು ?'' ಆರನೆಯ ಮುದ್ರಣ ಹೊರಬರಲಿದೆಯಂತೆ.

**ಹೊ :** ಶಿವಾಜಿ ಮಹಾರಾಜನನ್ನು ಕುರಿತ ವಿಮರ್ಶಾತ್ಮಕ ವಿಶ್ಲೇಷಣೆ ನಿಮ್ಮ ಪುಸ್ತಕದಲ್ಲಿದೆ. ಶಿವಾಜಿಯ ಟೀಕೆಗೆ ಯಾವಾಗಲೂ ಮಹಾರಾಷ್ಟ್ರದಲ್ಲಿ ವ್ಯಗ್ರ ಪ್ರತಿಕ್ರಿಯೆ ಇರುತ್ತದೆಂದು ಹೇಳುತ್ತಾರೆ. ನಿಮ್ಮ ಪುಸ್ತಕಕ್ಕೇನಾದರೂ ಪ್ರತಿರೋಧ ಬಂದಿದೆಯೆ ?

**ಪಾ :** ಪ್ರತಿಯೊಂದು ವಿಶ್ಲೇಷಣೆಗೂ ಗಂಭೀರ ಪ್ರತಿಭಟನೆ ಬರುತ್ತದೆಂಬುದು ನಿಜವಲ್ಲ. ಚರಿತ್ರೆಯನ್ನು ಹೇಗೆ ಬರೆಯಬೇಕೆಂಬುದಷ್ಟೇ ಮುಖ್ಯ ಪ್ರಶ್ನೆ. ನಮ್ಮ ಹೇಳಿಕೆಗಳಿಗೆ, ಪ್ರತಿಪಾದನೆಗಳಿಗೆ ದಾಖಲೆಗಳಿವೆಯೇ, ಇಲ್ಲವೇ, ಎಂಬುದು ಓದುಗರಿಗೆ ತಿಳಿಯುತ್ತದೆ.



ತಿಳಿಯುವಂತೆ ಹೇಳಬೇಕಾದ್ದು ಇತಿಹಾಸಕಾರನ ಜವಾಬ್ದಾರಿ. ಆಗ ಓದುಗರು ಅದನ್ನು ಸ್ವೀಕರಿಸುತ್ತಾರೆ. ನನ್ನ ಪುಸ್ತಕದಲ್ಲಿ ಪ್ರತಿಯೊಂದಕ್ಕೂ ಸೂಕ್ತ ಚಾರಿತ್ರಿಕ ದಾಖಲೆಗಳನ್ನು ಒದಗಿಸಿದ್ದೇನೆ. ಶಿವಾಜಿ ಎಂದರೆ ಹಿಂದು ಚಕ್ರವರ್ತಿಯಲ್ಲ, ಹಾಗೆಂದು ಹೇಳುವಾಗ ನಾನು ಬೇಕಾದಷ್ಟು ದಾಖಲೆಗಳನ್ನು ಉದ್ಧರಿಸಿದ್ದೇನೆ. ನಾನು ಅದನ್ನು ಮೊದಲು ಪ್ರಕಟಿಸಿದ್ದು ೧೯೮೭ರಲ್ಲಿ. ದಾಖಲೆಗಳು ಯಾವುವೂ ನನ್ನಿಂದ ಸೃಷ್ಟಿಯಾದುವಲ್ಲ, ಅವೆಲ್ಲಾ ಎಲ್ಲರಿಗೂ ಲಭ್ಯವಿದ್ದಂಥವೇ. ನಾನು ಅವನ್ನು ಒಟ್ಟುಮಾಡಿದ್ದೇನೆ. ಶಿವಾಜಿಯ ಸೈನ್ಯದ ಮುಖ್ಯಸ್ಥ ಒಬ್ಬ ಮುಸಲ್ಮಾನ, ಶಿವಾಜಿಯ ಅಂಗರಕ್ಷಕ ಒಬ್ಬ ಮುಸಲ್ಮಾನ, ಶಿವಾಜಿಯ ಸೈನ್ಯದಲ್ಲಿ ನೂರಾರು ಮುಸಲ್ಮಾನರಿದ್ದರು. ಇದನ್ನು ನಾನೊಬ್ಬನೇ ದಾಖಲಿಸಿಲ್ಲ. ಮಹಾಮಹೋಪಾಧ್ಯಾಯ ದತ್ತೋ ವಾಮನ ಪೋದ್ದಾರ್ ಸಹ ಅದನ್ನು ಉಲ್ಲೇಖಿಸಿದ್ದಾರೆ. ಇತಿಹಾಸವಿದೆಯಲ್ಲ, ನೋಡಿ, ಅದನ್ನು ಉಪಯೋಗಿಸುವಂತೆ ದುರುಪಯೋಗ ಸಹ ಮಾಡಬಹುದು. ಸಮಾಜವನ್ನು ಹಿಮ್ಮುಖವಾಗಿ ನಡೆಸಬೇಕೆಂಬ ಆಸಕ್ತಿಯುಳ್ಳ ರಾಜಕಾರಣಿಗಳನ್ನು ನಾವು 'ಪ್ರತಿಗಾಮಿ' ಎನ್ನುತ್ತೇವೆ. ಅವರು ಇತಿಹಾಸದಿಂದ ತಮ್ಮ ರಾಜಕೀಯಕ್ಕೆ ಅನುಕೂಲವಾಗುವಂಥದೇನನ್ನೋ ಹೆಕ್ಕಿ ತೆಗೆಯುತ್ತಾರೆ, ಬೇರೆ ಅಂಶಗಳಿಂದ ಅದನ್ನು ಪ್ರತ್ಯೇಕಿಸಿ ಒತ್ತುಕೊಡುತ್ತಾರೆ. ಆಗ ಮಾಹಿತಿಯನ್ನು ತಿರುಚಿದಂತಾಗುತ್ತದೆ, ವಿಶ್ಲೇಷಣೆಯಲ್ಲಿ ನ್ಯೂನತೆ ಇರುತ್ತದೆ. ಎಲ್ಲಾ ಅರ್ಧಸತ್ಯಗಳಾಗಿಬಿಡುತ್ತವೆ. ಕಮ್ಯುನಿಸ್ಟರ, ಎಲ್ಲ ಪ್ರಗತಿಪರ ಚಿಂತಕರ ಜವಾಬ್ದಾರಿ ಏನು ? ನಿಜವಾದ, ಸರಿಯಾದ, ಚರಿತ್ರೆಯನ್ನು ದಾಖಲೆಗಳ ಸಮೇತ ಕಟ್ಟಿಕೊಡುವುದು. ಇತಿಹಾಸದಲ್ಲಿ ಕೇವಲ ಒಳ್ಳೆಯದು, ಅಥವಾ ಕೇವಲ ಕೆಟ್ಟದ್ದು, ಎಂದೇನೂ ಇರುವುದಿಲ್ಲ, ಎರಡೂ ಇರುತ್ತವೆ. ನಿಷ್ಪಕ್ಷಪಾತವಾಗಿ ಅವನ್ನು ವಿಶ್ಲೇಷಿಸಿಕೊಳ್ಳಬೇಕು, ಹಿಂದಿನ ಕಾಲದ ಪ್ರಗತಿಪರ ಅಂಶಗಳನ್ನು ನಮ್ಮದಾಗಿಸಿಕೊಂಡು ಮುಂದಡಿ ಇಡಬೇಕು. ಚರಿತ್ರೆಯ ಯಾವುದೇ ಕಾಲ ಗಮನಿಸಿದರೂ ಆ ಕಾಲದ ಸೀಮಿತತೆಯು ಇದ್ದೇ ಇರುತ್ತದೆ. ಅದನ್ನು ಆ ಕಾಲದ ಜನ ಮೀರಿ ನಿಲ್ಲಲು ಆಗದು. ಅವರೂ ಒಂದೊಂದೇ ಹೆಜ್ಜೆ ಹಾಕುತ್ತಾ ಬೆಳೆದಿರುವಂಥವರು. ಆ ಹೆಜ್ಜೆಗಳು ನಮಗೆ ಪ್ರಶಸ್ತ. ಶಿವಾಜಿ ತನ್ನ ಕಾಲದ ಎಲ್ಲೆಗಳನ್ನು ಮೀರಿ ನಿಂತವನು, ಅವನ ಆಶಯಗಳು ಅಷ್ಟು ಜನಪರ ಆಗಿದ್ದಂಥವು. ಜನಗಳನ್ನು ಸಲಹುವುದರಲ್ಲಿ ಅವನ ಆಸಕ್ತಿ ಅಪಾರವಾದ್ದು.

**ಹೊ :** ನಾವಿಬ್ಬರೂ ರಾಯಗಢ, ಪ್ರತಾಪಗಢ, ಸಿಂಹಗಢ, ಎಲ್ಲಾ ನೋಡಿದ್ದೇವೆ, ನಿಮ್ಮ ಪುಸ್ತಕವೂ ನಮಗೆ ಚೆನ್ನಾಗಿ ಗೊತ್ತು. ಕೆಲ ವರ್ಷಗಳ ಹಿಂದೆ ಪುಣೆಯ ಭಂಡಾರ್ಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆಗೆ ಕೆಲವರು ನುಗ್ಗಿ ದಾಂದಲೆ ನಡೆಸಿದ್ದರು. ಅವರು ಶಿವಸೇನೆಯ ಕಾರ್ಯಕರ್ತರೆಂದು ಹೇಳಲಾಗಿತ್ತು. ಶಿವಾಜಿಯ ಬಗ್ಗೆ ಯಾರೋ ಪಾಶ್ಚಾತ್ಯ ಲೇಖಕ ಹೇಳಿದ್ದುದಕ್ಕೆ ಭಂಡಾರ್ಕರ್ ಸಂಸ್ಥೆಯ ವಿದ್ವಾಂಸರೊಬ್ಬರು ಮಾಹಿತಿ ಒದಗಿಸಿದ್ದರೆಂಬ ಆಪಾದನೆ ಕೇಳಿಬಂದಿತ್ತು. ಅದರಿಂದಾಗಿ ದಾಂದಲೆ ನಡೆದಿದ್ದಿತೆ ?

**ಪಾ :** ವಿಷಯ ಅದಲ್ಲ. ಆ ಪಾಶ್ಚಾತ್ಯ ಲೇಖಕ ಒಂದು ಮುಖ್ಯ ಅಂಶವನ್ನು ಪ್ರತಿಪಾದಿಸುವಾಗ ದಾಖಲೆ ಯಾವುದನ್ನೂ ನೀಡದೆ ಕೇವಲ ಹೇಳಿಕೆಯ ಮಾತನ್ನು ಉಲ್ಲೇಖಿಸಿದ್ದ. ಅದು ಇತಿಹಾಸಕಾರನ ಕ್ರಮವಲ್ಲ. ಆದ್ದರಿಂದಲೇ ಅವನನ್ನು ನಾನು 'ತಥಾಕಥಿತ ವಿದ್ವಾಂಸ' ಎನ್ನುತ್ತೇನೆ. ಯಾರೋ ಗುಲ್ಲೆಬ್ಬಿಸುತ್ತಾರೆ, ಊಹಾಪೋಹದ ಮಾತು ಹೇಳುತ್ತಾರೆ. ಅದು ಕೇವಲ ಪಿಸುಮಾತು. ಅದನ್ನು ಇತಿಹಾಸಕಾರ ಎಲ್ಲಿಂದ ಪಡೆದನೆಂಬುದನ್ನಾದರೂ ಹೇಳಬೇಡವೆ ? ಸುಮ್ಮನೆ 'ನಾನು ಪಿಸುಮಾತು ಕೇಳಿದ್ದೇನೆ' ಎಂದರೆ ಅದು ಇತಿಹಾಸವಾಗುವುದಿಲ್ಲ, ನಿರಾಧಾರದ ಊಹೆ ಆಗುತ್ತದೆ. ಆ ಲೇಖಕ ಪೂರ್ತಿಯಾಗಿ ಎಡವಿ ಬಿದ್ದಿದ್ದ, ಇತಿಹಾಸಕಾರನ ಶಿಸ್ತನ್ನು ಉಲ್ಲಂಘಿಸಿದ್ದ. ಆದ್ದರಿಂದ ಭಂಡಾರ್ಕರ್ ಸಂಸ್ಥೆಯ ಮೇಲಿನ ಹಲ್ಲೆ ಸರಿಯೆಂದು ನಾನು ಹೇಳುತ್ತಿಲ್ಲ. ಅವನ 'ಪಿಸುಮಾತನ್ನು' ಖಂಡಿಸಿ ಬರೆಯಬಹುದಾಗಿತ್ತು. ಆದರೆ ಸಮಕಾಲೀನ ರಾಜಕೀಯಕ್ಕೆ ಅದು ಸಾಲದಾಗಿತ್ತು, ಆದ್ದರಿಂದ ಹಲ್ಲೆ ಆಯೋಜಿಸಲಾಯಿತು.

**ಹೊ :** ಏನದು ಅಂತಹ 'ಪಿಸುಮಾತು'? ಉದ್ರೇಕಕ್ಕೆ ಕಾರಣವಾಗುವಂಥದು ?

**ಪಾ :** ಅದು ಶಿವಾಜಿಯ ಜನ್ಮದ ಬಗೆಗಿನ 'ಪಿಸುಮಾತು.'

**ಹೊ :** ಅದರ ಪರವಾಗಿ ಅಥವಾ ವಿರೋಧವಾಗಿ ಚಾರಿತ್ರಿಕ ದಾಖಲೆಗಳೇನೂ ಇಲ್ಲವೆ ?

**ಪಾ :** ದಾಖಲೆಗಳಿಲ್ಲ, ಕೇವಲ ಪಿಸುಮಾತು, ಊಹಾಪೋಹ, ಇವೆ. ಇತಿಹಾಸಕಾರನು ಅದನ್ನು ಆಧಾರವಾಗಿ ತೆಗೆದುಕೊಳ್ಳುವಂತಿಲ್ಲ. ಇರುವ ದಾಖಲೆಗಳನ್ನು ತಿರುಚಬಹುದಲ್ಲ! ಗಲಾಟೆಕೋರರು ಮೂಲ ದಾಖಲೆಗಳನ್ನು ನೋಡಹೋಗುವುದಿಲ್ಲ. ''ಯಾರೋ ಹೇಳಿದ್ದು'' ಎಂಬುದು ಇತಿಹಾಸವಲ್ಲ ಎಂಬ ಪರಿಜ್ಞಾನವು ಗಲಾಟೆಕೋರರಿಗೆ ಬೇಕಿಲ್ಲ. ಅಂಥವನ್ನು ಇತಿಹಾಸಕಾರನು ಬಳಸಲೂಬಾರದು.

**ಹೊ :** ನೀವು ಬೇರೆ ಯಾವುದಾದರೂ ಇತಿಹಾಸ ಗ್ರಂಥ ಬರೆದಿದ್ದೀರಾ ?

**ಪಾ :** ನೋಡಿ, ನಿಮ್ಮ ವಿದ್ವಾಂಸರಂತಹ ಇತಿಹಾಸಕಾರ ನಾನಲ್ಲ. ಅದನ್ನು ನನ್ನ ''ಶಿವಾಜಿ ಯಾರು ?'' ಪುಸ್ತಕದ ಪೀಠಿಕೆಯಲ್ಲಿಯೇ ಹೇಳಿದ್ದೇನೆ. ನಾನು ಇತಿಹಾಸದ ವಿದ್ಯಾರ್ಥಿ. ಈಗಾಗಲೆ ಬೇರೆಯವರು ಹೇಳಿರದಿದ್ದುದನ್ನೇನೂ ನಾನು ಹೇಳಿಲ್ಲ, ಬೇರೆಯವರಿಗೆ ಲಭ್ಯವಿರದಿದ್ದ ದಾಖಲೆ ಯಾವುದೂ ನನ್ನಲ್ಲಿಲ್ಲ. ಇದ್ದ ಮಾಹಿತಿಯನ್ನು ತರ್ಕಬದ್ಧವಾಗಿ ಜೋಡಿಸಿದ್ದೇನೆ.

**ಹೊ :** ಅಂದರೆ ಒಂದು ಸುವಿಧಾನದ ನಿರೂಪಣೆ ನಿಮ್ಮದು ಎನ್ನಬಹುದೆ ?

**ಪಾ :** ಒಂದು ರೀತಿಯಲ್ಲಿ ಅದು ನಿಜ. ಸಂಶೋಧಕರು ಆಗಲೇ ಮಾಹಿತಿಗಳನ್ನು ಕಲೆಹಾಕಿದ್ದರು. ಅವುಗಳನ್ನು ಪರಿಶೀಲಿಸಿ ವಿಶ್ಲೇಷಣೆ ಮಾಡಿದೆ, ಪುಸ್ತಕ ಬರೆದೆ. ನನ್ನ ಇನ್ನೊಂದು ಇತಿಹಾಸ ಗ್ರಂಥ ರಾಜರ್ಷಿ ಶಾಹು ಮಹಾರಾಜರನ್ನು ಕುರಿತಾದದ್ದು. ಅದೂ ಮೂರು ಆವೃತ್ತಿಗಳನ್ನು ಕಂಡಿದೆ ಮತ್ತು ವಿದ್ವಾಂಸರ ಮನ್ನಣೆ ಪಡೆದಿದೆ. ಶಾಹು ಮಹಾರಾಜರು ತೀರಿಕೊಂಡಿದ್ದು ೧೯೨೨ರಲ್ಲಿ. ಆತ ಬಹಳ ವಿನೀತ, ಸಮಾಜ ಸುಧಾರಕ. ಅಗ್ಗೆ ಆಗಲೇ ಆತ ಅಸ್ಪೃಶ್ಯತೆಯ ವಿರುದ್ಧ, ಜಾತಿ ವಿಂಗಡಣೆಯ ವಿರುದ್ಧ, ಸೊಲ್ಲೆತ್ತಿದ್ದ ಮತ್ತು ಅವುಗಳನ್ನು ಉಚ್ಚಾಟಿಸಲು ಕಾರ್ಯಕ್ರಮಗಳನ್ನು ಕೈಗೊಂಡಿದ್ದ. ನಾನು ಶಿವಾಜಿ, ಶಾಹು ಮಹಾರಾಜ, ಇಂಥವರ ಬಗ್ಗೆ ಬರೆಯುವಾಗ ಒಂದು ಉದ್ದೇಶ ಇರಿಸಿಕೊಂಡಿದ್ದೇನೆ : ಜನಸಾಮಾನ್ಯರಿಗೆ ವಿಷಯಗಳನ್ನು ತಲುಪಿಸುವುದು. ದುಡಿಯುವ ಜನಕ್ಕೆ ಮತ್ತು ರಾಜಕೀಯ-ಸಾಮಾಜಿಕ ಕಾರ್ಯಕರ್ತರಿಗೆ ಅವನ್ನು ಮನದಟ್ಟು ಮಾಡಿಕೊಡುವುದು. ನಾನು ವಿದ್ವಾಂಸರಿಗಾಗಿ ಬರೆಯುವ ವಿದ್ವಾಂಸನಲ್ಲ.

**ಹೊ :** ಅದು ನಿಮ್ಮ ಸೌಜನ್ಯದ ಮಾತು. ನಿಮ್ಮ ವಿಧಾನದಿಂದ ವಿದ್ವಾಂಸರೂ ಕಲಿಯಬಹುದಾದ್ದು ಬೇಕಾದಷ್ಟಿದೆಯಲ್ಲವೆ ? ಉದಾಹರಣೆಗೆ, ನೀವು ಅವಲಂಬಿಸುವ ಮಾಹಿತಿಯನ್ನೇ ನೋಡಿ. ವಿದ್ವಾಂಸರು ಅದನ್ನು ಗಮನಿಸಬಹುದಲ್ಲ!

**ಪಾ :** ಇರಬಹುದು ಮತ್ತು ಗಮನಿಸಿಯೂ ಇದ್ದಾರೆ. ನನ್ನ ಪುಸ್ತಕಗಳು ಸಾಮಾನ್ಯವಾಗಿ ದೀರ್ಘವಾದುವಲ್ಲ, ಎಲ್ಲಾ ನೂರು ಪುಟಗಳ ಆಸುಪಾಸಿನವು. ನನ್ನ ದೃಷ್ಟಿಯಲ್ಲಿರುವ ಓದುಗರು ದೊಡ್ಡ ಗಾತ್ರದ ಪುಸ್ತಕಗಳನ್ನು ಓದಲಾರರು. ಬೇಕಾದರೆ ಒಂದೇ ವಿಷಯವನ್ನು ವಿಭಾಗ ಮಾಡಿ ಮೂರು ಬೇರೆ ಬೇರೆ ಪುಸ್ತಕಗಳನ್ನು ಬರೆಯುತ್ತೇನೆ.

**ಹೊ :** ನಮ್ಮಲ್ಲಿ ಬೆಳಗಾವಿಯ ಕೃಷ್ಣ ಮೆಣ್ಸೆ ಎಂಬುವವರು ಜ್ಞಾನೇಶ್ವರನ ಬಗ್ಗೆ ಪುಸ್ತಕ ಬರೆದಿದ್ದಾರೆ. ನೀವು ಅಂಥದೇನಾದರೂ ಬರೆದಿರುವುದುಂಟೆ ?

**ಪಾ :** ನಾನು ಬರೆದಿಲ್ಲ, ಆದರೆ ಕೃಷ್ಣ ಮೆಣ್ಸೆ ನನಗೆ ಗೊತ್ತು. ಅವರ 'ಬಸವೇಶ್ವರನಿಂದ ಜ್ಞಾನೇಶ್ವರನವರೆಗೆ' ಎಂಬುದು ಒಳ್ಳೆಯ ಅಧ್ಯಯನ. ವಿಚಾರಪೂರಿತವಾಗಿದೆ, ವಿಶ್ಲೇಷಣಾತ್ಮಕವಾಗಿದೆ. ಇತಿಹಾಸದಲ್ಲಿ ಪ್ರಗತಿ ಪಥ ಸಾಗಿಬಂದಿರುವುದನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಇತಿಹಾಸದಲ್ಲಿ ಸಮಾನತೆಯ ವಿಷಯ ಗಮನಿಸಿ : ಇಡೀ ಸಮಾಜದಲ್ಲಿ ಸಮಾನತೆ, ಪುರುಷ- ಸ್ತ್ರೀಯರಲ್ಲಿ ಸಮಾನತೆ. ನಮ್ಮ ಸಮಾಜದಲ್ಲಿ ಶ್ರೇಣೀಕರಣವು ಹುಟ್ಟಿನಿಂದ ನಿರ್ಧಾರವಾಗುತ್ತಾ ಬಂದಿದೆ. ಬಸವ, ಜ್ಞಾನೇಶ್ವರ ಇಬ್ಬರೂ ಅದನ್ನು ಅಲ್ಲಗಳೆದರು, ವಿರೋಧಿಸಿದರು.




**ಹೊ :** ಜ್ಞಾನೇಶ್ವರ ಮಹಿಳೆಗೆ ಸಮಾನತೆ ನಿರಾಕರಿಸಿದ್ದನೆನ್ನುತ್ತಾರಲ್ಲ.

**ಪಾ :** ಸ್ವಲ್ಪಮಟ್ಟಿಗೆ ಅದು ನಿಜ, ಆದರೆ ಸ್ವೀಕಾರಾರ್ಹವಾದ ಬೇರೆ ನಿಲುವುಗಳೂ ಅವನಲ್ಲಿವೆ. ಸಾಮಾನ್ಯತಃ ಸಮಾನತೆಯನ್ನು ಪುರಸ್ಕರಿಸಿದವನು ಅವನು. ಅವನಿಗಿಂತಲೂ ಹೆಚ್ಚಾಗಿ ಶಿವಾಜಿ ಮತ್ತು ಶಾಹು ಮಹಾರಾಜ ಅದನ್ನು ಬೆಳೆಸಲು ಯತ್ನಿಸಿದ್ದರು. ಅವರಿಗೆಲ್ಲಾ ಒಂದು ಮಿತಿ ಇದೆ. ಇತಿಹಾಸವು ಹೇರಿದ ಮಿತಿ ಅದು, ಅವರ ಸಮಕಾಲೀನ ಮಿತಿಗಳು. ಅದನ್ನು ತಳ್ಳಿಹಾಕಲು ಅವರಿಗೆ ಶಕ್ಯವಿರಲಿಲ್ಲ, ಗಾಂಧೀಜಿಗೆ ಸಹ ಮಿತಿಗಳಿದ್ದುವಲ್ಲ. ಇವರೆಲ್ಲಾ ಸಾಕಷ್ಟು ಮುಂದೆ ಹೋಗುತ್ತಾರೆ, ಇತರರನ್ನು ಅವರೊಡನೆ ಕರೆದೊಯ್ಯುತ್ತಾರೆ. ಆದರೆ ಮಿತಿಯನ್ನು ಸಂಪೂರ್ಣವಾಗಿ ಮೀರಲಾಗುವುದಿಲ್ಲ, ಹಾಗೆ ಮಾಡಹೋದಾಗ ಬೇಗ ನಿರರ್ಥಕವಾಗಿಬಿಡುತ್ತಾರೆ. ಜನರ ಪ್ರಜ್ಞಾವಲಯ ಹಿಗ್ಗಿಸುತ್ತಾ ಹೆಜ್ಜೆ ಹಾಕಬೇಕಾದ್ದು ಅನಿವಾರ್ಯ.

**ಹೊ :** ನಾವಿಬ್ಬರೂ ಹಿಂದೊಮ್ಮೆ ಜ್ಞಾನೇಶ್ವರರ ಆಳಂದಿಗೆ ಹೋಗಿದ್ದೆವು.

**ಪಾ :** ಹೌದೆ ? ಬಹಳ ಒಳ್ಳೆಯ ಜಾಗ. ಈಗ ಅಲ್ಲೂ ವ್ಯಾಪಾರೀಕರಣದ ಭರಾಟೆ.

– ಇಷ್ಟು ಮಾತುಕತೆಯಾಗಿದ್ದಾಗ ಪೂರ್ವನಿಶ್ಚಿತವಾದ ಕಾರ್ಯಕ್ರಮದಂತೆ ಪಾನ್ಸರೆಯವರ ಸಂದರ್ಶನಕ್ಕೆ ದೂರದರ್ಶನ ಮಾಧ್ಯಮದವರು ಬಂದಿದ್ದರಿಂದ ಸಂದರ್ಶನ ಸ್ವಲ್ಪ ಕಾಲ ಸ್ಥಗಿತಗೊಂಡಿತು. ''ನೀವೇನೂ ಹೊರಗೆ ಹೋಗುವುದು ಬೇಡ, ಕುಳ್ಳಿರಿ'' ಎನ್ನುತ್ತಾ ಟಿ.ವಿ.ಯವರಿಗೆ ಸಂದರ್ಶನ ನೀಡಿದರು. ವಿಷಯ : ಶಾಹು ಮಹಾರಾಜರಿಗೆ ಒಂದು ಸೂಕ್ತ ಸ್ಮಾರಕದ ನಿರ್ಮಾಣ ಕುರಿತಂತೆ ಉದ್ಭವಿಸಿದ್ದ ಭಿನ್ನಾಭಿಪ್ರಾಯ. ಕೊಲ್ಹಾಪುರದಲ್ಲಿ ಶಾಹು ಮಹಾರಾಜರ ವಂಶಸ್ಥರು ಅಧಿಕಾರದಲ್ಲಿಲ್ಲ, ಆದರೆ ಅವರಿಗೆ ಸೇರಿದ ಭೂಮಿ ಇದೆ. ಅಲ್ಲಿ ಸ್ಮಾರಕ ನಿರ್ಮಿಸಬೇಕೆಂದು ಪುರಸಭೆ ಮತ್ತು ಸರ್ಕಾರ ತೀರ್ಮಾನಿಸಿವೆ. ಎಂತಹ ಸ್ಮಾರಕ ಆದಾಗಿರಬೇಕು ಎಂಬುದು ಜಿಜ್ಞಾಸೆ. ಬಡವರಿಗೆ ವಸತಿಗೃಹಗಳ ನಿರ್ಮಾಣ ಮಾಡೋಣ, ಕೊಲ್ಹಾಪುರದಲ್ಲಿ ಬಟ್ಟೆ ಗಿರಣಿಗಳಿದ್ದವಾದ್ದರಿಂದ ಗಿರಣಿ ಪಾರ್ಕ್ ಮಾಡೋಣ, ಯಾವುದೂ ಬೇಡ – ಬದಲಾಗಿ ಒಂದು ಕಲಾತ್ಮಕ ಸ್ಮಾರಕ ನಿರ್ಮಿಸೋಣ, ಹೀಗೆ ಬೇರೆ ಬೇರೆ ಸೂಚನೆಗಳು ಬಂದಿವೆ. ಆ ಬಗ್ಗೆ ಪಾನ್ಸರೆ ಏನು ಹೇಳುತ್ತಾರೆಂಬುದು ಟಿ.ವಿ. ವರದಿಗಾರರ ಸಂದರ್ಶನದ ಉದ್ದೇಶ. ''ಮೂರನ್ನೂ ಮಾಡಬಹುದು, ಅಲ್ಲಿ ಅಷ್ಟು ಭೂಮಿ ಇದೆ'' ಎಂದರು ಪಾನ್ಸರೆ. ಆಮೇಲೆ ಅವರು ಹೇಳಿದ್ದಿದು : ''ಅತ್ಯಂತ ಉತ್ತಮ ಸ್ಮಾರಕ ಇದಾವುದೂ ಅಲ್ಲ, ಅವರ ಸಾಮಾಜಿಕ ದೃಷ್ಟಿ ಇದ್ದಿತಲ್ಲ, ಅದನ್ನು ವ್ಯಾಪಕವಾಗಿ ಪರಿಚಯಿಸುವುದು, ಅವರ ಆಶಯದ ಪೂರೈಕೆಯತ್ತ ಮುನ್ನಡೆಯುವುದು, ಅದು ಉತ್ತಮ ಸ್ಮಾರಕ. ಅವರ ವಿಚಾರಗಳು ನಮಗೆ ಮುಖ್ಯ. ಅದಿಲ್ಲದೆ ಕೇವಲ ಸ್ಮರಣೆ ಯಾವ ಪುರುಷಾರ್ಥಕ್ಕೆ ?'' ಟಿ.ವಿ. ಮಾಧ್ಯಮದವರ ನಿರ್ಗಮನದ ನಂತರ 'ಹೊಸತು' ಸಂದರ್ಶನ ಮುಂದುವರಿಯಿತು.

**ಹೊ :** ಈ ಸಂಬಂಧ ಮುಂಬೈಯಲ್ಲಿ ಬಾಳ ಠಾಕ್ರೆಗೆ ಸ್ಮಾರಕ ನಿರ್ಮಾಣದ ಪ್ರಶ್ನೆ ಬಂದಿದೆಯಲ್ಲ, ಶಿವಾಜಿ ಪಾರ್ಕ್‌ನಲ್ಲೇ ಆಗಬೇಕಂತೆ. ಅಲ್ಲೇ ಶಿವಸೇನೆಯವರು ಠಿಕಾಣಿ ಹೂಡಿದ್ದಾರೆ. ನಿಮ್ಮ ಅಭಿಪ್ರಾಯವೇನು ?

**ಪಾ :** ಅದೊಂದು ಅರ್ಥವಿಲ್ಲದ ವಿವಾದ. ಕ್ಷುದ್ರ ರಾಜಕೀಯದ ಪ್ರಸಂಗ. ಅಲ್ಲಿಂದ ಹೊರ ಹೋಗಲು ಈಗ ಶಿವಸೇನೆ ಸಮ್ಮತಿಸಿದೆ. ಶಿವಸೇನೆಯೊಳಗೆ ಭಿನ್ನಾಭಿಪ್ರಾಯಗಳಿವೆ. ಉದ್ಧವ ಮತ್ತು ರಾಜ್ ಠಾಕ್ರೆ ನಡುವಣ ಭಿನ್ನಾಭಿಪ್ರಾಯವಷ್ಟೇ ಅಲ್ಲ, ಉದ್ಧವ ಮತ್ತು ಮನೋಹರ ಜೋಶಿ ನಡುವೆ ತಿಕ್ಕಾಟವಿದೆ. ಅದರ ಪ್ರತಿಫಲನ ಈ ಸ್ಮಾರಕದ ರೂಪದಲ್ಲಿ ಬಂದಿದೆ.

– ಈ ವೇಳೆಗೆ ಕಮ್ಯುನಿಸ್ಟ್ ಪಕ್ಷದ ಪ್ರಕಾಶನ ಮತ್ತು ಮಾರಾಟದ ಮಳಿಗೆಯವರು ಪಾನ್ಸರೆಯವರ ಸಲಹೆ ಪಡೆಯಲು ಬಂದರು. ಪುಸ್ತಕಗಳ ಯಾದಿಯನ್ನು ತಯಾರಿಸಬೇಕಾದ್ದು ಹೇಗೆಂದು ಪಾನ್ಸರೆಯವರು ಅವರಿಗೆ ವಿವರಿಸಿ, ಎಲ್ಲ ಯಾದಿಯನ್ನೂ ಎರಡು ದಿನಗಳಲ್ಲಿ ಸಿದ್ಧಗೊಳಿಸಬೇಕೆಂದು ಸೂಚಿಸಿದರು. ಅವರ ನಿರ್ಗಮನದ ಬಳಿಕ ಸಂದರ್ಶನ ಮುಂದುವರಿಯಿತು.

**ಪಾ :** ಹ್ಞಾಂ, ಏನು ಹೇಳುತ್ತಿದ್ದೆ : ಉದ್ಧವ-ಮನೋಹರ ವಿವಾದ ಅಲ್ಲವೆ ? ಅದಿನ್ನೂ ಮುಂದುವರಿಯುವುದಿದೆ. ಇದೇ ಇವರಿಗೆ ರಾಜಕೀಯ ! ನೋಡಿದಿರಲ್ಲ, ಶಾಹು ಮಹಾರಾಜರ ಸ್ಮಾರಕದ ವಿಷಯ. ಏನು ಬೇಕೆಂಬುದರ ತಿಳಿವಳಿಕೆ ಅವರಾರಿಗೂ ಬೇಡ. ಶಾಹು ವಿಚಾರಗಳು ಅವರಿಗೆ ಗೌಣ. ವಿಚಾರಗಳ ಪ್ರಸಾರ, ಗಟ್ಟಿಗೊಳಿಸುವಿಕೆ, ಅದಕ್ಕೆ ಸಾಂಸ್ಥಿಕ ಏರ್ಪಾಡು, ಇವುಗಳತ್ತ ಅವರ ಗಮನ ತೀರಾ ಕಡಿಮೆ. ಆಗ ಯಾವ ತತ್ತ್ವದ ಪ್ರಚಾರ ಆದೀತು !

**ಹೊ :** ಶಾಹು ಮಹಾರಾಜರ ಬಗ್ಗೆ ಶಿವಾಜಿ ವಿಶ್ವವಿದ್ಯಾನಿಲಯದ್ದೇನಾದರೂ ಯೋಜನೆಯುಂಟೆ ?

**ಪಾ :** ಇದೆ, ಒಳ್ಳೆಯ ಕೆಲಸ ನಡೆದಿದೆ. ಡಾ|| ಸಂಘ್ವಿ ಅರ್ಥಶಾಸ್ತ್ರದ ಪ್ರಾಧ್ಯಾಪಕರು. ಅವರು ಶಾಹು ಮಹಾರಾಜರ ಮತ್ತು ಅವರ ಕಾಲದ ಎಲ್ಲ ದಸ್ತಾವೇಜುಗಳನ್ನೂ ಸಂಗ್ರಹಿಸಿ ಹಲವು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಎಲ್ಲವೂ ಮೂಲದಲ್ಲಿರುವ ದಸ್ತಾವೇಜುಗಳು, ಉಪಯುಕ್ತವಾದುವು.

**ಹೊ :** ಶಾಹು ಮಹಾರಾಜರು ಭೂ ಸುಧಾರಣೆ ಕಾರ್ಯಕ್ರಮವನ್ನೇನಾದರೂ ಇರಿಸಿಕೊಂಡಿದ್ದರೆ ?

**ಪಾ :** ಹೌದು, ಆ ಯೋಜನೆ ಶಿವಾಜಿ ಕಾಲದಿಂದ ಬಂದಿದ್ದು. ಆಗ್ಗೆ ಪೂರ್ತಿ ಕಾರ್ಯಗತವಾಗಲಿಲ್ಲ.

**ಹೊ :** ಮಾರ್ಕ್ಸ್‌ವಾದಿ ತತ್ತ್ವಶಾಸ್ತ್ರದ ವಿಷಯಕ್ಕೆ ಬರೋಣ.

**ಪಾ :** ಆಗಬಹುದು. ಅದನ್ನು ಕುರಿತು ನೀವೇ ಹೇಳಿ. ದೇವಿಪ್ರಸಾದ ಚಟ್ಟೋಪಾಧ್ಯಾಯರ ಸ್ನೇಹಿತರು ನೀವು ಎಂದಿರಿ. 'ಲೋಕಾಯತ'ವನ್ನು ಕನ್ನಡಕ್ಕೆ ತಂದಿದ್ದೀರಿ. ಹೇಗೆ ಮಾಡಿದ್ದೀರಿ ?

**ಹೊ :** ಅದು ಪದಶಃ ಅನುವಾದವಲ್ಲ. ಹಾಗೆ ಮಾಡಿದ್ದರೆ ಅದು ೮೫೦ ಪುಟಗಳಾಗಿಬಿಡುತ್ತಿತ್ತು. ಈಗ ೪೬೦ ಪುಟಗಳಷ್ಟಿವೆ. ದೇವಿಪ್ರಸಾದರು ನೀಡುವ ಮಾಹಿತಿಯಲ್ಲಿ ಏನನ್ನೂ ಬಿಡದೆ, ಅವರ ವಾದದ ಮೊನಚನ್ನು ಕಳೆದುಕೊಳ್ಳದೆ, ಸಂಗ್ರಹವಾಗಿ ಅನುವಾದಿಸಲು ಯತ್ನಿಸಿದ್ದೇನೆ. ಉದ್ಧೃತ ಭಾಗಗಳನ್ನು ಮೊಟಕುಗೊಳಿಸಿದ್ದೇನೆ, ಪುನರಾವರ್ತನೆಯನ್ನು ಕಡಿಮೆ ಮಾಡಿದ್ದೇನೆ.

**ಪಾ :** ನನ್ನ ಇಂಗಿತವೇನೆಂದರೆ, ಆತಂಕವೆಂದರೂ ಆದೀತು, ಭಾರತದಲ್ಲಿ ಮಾರ್ಕ್ಸ್‌ವಾದಿಗಳು ಸರಿಯಾಗಿ ಇನ್ನೂ ಲೆಕ್ಕ ಚುಕ್ತಾ ಮಾಡಿಕೊಂಡಿಲ್ಲ, ಎಂಬುದು. ನಮ್ಮ ಪರಂಪರೆಯ ಪರಾಮರ್ಶೆಯನ್ನು ನಾವು ಸಾಕಷ್ಟು ಮಾಡಿಕೊಂಡಿಲ್ಲ, ಹಾಗೆಂದರೇನು ? ಬಸವೇಶ್ವರರನ್ನೇ ತೆಗೆದುಕೊಳ್ಳಿ. ಪರಂಪರೆಯಲ್ಲಿ ಪ್ರಗತಿ ತತ್ವಕ್ಕೆ ಅವರ ಕಾಣಿಕೆ ಏನು ಮತ್ತು ಎಷ್ಟು? ಅದನ್ನು ವಿವರವಾಗಿ ತಿಳಿದಿದ್ದೇವೆಯೆ ಮತ್ತು ತಿಳಿದಿದ್ದನ್ನು ದುಡಿಯುವ ಜನರಿಗೆ ಮುಟ್ಟಿಸಿದ್ದೇವೆಯೆ ? ಸಂಪ್ರದಾಯವಾದಿಗಳು ಮಾಡುವುದನ್ನು ಪಕ್ಕಕ್ಕಿಡಿ, ಅವರಿಗೆ ಬಸವಣ್ಣನ ವಿಚಾರ ಬೇಕಿಲ್ಲ; ಅವನ ಮೂರ್ತಿ ಅವರಿಗೆ ಸಾಕು. ಅದಕ್ಕೆ ಪರ್ಯಾಯವನ್ನು ನೀಡುವ ಕೆಲಸ ನಡೆಯಬೇಕು. ಪರಂಪರೆಯನ್ನು ಅರ್ಥೈಸುವಾಗ ಎರಡು ಮಾರ್ಗಗಳೂ ಕಂಡುಬಂದಿವೆ : ಒಂದು, ಎಲ್ಲವೂ ಸುಂದರವಾಗಿತ್ತೆಂದು ಹೇಳಿ ಶ್ಲಾಘಿಸುವುದು; ಇನ್ನೊಂದು, ಎಲ್ಲವೂ ಕಳಪೆಯದಾಗಿತ್ತೆಂದು ಉಪೇಕ್ಷಿಸುವುದು. ಎರಡೂ ಸರಿಯಲ್ಲ. ಪೂರ್ತಿ ಸುಂದರ ಅಥವಾ ಪೂರ್ತಿ ಕಳಪೆ ಎಂಬುದು ಅಶಕ್ಯ, ಏಕೆಂದರೆ ಸಮಾಜದಲ್ಲಿ ಅವುಗಳ ಮಿಶ್ರಣವಿರುತ್ತದೆ. ನಮ್ಮ ಇತಿಹಾಸದಲ್ಲಿನ ಪ್ರಗತಿಪರ ಚಿಂತನೆಯನ್ನು ತಿಳಿಯಬೇಕು ಮತ್ತು ತಿಳಿಸಬೇಕು. ಬದಲಾವಣೆಗೆ ಅದು ಸಾಧನ. ನಾನು ಹಿಂದೆ ನಮ್ಮ ಸಂಗಾತಿಗಳನ್ನು ತಮಾಷೆ ಮಾಡುತ್ತಿದ್ದೆ: ''ನಮ್ಮ ದೇಶದ ಚರಿತ್ರೆಗಿಂತಲೂ ಹೆಚ್ಚು ನಿಮಗೆ ಸೋವಿಯೆತ್ ಒಕ್ಕೂಟದ ಚರಿತ್ರೆ ಗೊತ್ತು'' ಎಂದು.

**ಹೊ :** ಕಮ್ಯುನಿಸ್ಟರಿಗೆ ರಾಷ್ಟ್ರೀಯ ವಿದ್ಯಮಾನಗಳಿಗಿಂತಲೂ ಅಂತರರಾಷ್ಟ್ರೀಯ ವಿದ್ಯಮಾನಗಳು ಹೆಚ್ಚು ಗೊತ್ತು ಎಂದ ಹಾಗೆ. ಈಗ ನಮ್ಮ ಮಾಧ್ಯಮಗಳಲ್ಲಿ ಭಾರತಕ್ಕಿಂತಲೂ ಅಮೆರಿಕಾ ಹೆಚ್ಚು ಶೋಭಿಸುತ್ತಿದೆಯಲ್ಲ!

**ಪಾ :** ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ತಿಳಿಯಬೇಕಾದ್ದು ಅವಶ್ಯಕ. ಅವು ದೇಶದ ಮತ್ತು ಸ್ಥಳೀಯ ವಿದ್ಯಮಾನಗಳನ್ನು ಪ್ರಭಾವಿಸುತ್ತವೆ. ಆದರೆ ಶಿಕ್ಷಣದ ತತ್ತ್ವಶಾಸ್ತ್ರ ಯಾವುದು ? ತಿಳಿದಿರುವುದನ್ನು ಹಿಡಿದು ತಿಳಿಯದಿರುವುದರತ್ತ ಹೋಗುವುದು. ಮಾರ್ಕ್ಸ್ ಮತ್ತು ಏಂಗೆಲ್ಸ್ ಅವರ ಹಿಂದಿನವರಿಂದ ಎಷ್ಟೊಂದು ಪಡೆದುಕೊಂಡರು, ನೋಡಿ. ಮೂರ್ತದಿಂದ ಅಮೂರ್ತಕ್ಕೆ ಹೋಗಲು ಆ ತಿಳಿವಳಿಕೆ ಬೇಕು. ಸಾಮಗ್ರಿಯ ಸಂಗ್ರಹಣೆ, ಅದರ ವಿಶ್ಲೇಷಣೆ ಮತ್ತು ತಮ್ಮೂಲಕ ಮುನ್ನಡೆ. ಇದು ಇತಿಹಾಸದ ಗತಿ. ವಿಚಾರಗಳನ್ನು ವಿದ್ಯಮಾನಗಳಿಂದ ಖಚಿತ ಮಾಡಿಕೊಳ್ಳುವ ಪದ್ಧತಿ ಇದು.

**ಹೊ :** ಅದೆಲ್ಲಾ ಸರಿ, ಆದರೆ ಬಸವಣ್ಣನಂಥವರನ್ನು ವೈಭವೀಕರಿಸಿಬಿಡುತ್ತಾರೆ. ಅವರದು ಅತ್ಯಂತ ಕ್ರಾಂತಿಕಾರಿ ಯುಗ, ಎಲ್ಲವನ್ನೂ ಆಗ್ಗೆ ಸಾಧಿಸಲಾಯಿತು, ಇತ್ಯಾದಿ. ಆದರೆ ಅದು ನಿಜವಲ್ಲ. ಪ್ರಾಯೋಗಿಕವಾಗಿ ಅವರಿಗೆ ಮುಗ್ಗಟ್ಟುಗಳು ಇದ್ದೇ ಇದ್ದವು. ಆಶಯ ಅಗಾಧವಾಗಿತ್ತು, ಆದರೆ ಕಾರ್ಯಗತಗೊಳ್ಳಲು ಚಾರಿತ್ರಿಕವಾಗಿ ಪ್ರತಿಬಂಧಕ ವ್ಯವಸ್ಥೆ ಇದ್ದಿತು.

**ಪಾ :** ಆದ್ದರಿಂದ ಅರ್ಥೈಸುವಿಕೆ ಮತ್ತು ಬದಲಾವಣೆ ಬೇರೆ ಬೇರೆಯಾದರೂ ಮೊದಲನೆಯದರ ಅಭಾವದಲ್ಲಿ ಎರಡನೆಯದು ಸಿದ್ಧಿಸುವುದಿಲ್ಲ ಎಂದರ್ಥ. ನಮ್ಮ ಸಮಾಜವನ್ನು ಪೂರ್ಣವಾಗಿ ತಿಳಿದುಕೊಳ್ಳುವುದು ಮೊದಲ ಕೆಲಸ. ಅಸಮಾನತೆ, ವರ್ಣಭೇದ, ಇವುಗಳ ಬಗ್ಗೆ ನಮಗಿಂತಲೂ ಮುಂಚೆ ಅನೇಕರು ಆಳವಾದ ಕಾಳಜಿ ವ್ಯಕ್ತಪಡಿಸಿದ್ದಾರೆ. ಬ್ರಾಹ್ಮಣರಲ್ಲದ ಹತ್ತಾರು ಸಂತರು (ನಾಮದೇವ, ಇತ್ಯಾದಿ) ಮಹಾರಾಷ್ಟ್ರದಲ್ಲಿ ಆಗಿಹೋಗಿದ್ದಾರೆ. ಅವರು ಕಮ್ಯುನಿಸ್ಟರಲ್ಲ, ಆದರೆ ತಮ್ಮ ಕಾಲದ ಮಿತಿಯನ್ನು ಮೀರಿ ಚಿಂತಿಸಿದವರು, ಕ್ರಿಯಾಶೀಲರಾದವರು. ಅವರ ವಿಚಾರಗಳನ್ನು ಸಂಗ್ರಹಿಸಿ, ಶ್ರೀಮಂತಗೊಳಿಸಿ, ಮುಂದಕ್ಕೆ ಬೆಳೆಸಬೇಕು. ನೀವೆಲ್ಲಾ ಮಾಡಬೇಕಾದ ಕೆಲಸ ಅದು. ಒಟ್ಟಿನಲ್ಲಿ ನಮ್ಮ ನೈಜ ಪ್ರಜಾಪ್ರಭುತ್ವಕ್ಕಾಗಿ ಚಳುವಳಿ ಮುಂದುವರಿಯಬೇಕು.

**ಹೊ :** ರಾಜಕೀಯ ಮೈತ್ರಿ, ಹೊಂದಾಣಿಕೆ, ಇವು ದಿನನಿತ್ಯದ ಘೋಷಣೆಗಳು. ನಿಮ್ಮ ನಿಲುವೇನು ?

**ಪಾ :** ಜಂಟಿ ರಂಗ, ಸಂಯುಕ್ತ ರಂಗ, ಇವುಗಳ ಹಿಂದಿನ ಮೂಲ ವಿಚಾರ ಬೇರೆ ಬೇರೆ ಪಕ್ಷಗಳ ನಾಯಕರು ಒಂದು ರಂಗ ರಚಿಸಿಕೊಳ್ಳುವುದಲ್ಲ. ಬೇರೆ ಬೇರೆ ವರ್ಗದ ಜನ ಮತ್ತು ಸಮಾಜದ ವಿಭಿನ್ನ ವಿಭಾಗಗಳು ಜಂಟಿಯಾಗಿ ಕಾರ್ಯಕ್ರಮ ಹಾಕಿಕೊಂಡು ಹೋರಾಡುವುದು ಮೂಲ ಆಶಯ. ನಮ್ಮ ಇಂದಿನ ಪ್ರಜಾಪ್ರಭುತ್ವದಲ್ಲಿ ''ಸಂಖ್ಯೆಗಳ ಆಟ'' ಮುಖ್ಯವಾಗಿ ಹೋಗಿದೆ. ಆದ್ದರಿಂದ ಇತರರನ್ನು ಸೆಳೆದುಕೊಳ್ಳುವ



ಪ್ರಕ್ರಿಯೆ, ಚುನಾವಣೆ ಸಂದರ್ಭದಲ್ಲಿ ಶಾಸಕರ ಮಂಗಾಟದ ನೆಗೆತಗಳು, ಎಲ್ಲಾ ಹೆಚ್ಚುತ್ತವೆ. ನಿಜಕ್ಕೂ ಸಂಯುಕ್ತರಂಗ ಆಗಬೇಕಾಗಿರುವುದು ಕೃಷಿಕರ ಮತ್ತು ಕಾರ್ಮಿಕ ವರ್ಗದ ಭಾಗವಹಿಸುವಿಕೆಯಿಂದ. ಜೊತೆಗೆ ದುಡಿಯುವ ಮಧ್ಯಮ ವರ್ಗ. ನಮ್ಮ ರಾಜಕೀಯ ಪಕ್ಷಗಳು ಚಾರಿತ್ರಿಕವಾಗಿ ಈ ನೆಲೆಯಲ್ಲಿ ರೂಪುಗೊಂಡಿಲ್ಲ. ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲರೂ ಧುಮುಕಿದ್ದರು, ವರ್ಗದ ಪ್ರಶ್ನೆ ಬರಲಿಲ್ಲ. ಆಮೇಲೂ ಬಾರದಿದ್ದುದು ನ್ಯೂನತೆಯೇ ಸರಿ. ಯಾವ ಪಕ್ಷವೂ ನಿರ್ದಿಷ್ಟವಾಗಿ ಒಂದು ಸಮಾಜ ವಿಭಾಗವನ್ನು ಪ್ರತಿನಿಧಿಸುತ್ತಿಲ್ಲ. ಸ್ವಾತಂತ್ರ್ಯಾ ನಂತರ ಅಭಿವೃದ್ಧಿಯ ಪ್ರಶ್ನೆ ಬಂದಾಗ ಇದಾಗಬೇಕಾಗಿತ್ತು. ಈಗೇನಾಗಿದೆ ? ವಿವಿಧ ವಿಭಾಗಗಳ ಆಕಾಂಕ್ಷೆಗಳು ಬೇರೆ ಬೇರೆ, ಆದ್ದರಿಂದ ಎಲ್ಲರೂ ಒಂದು ದಿಕ್ಕಿನಲ್ಲಿ ಮುನ್ನಡೆ ಯುವುದಿಲ್ಲ. ಸಂಯುಕ್ತರಂಗಗಳ ನಾಯಕರು ಇದನ್ನು ಅರಿತುಕೊಳ್ಳಬೇಕು. ನಮ್ಮ ಹೋರಾಟಗಳು ಗ್ರಾಮಾಂತರ ಪ್ರದೇಶದ ಎಲ್ಲ ದುಡಿಯುವವರನ್ನೂ ಒಂದೆಡೆ ಸೇರ್ಪಡೆ ಗೊಳಿಸಿವೆಯೆ ? ''ಕಿಸಾನ್ ಸಭಾ''ಗಳು ಎಷ್ಟಿವೆ ? ಉದ್ದೇಶ ಸರಿ, ಆದರೆ ಸ್ವರೂಪ ಉತ್ತಮವಾಗಬೇಕು.

**ಹೊ :** ಈಚೆಗೆ ಮುಂಬೈಯಲ್ಲಿ ಎ.ಐ.ಟಿ.ಯು.ಸಿ. ರಾಷ್ಟ್ರೀಯ ಸಮ್ಮೇಳನ ಜರುಗಿತು. ಅಲ್ಲಿ ಗುರುದಾಸ್ ದಾಸ್‌ಗುಪ್ತ ಹೇಳಿದರು, ''ನಾನು ಮಾರ್ಕ್ಸ್‌ವಾದಿ, ಆದರೆ ಎ.ಐ.ಟಿ.ಯು.ಸಿ. ಮಾರ್ಕ್ಸ್‌ವಾದಿಯಲ್ಲ'' ಎಂದು. ಹಾಗೆಂದು ''ನ್ಯೂ ಏಜ್'' ವಾರಪತ್ರಿಕೆ ವರದಿ ಮಾಡಿತ್ತು. ಎಲ್ಲ ಸಂಘಟನೆಗಳೂ ಒಂದೆಡೆ ಸೇರಬೇಕೆಂಬ ಕಾತುರತೆ ಯಿಂದ ಅವರು ಹಾಗೆಂದರೇನೊ ! ಜೊತೆಯಾಗುವಾಗ ಸ್ವಂತಿಕೆಯನ್ನು ತೊರೆಯಬೇಕೆ ?

**ಪಾ :** ದಾಸ್‌ಗುಪ್ತ ಹಾಗೆಂದು ಹೇಳಿದ್ದು ನನಗೆ ತಿಳಿಯದು. ಹೇಳಿದ್ದರೆ ಅದು ಸಮರ್ಥನೀಯವಲ್ಲ. ಅದು ತಪ್ಪು ಸರಳೀಕರಣ, ಕೆಟ್ಟ ಅಭಿಪ್ರಾಯ. ಅದು ಇಂಟಕ್‌ನ ಸಂಜೀವ ರೆಡ್ಡಿ ಮತ್ತು ಐಟಕ್‌ನ ದಾಸ್‌ಗುಪ್ತ ಜೊತೆಗೂಡುವ ಸಮಾಚಾರವಲ್ಲ. ಅಲ್ಲಿ ಅಂಜುವಿಕೆ ಮತ್ತು ದೈನ್ಯತೆ ಅನಗತ್ಯ. ಬೇರೆ ರಾಜಕೀಯ ಪಕ್ಷಗಳ ದೃಷ್ಟಿ ಏನೇ ಇರಲಿ, ಮಾರ್ಕ್ಸ್‌ವಾದಿಗಳು ದುಡಿಯುವ ವರ್ಗದ ಐಕ್ಯತೆಗೆ ಒತ್ತುಕೊಡುವಂಥವರು. ಕಡೆಗೆ, ಕ್ರಾಂತಿ ಮಾಡುವವರು ಯಾರು ? ಸಂಜೀವ ರೆಡ್ಡಿಯೋ ಅಥವಾ ದುಡಿಯುವ ವರ್ಗವೋ ? ಹಾದಿ ತೋರುವವರು ಹತ್ತು ಜನ ಇರಬಹುದು, ಆದರೆ ಕ್ರಾಂತಿ ಮಾಡುವವರು ಈ ವರ್ಗದವರೇ.

**ಹೊ :** ಹಾಗಿದ್ದರೆ ''ನಾವು ಈ ವರ್ಗದವರು, ನಮ್ಮೊಟ್ಟಿಗೆ ಬನ್ನಿ'' ಎಂದೇಕೆ ಕರೆ ನೀಡುವುದಿಲ್ಲ?

**ಪಾ :** ಒಟ್ಟುಗೂಡಿಸುವವರು ಮಾರ್ಕ್ಸ್‌ವಾದಿಗಳು, ಏಕೆಂದರೆ ಸಮಾಜದ ಬದಲಾವಣೆ ಅವರ ಆಕಾಂಕ್ಷೆ. ಬದಲಾವಣೆಗೆ ಎಲ್ಲ ದುಡಿಯುವ ಜನರ ಭಾಗವಹಿಸುವಿಕೆ ಬೇಕು. ಅದಕ್ಕಾಗಿ ವಿಚಾರ ಮಂಥನ, ಸಂಯುಕ್ತ ಹೋರಾಟ, ಎಲ್ಲಾ ಅಗತ್ಯ. ಭಾರತೀಯ ಜನತಾ ಪಕ್ಷವೂ ಸೇರಿದಂತೆ ಹನ್ನೊಂದು ಕಾರ್ಮಿಕ ಸಂಘಟನೆಗಳು ಏಕತ್ರ ಸೇರುವುದು ಮಹತ್ವದ ಸಂಗತಿ. ಹೋರಾಟವು ಕೇವಲ ಕಾರ್ಖಾನೆಗಳ ಕೆಲಸಗಾರರಿಗೋಸ್ಕರ ಅಲ್ಲ. ಕೇಂದ್ರ ಸರ್ಕಾರದ ಆರ್ಥಿಕ ನೀತಿಯು ಕೃಷಿಕರನ್ನು ತಟ್ಟಿದೆ, ಅಸಂಘಟಿತ ಕಾರ್ಮಿಕರನ್ನು ತಟ್ಟಿದೆ. ಹೋರಾಟವು ಆ ನೀತಿಯ ವಿರುದ್ಧವಾದ್ದು, ರೈತರ ಆತ್ಮಹತ್ಯೆಯ ವಿರುದ್ಧವಾಗಿ ಹೋರಾಟವೆಂದರೆ ಆತ್ಮಹತ್ಯೆಗೆ ತಳ್ಳುತ್ತಿರುವ ನೀತಿಯ ವಿರುದ್ಧವಾದ್ದೇ. ಇಂದಿನ ಸನ್ನಿವೇಶದಲ್ಲಿ ಇದು ಪ್ರಮುಖ ಅಂಶ, ಆದ್ದರಿಂದ ಸಂಘಟನೆಗಳ ಒಗ್ಗೂಡುವಿಕೆ ಸ್ವಾಗತಾರ್ಹ.

**ಹೊ :** ತಮ್ಮ ವಯಸ್ಸೆಷ್ಟು ?

**ಪಾ :** ೭೯ ಮುಗಿದಿದೆ, ನಿಮಗಿಂತ ಹೆಚ್ಚು ವಯಸ್ಸಿನವನು.

**ಹೊ :** ಕೇವಲ ವಯಸ್ಸಿನಲ್ಲಿ ಹೆಚ್ಚಲ್ಲ, ನೀವು ಬಹಳ ಎತ್ತರಕ್ಕೆ ಬೆಳೆದ ವ್ಯಕ್ತಿ.

**ಪಾ :** ನನಗೆ ೭೫ ಆದಾಗ ಅಭಿನಂದನೆ ಹೇಳಲು ಸಮಾರಂಭ ಏರ್ಪಡಿಸುವ ಯೋಜನೆ ಹಾಕಿಕೊಂಡಿದ್ದರು. ನಾನು ಒಲ್ಲೆನೆಂದೆ, ಆದರೆ ತಗಾದೆ ಜೋರಾಗಿತ್ತು, ನಾನು ಹೇಳಿದೆ, ''ನನ್ನದೆಂಬುದೇನೂ ಇಲ್ಲ, ನನ್ನ ಸಾಧನೆ ಯೆಲ್ಲಾ ಜನರ ಭಾಗವಹಿಸುವಿಕೆಯಿಂದ ಫಲಿಸಿದ್ದು. ಆದ್ದರಿಂದ ಒಂದು ಕೆಲಸ ಮಾಡೋಣ. ಮಹಾರಾಷ್ಟ್ರದ ಎಲ್ಲ ಭಾಗಗಳಿಂದ ಅತಿಸಾಮಾನ್ಯ ಹೋರಾಟಗಾರರನ್ನು ಗುರುತಿಸಿ ಅವರ ಪರಿಚಯ ಮಾಡಿಕೊಡುವ ೧೦೦ ಪುಸ್ತಕಗಳನ್ನು ಪ್ರಕಟಿಸೋಣ. ಅವರನ್ನು ಅಭಿನಂದಿಸಿದ ನಂತರ ನನಗೆ ಅಭಿನಂದನೆ, ಅಷ್ಟೆ. ಆ ಪುಸ್ತಕಗಳೇ ನನಗೆ ಅಭಿನಂದನೆ,'' ಎಂದು. ಒಟ್ಟು ೧೫೦ ಅಂತಹ ಪುಸ್ತಕಗಳನ್ನು ಹೊರತಂದೆವು. ಎಷ್ಟೋ ಮಂದಿಯ ಹೆಸರುಗಳು ಬೇರೆ ವಿಭಾಗಗಳಲ್ಲಿ ಪರಿಚಿತವಿರಲಿಲ್ಲ, ಆದರೆ ಅವರಿಲ್ಲದೆ ಪಕ್ಷವು ಏನನ್ನು ಸಾಧಿಸಬಹುದಿತ್ತು! ಪುಸ್ತಕಗಳಿಗಾಗಿ ೨೫ ಲಕ್ಷ ರೂಪಾಯಿ ಖರ್ಚು ಮಾಡಿದೆವು. ಅದೂ ಎಲ್ಲಾ ಜನಸಾಮಾನ್ಯರು ಕೊಟ್ಟಿದ್ದು. (ಕೆಲವು ಪುಸ್ತಕಗಳನ್ನು ಪಾನ್ಸರೆ ನಮಗೆ ತೋರಿಸಿದರು.)

**ಹೊ :** ಕೊಂಕಣ ವಿಭಾಗದ ರೈತ-ಕಾರ್ಮಿಕ ಪಕ್ಷದೊಂದಿಗೆ ನೀವು ಯಾವಾಗಲಾದರೂ ಕೆಲಸ ಮಾಡಿದ್ದಿರಾ ?

**ಪಾ :** ಇಲ್ಲ, ಪರಿಚಯವಿತ್ತು ಆದರೆ ಒಟ್ಟಿಗೆ ಕೆಲಸ ಮಾಡುವ ಸಂದರ್ಭ ಬರಲಿಲ್ಲ.

**ಹೊ :** ವಿಚಾರವಾದಿ ದಾಭೋಳ್ಕರ್ ನಿಮಗೆ ಗೊತ್ತೆ? ಹಂಪಿ ಕನ್ನಡ ವಿಶ್ವವಿದ್ಯಾಲಯದ ಒಂದು ಸಂಕಲನಕ್ಕೆ ಅವರ ಲೇಖನವನ್ನು ಆಯ್ಕೆ ಮಾಡಿಕೊಳ್ಳ ಲಾಗಿತ್ತು. ಪ್ರಖರ ಲೇಖಕರು ಎನಿಸುತ್ತದೆ.

**ಪಾ :** ಹೌದು, ಅವರು ಪುಣೆಯಲ್ಲಿದ್ದಾರೆ. ಜನಪರ ಚಳುವಳಿಗಳಿಗೆ ಒಳ್ಳೆಯ ಸಾಹಿತ್ಯ ಅವರದು.

**ಹೊ :** ಉತ್ತಮ ಕಾಂಬ್ಳೆ ನಿಮ್ಮನ್ನು ಸಂದರ್ಶಿಸಿ ಪುಸ್ತಕ ಪ್ರಕಟಿಸಿದ್ದಾರೆ. ಅವರು ಕೊಲ್ಹಾಪುರದಲ್ಲಿ ನಿಮ್ಮ ಪಕ್ಷದ ಕಾರ್ಯಕರ್ತರಂತೆ ಕೆಲಸ ಮಾಡಿದ್ದವರು. ಮಹಾರಾಷ್ಟ್ರದಲ್ಲಿ ದಲಿತ ಸಮುದಾಯವು ಪಕ್ಷದ ಚಟುವಟಿಕೆಗಳಿಗೆ ಹೇಗೆ ಪ್ರತಿಕ್ರಿಯಿಸುತ್ತಿದೆ ?

**ಪಾ :** ಇದಕ್ಕೆ ಸಮಗ್ರ ಉತ್ತರ ನೀಡುವುದು ಕಠಿಣ. ಕೆಲವು ಅಂಬೇಡ್ಕರ್‌ವಾದಿಗಳು ಅರ್ಧಸತ್ಯಗಳಿಗೆ ಅಂಟಿಕೊಂಡಿದ್ದಾರೆ. ಕೆಲವೇಳೆ ಅವರು ದಲಿತರ ಮತ್ತು ಕಮ್ಯುನಿಸ್ಟ್ ಪಕ್ಷದ ನಡುವೆ ಒಡಕು ಉಂಟುಮಾಡುತ್ತಾರೆ. ಈಚೆಗೆ ಅದು ಬದಲಾಗಿದೆ. ಅನೇಕ ದಲಿತ ಚಿಂತಕರು ಅಸ್ಪೃಶ್ಯತೆಯ ನಿವಾರಣೆಗೆ ಸಹ ಕಮ್ಯುನಿಸ್ಟರೊಡನೆ ಸೇರಿ ಹೋರಾಟ ನಡೆಸಬೇಕೆಂದು ಬಯಸುತ್ತಾರೆ. ನೀವು ರಂಗನಾಯಕಮ್ಮನವರ ''ಮಾರ್ಕ್ಸ್ ಮತ್ತು ಅಂಬೇಡ್ಕರ್'' ಎಂಬ ಪುಸ್ತಕ ಗಮನಿಸಿದ್ದೀರಾ ? ಅವರ ವಿಶ್ಲೇಷಣೆ ಉಪಯುಕ್ತವಾಗಿದೆ. ಈಚೆಗೆ ಹಲವು ದಲಿತ ಕಾರ್ಯಕರ್ತರು ಮತ್ತು ಚಿಂತಕರು ನಕ್ಸಲ್‌ವಾದಕ್ಕೆ ಆಕರ್ಷಿತರಾಗಿದ್ದಾರೆ. ನನ್ನ ಪ್ರಕಾರ ಅದು ಒಳ್ಳೆಯ ಬೆಳವಣಿಗೆ. ಅಂದರೆ ಅವರು ಯಾರನ್ನೂ ಕೊಚ್ಚುವ ಕೆಲಸಕ್ಕೆ ಕೈಹಾಕಿಲ್ಲ, ಹಾಕುವುದೂ ಇಲ್ಲ. ಮೂಲಭೂತ ಬದಲಾವಣೆಗೆ ಮಾರ್ಕ್ಸ್ ಚಿಂತನೆ ಸಹಾಯಕವೆಂಬುದನ್ನು ಜನರ ನಡುವೆ ಅವರ ಚಟುವಟಿಕೆಗಳು ಎತ್ತಿ ತೋರಿಸುತ್ತವೆ.

**ಹೊ :** ಆನಂದ ಪಟವರ್ಧನ್‌ರ ''ಜೈ ಭೀಮ್ ಕಾಮ್ರೇಡ್'' ಎಂಬ ಚಲನಚಿತ್ರವು ಅದೇ ವಸ್ತುವನ್ನು ಪ್ರಸ್ತುತಪಡಿಸಿದೆ.

**ಪಾ :** ಮಾರ್ಕ್ಸ್‌ವಾದಿಗಳು ಅಂಬೇಡ್ಕರ್ ಅವರ ಬರಹ ಮತ್ತು ಹೋರಾಟಗಳನ್ನು ಪರಿಗಣಿಸಬೇಕು. ಅವರು ಕ್ರಾಂತಿಕಾರಿಗಳಲ್ಲದಿರಬಹುದು, ಆದರೆ ಕಟ್ಟಾ ಪ್ರಜಾಪ್ರಭುತ್ವವಾದಿ ಖಂಡಿತ ಹೌದು. ಉದಾರ ಪ್ರಜಾಪ್ರಭುತ್ವವಾದಿ ಎಂದು ಬೇಕಾದರೆ ಅನ್ನಿ. ಅವರನ್ನು ಸುಮ್ಮನೆ ''ಸುಧಾರಕ'' ಎಂಬ ಹಣೆಪಟ್ಟಿ ಕಟ್ಟಿ ಕೂರಿಸು ವಂತಿಲ್ಲ. ಈ ''ಸುಧಾರಣೆ'' ಎಂಬ ಪದಕ್ಕೆ ಕೆಟ್ಟ ಅರ್ಥವ್ಯಾಪ್ತಿ ಬಂದುಬಿಟ್ಟಿದೆ.

**ಹೊ :** ಪೇಜಾವರ ಸ್ವಾಮಿಯೂ ತನ್ನನ್ನು ತಾನು 'ಸುಧಾರಕ' ಎಂದು ಕರೆದುಕೊಳ್ಳುವುದುಂಟು.

**ಪಾ :** ಅಂಬೇಡ್ಕರ್ ಅವರನ್ನು ಅಂತಹ ಸುಧಾರಕ ನೆಂದು ಪಕ್ಕಕ್ಕಿರಿಸುವುದು ಶುದ್ಧ ತಪ್ಪು. ಅವರು ಕಾನೂನು ಕ್ರಮಗಳಿಗೆ ಅತೀವ ಪ್ರಾಶಸ್ತ್ಯ ನೀಡಿದ್ದು ನಿಜ, ಆದರೆ ಹೋರಾಟವಿಲ್ಲದೆ ಬದಲಾವಣೆ ಅಸಾಧ್ಯವೆಂಬ ಅನುಭವ ಅವರದಾಗಿತ್ತು. ಇಂದು ಅಂಬೇಡ್ಕರ್ ಇದ್ದಿದ್ದರೆ ಹೇಗೆ ವಿಶ್ಲೇಷಿಸುತ್ತಿದ್ದರು ಮತ್ತು ಎಂತಹ ಕ್ರಿಯೆಯಲ್ಲಿ ತೊಡಗುತ್ತಿದ್ದರು ಎಂಬುದು ಅವರ ಸ್ಮರಣೆಯ ಒಂದು ಭಾಗ. ಅದಕ್ಕೆ ಮನಸ್ಸು ಕೊಡದಿದ್ದರೆ ಡಾ॥ ಅಂಬೇಡ್ಕರ್ ನಮಗೆ ಕಳೆದುಹೋದಂತೆಯೇ ಸರಿ. ಆ ದೃಷ್ಟಿಯಿಂದ ಅಂಬೇಡ್ಕರರನ್ನು ಪ್ರಸ್ತುತವಾಗಿಸಿಕೊಳ್ಳುವ ಕೆಲಸ ನಮ್ಮದಾಗಬೇಕು.

**ಹೊ :** ಆನಂದ್ ತೇಲ್‌ತುಂಬ್ಡೆಯವರ ಅನೇಕ ಬರಹಗಳು ಈಗ ಕನ್ನಡದಲ್ಲಿ ಬಂದಿವೆ. ಮಹಿಳಾ ಮೀಸಲಾತಿ ಕುರಿತ ಪುಸ್ತಕದಲ್ಲಿ ಅವರ ಕೆಲವು ವಿಚಾರಗಳನ್ನು ಬಳಸಿಕೊಳ್ಳಲಾಗಿದೆ. ಕಳೆದ ವರ್ಷ ವಾರ್ಧಾದಲ್ಲಿ ಅಖಿಲ ಭಾರತ ಮಹಿಳಾ ಅಧ್ಯಯನ ಕೇಂದ್ರದ ರಾಷ್ಟ್ರೀಯ ಅಧಿವೇಶನದಲ್ಲಿ ಮಹಾರಾಷ್ಟ್ರದ ಸನ್ನಿವೇಶಕ್ಕೆ ಮೀಸಲಾದ ಒಂದು ಗೋಷ್ಠಿಯನ್ನು ಆಯೋಜಿಸಲಾಗಿತ್ತು.

**ಪಾ :** ಅಧ್ಯಯನ ಮತ್ತು ಹೋರಾಟ ಜೊತೆ ಜೊತೆಯಲ್ಲಿ ಸಾಗಬೇಕು. ಅದರಲ್ಲಿ ನಾವೆಲ್ಲ ಭಾಗವಹಿಸೋಣ.

**ಡಾ॥ ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

ಹೊಸ ಓದು



## ದೇವನೂರ ಮಹದೇವರ ಕಥೆಗಳು, ಕಾದಂಬರಿಗಳು

*ಉದಯಕುಮಾರ್ ಹಬ್ಬು*

**ಪುಟ : ೧೩೨**

**ಬೆಲೆ : ರೂ. ೬೫**

**ಮಾನಸ ಬುಕ್ ಹೌಸ್**

'ಕಾವ್ಯಲೋಕ'

ಹೆಚ್‌ಐಜಿ-೧೨೬೭

೧ನೇ ಅಡ್ಡರಸ್ತೆ, ೨ನೇ ಹಂತ, ಶ್ರೀರಾಮಪುರ ಎಕ್ಸ್‌ಟೆನ್‌ಷನ್, ಮೈಸೂರು - ೨೩

*ಭಾರತೀಯ ಪಾಳೆಯಗಾರಿ ವ್ಯವಸ್ಥೆಯಲ್ಲಿ ಸವರ್ಣೀಯರಿಂದ ದಮನಿಸಲ್ಪಟ್ಟ ವರ್ಗಗಳ ನೈಜ ಬದುಕಿನ ವಿವರಗಳನ್ನು ಕೃತಿಯಲ್ಲಿ ಮೂಡಿಸಿ ಪರಿಚಯಿಸಿದವರು ದೇವನೂರ ಮಹಾದೇವ. ಅವರ ಸಾಹಿತ್ಯವೆಂದರೆ ಹಸಿ ಬಿಸಿ ದಲಿತ ಲೋಕದ ಅನಾವರಣ. ಅವಕಾಶವಂಚಿತರಾಗಿ ಯಾರೋ ನಿರ್ದೇಶಿಸಿದಂತೆ ಬದುಕು ಸವೆಸಿದ ಈ ಜನರನ್ನು ಕಥೆ-ಕಾದಂಬರಿಗಳಲ್ಲಿ ಪಾತ್ರಗಳನ್ನಾಗಿಸಿ ಸಮಾಜದ ಮೇಲ್ವರ್ಗಗಳ ಕ್ರೌರ್ಯವನ್ನು ಸಾಹಿತ್ಯದ ಮೂಲಕ ಹೊರಗೆಡವಿದ್ದಾರೆ. ವರ್ಗ ಸಂಘರ್ಷದ ಪರಿಣಾಮವಾಗಿ ಹೋರಾಟದ ದಿಟ್ಟ ಹೆಜ್ಜೆಗಳನ್ನಿಟ್ಟ ಶೋಷಿತ ಸಮುದಾಯದ ದನಿ ಎಲ್ಲೆಲ್ಲೂ ಕೇಳಿ ಬರತೊಡಗಿದ ಕಾಲ. ಹೀಗೆ ಅಂಚಿಗೆ ತಳ್ಳಲ್ಪಟ್ಟವರ ಬದುಕಿನ ವಿವರ ಹಾಗೂ ನೋವು-ಅವಮಾನಗಳು ದೇವನೂರ ಅವರ ಸಾಹಿತ್ಯದಲ್ಲಿ ಹೇರಳವಾಗಿರುವುದನ್ನು ಕಂಡು ಶ್ರೀ ಉದಯಕುಮಾರ್ ಹಬ್ಬು ಅವನ್ನಿಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ದೇವನೂರರ ಕಥೆಗಳು, ಕುಸುಮಬಾಲೆ, ಒಡಲಾಳಗಳಂಥ ಕಾದಂಬರಿಗಳೆಂದರೆ ಅಲ್ಲೊಂದು ಮಡುಗಟ್ಟಿದ ದಲಿತರ ನೋವು ವ್ಯಕ್ತವಾಗುತ್ತದೆ. ವರ್ಣೀಯ ಸಮಾಜದಲ್ಲಿನ ತಮ್ಮ ಸ್ಥಾನಮಾನ - ಮುಗ್ಧರಾದ ತಮ್ಮನ್ನು ನಂಬಿಸಿ, ವಂಚಿಸಿ ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುವ ಪರಿ – ದಲಿತರು ದೀನರಾಗಿಯೇ ಬಡವರಾಗಿಯೇ ಇದ್ದಷ್ಟೂ ತಮಗೆ ಅನುಕೂಲವೆಂದು ಅವರನ್ನು ಹಾಗೆಯೇ ಇರಗೊಡುವ ಮೇಲ್ವರ್ಗದ ಕ್ರೌರ್ಯ – ಒಟ್ಟಾರೆ ದಲಿತ ಲೋಕದ ಅನಾವರಣದ ಬಗ್ಗೆ ಇಲ್ಲೊಂದು ವಿಶ್ಲೇಷಣೆ ಇದೆ.*



## ಪ್ರಾಣಿಲೋಕದ ವಿಸ್ಮಯಗಳು

*ಜಿ. ವಿ. ಗಣೇಶಯ್ಯ*

**ಪುಟ : ೬೪** **ಬೆಲೆ : ರೂ. ೬೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

*ನಾವು ವಾಸಿಸುತ್ತಿರುವುದು ಜೀವಂತ ಭೂಮಿಯಲ್ಲಿ. ಇದು ಸದಾ ಚಲನಶೀಲ ಗತಿಯಲ್ಲಿಯೇ ಇದ್ದು ಅನೇಕ ವಿಧದ ಪ್ರಾಣಿ-ಪಕ್ಷಿ, ಕ್ರಿಮಿಕೀಟಗಳು ಮಾತ್ರವಲ್ಲದೆ ನಮ್ಮ ಕಣ್ಣಿಗೆ ಕಾಣಿಸದಷ್ಟು ಚಿಕ್ಕದಾದ ಸೂಕ್ಷ್ಮಜೀವಿಗಳಿಗೆ ಆಶ್ರಯತಾಣವಾಗಿದೆ. ಭೂಮಿಯ ಮೇಲೆ ಲೆಕ್ಕವಿಲ್ಲದಷ್ಟು ಜೀವಿಗಳಿರುವಂತೆಯೇ ನೀರಿನೊಳಗಡೆಯೂ ಅನೇಕ ಜೀವಿಗಳಿವೆ. ಮೊಟ್ಟ ಮೊದಲ ಜೀವಾಂಕುರ ಏಕಕೋಶಿ - ಅಮೀಬ ಎಂದು ಪರಿಗಣಿತವಾಗಿದೆ. ಈ ಜೀವಿಗಳು ಮುಂದೆ ಮಿಲಿಯಾಂತರ ವರ್ಷಗಳ ಸುದೀರ್ಘ ಅವಧಿಯಲ್ಲಿ ಅಸಂಖ್ಯ ಪಲ್ಲಟಗಳನ್ನು ಹೊಂದಿ ಇಂದಿನ ರೂಪವನ್ನು ಪಡೆದುಕೊಂಡಿವೆ. ಕಾಲದ ಓಟದಲ್ಲಿ ಮುಂದುವರೆದಿದ್ದು ಬಲಶಾಲಿಯಾದದ್ದು ಮಾತ್ರ. ಪಲ್ಲಟಗೊಂಡ ಹವಾಮಾನದಲ್ಲಿ ಅಂದಂದಿನ ಪರಿಸರಕ್ಕೆ ತಕ್ಕಂತೆ ಬದುಕುಳಿಯಲು ಹಲವು ಮಾರ್ಪಾಟುಗಳನ್ನು ಪ್ರತಿಯೊಂದು ಜೀವಿಯೂ ಮಾಡಿಕೊಂಡಿದೆ. ನಿಜವೇನೆಂದರೆ ಇಂದು ತಾನೇ ಶ್ರೇಷ್ಠನೆಂದು ಸವಾಲೆಸೆಯುತ್ತಿರುವ ಮಾನವ ಪ್ರಾಣಿಲೋಕಕ್ಕೆ ಎಷ್ಟೋ ಪ್ರಾಣಿಗಳು ಆವಿರ್ಭವಿಸಿದ ನಂತರದ ಸೇರ್ಪಡೆ. ಜೀವಿಗಳ ಅಧ್ಯಯನಕ್ಕೆ ತೊಡಗಿದಷ್ಟೂ ಅವು ನಿಗೂಢವಾಗಿ ಮತ್ತೆ ಮತ್ತೆ ಹೊಸ ಸವಾಲುಗಳನ್ನೆಸೆಯುತ್ತಲೇ ಇವೆ. ಹೀಗೆ ಪ್ರಾಣಿಲೋಕದ ಬಗ್ಗೆ ಅನೇಕ ವಿಸ್ಮಯಗಳನ್ನೂ, ಮಾಹಿತಿಗಳನ್ನೂ ತಿಳಿಸುವ ಈ ಪುಸ್ತಕ ಈಗ ನಿಮ್ಮ ಕೈಯಲ್ಲಿದೆ. ಜೀವಿಗಳ ಉಗಮ, ಅಭಿವೃದ್ಧಿ, ನಶಿಸುವಿಕೆ ಕಾಲಾಂತರದಲ್ಲಿ ಅವುಗಳ ಪಳಿಯುಳಿಕೆಗಳು ಹೇಳುವ ಕಥೆ ಏನೆಂದು ತಿಳಿದುಕೊಳ್ಳೋಣ.*



## ವೈಚಾರಿಕ ನಾಟಕಗಳು (ಏಕಾಂಕ / ಕಿರು ನಾಟಕಗಳು)

*ಡಾ|| ವೆಂಕಟಯ್ಯ ಅಪ್ಪಗೆರೆ*

**ಪುಟ : xxii + ೫೦ = ೭೨** **ಬೆಲೆ : ರೂ. ೪೫**

**ಕಣ್ವ ಪ್ರಕಾಶನ,** 'ಕಾಲ ಕನಸು', ನಂ. ೮೯೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ, ಚಂದ್ರಾಲೇಔಟ್, ಬೆಂಗಳೂರು - ೫೬೦ ೦೭೨

*ಇವು ಜನರಲ್ಲಿ ವೈಚಾರಿಕ ದೃಷ್ಟಿಯನ್ನು ಬೆಳೆಸುವ ಉದ್ದೇಶದಿಂದ ರಚಿತವಾದ ಕಿರುನಾಟಕಗಳು. ಇಬ್ಬರು ಪರಸ್ಪರ ಮಾತನಾಡುತ್ತಿರುವಂತೆ ದೃಶ್ಯ ಸಂಯೋಜಿಸಿ ಜೊತೆಯಲ್ಲಿ ಮೌಢ್ಯವನ್ನು ಹೊಂದಿರುವ ವ್ಯಕ್ತಿಯ ಮನಸ್ಸಿನಿಂದ ಅದನ್ನು ತೊಡೆದುಹಾಕುವ ಪ್ರಯತ್ನ ಮಾಡಲಾಗಿದೆ. ಮೂಢಾಚರಣೆಯಲ್ಲಿ ತೊಡಗಿದ ವ್ಯಕ್ತಿ ಅದನ್ನು ಪರಂಪರಾಗತ ನಂಬಿಕೆಯಂತೆ ಅನುಸರಿಸುತ್ತಿರುವುದರಿಂದ ಮತ್ತು ಮುಂದೆಯೂ ಅವನನ್ನು ಅನುಸರಿಸಿ ಇತರರು ಹಾಗೆ ಮಾಡುವುದರಿಂದ ಸಮಾಜದಲ್ಲಿವು ಉಳಿದುಕೊಂಡಿವೆ. ಮೂಢನಂಬಿಕೆಗಳನ್ನು ಲಾಗಾಯ್ತಿನಿಂದಲೂ ಕಾಪಾಡಿಕೊಂಡು ಬಂದ ಜನ ಸದಾಚಾರದ ಸದ್ವರ್ತನೆಗಳನ್ನು ಪಾಲಿಸಿಕೊಂಡು ಬರುವುದಿಲ್ಲವೇಕೆ? ತಿಳಿದೋ ತಿಳಿಯದೆಯೋ ಜನರಲ್ಲಿ ಮನೆಮಾಡಿರುವ ಇಂಥ ಅಂಧಾನುಕರಣೆಯನ್ನು ಸರಿಯಾದ ತಿಳುವಳಿಕೆ ಕೊಟ್ಟಲ್ಲಿ, ವೈಜ್ಞಾನಿಕ-ವೈಚಾರಿಕ ಮನೋಭಾವ ಬೆಳೆಸಿದಲ್ಲಿ ಬೇರುಸಹಿತ ಕೀಳಬಹುದಲ್ಲವೇ? ಇಂಥ ವೈಜ್ಞಾನಿಕ ಯುಗದಲ್ಲೂ ಅಂಧಾನುಕರಣೆ ಸರಿಯೇ? ಇವೆಲ್ಲ ಪ್ರಶ್ನೆಗಳು ಲೇಖಕರನ್ನು ಕಾಡಿದ್ದರಿಂದ ಇಲ್ಲಿನ ನಾಟಕಗಳು ರಚನೆಯಾಗಿವೆ. ಮುಖ್ಯವಾಗಿ ಎಳವೆಯಲ್ಲಿ ವಿದ್ಯಾರ್ಥಿಗಳಲ್ಲಿ ಇಂಥವು ಬೆಳೆಯಬೇಕೆಂಬ ಉದ್ದೇಶ ಶ್ರೀ ವೆಂಕಟಯ್ಯ ಅಪ್ಪಗೆರೆಯವರದ್ದು. ಹಾಗಾಗಿ ದೈನಂದಿನ ವ್ಯವಹಾರಗಳ ಪರಿಧಿಯಲ್ಲಿಯೇ ಸಂಯೋಜಿಸಲಾಗಿದ್ದು ಎಲ್ಲರೂ ವಿಚಾರವಂತರಾಗಬೇಕು ಎಂಬ ಕಳಕಳಿ ಇಲ್ಲಿದೆ.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಧಮ್ಮಪಥಂ (ಬುದ್ಧನ ಜೀವನ - ದರ್ಶನ ಮಹಾಕಾವ್ಯ)

*ತೆಲುಗು ಮೂಲ : ಡಾ|| ಜಿ. ಆರ್. ಕುರ್ಮೆ; ಕನ್ನಡಕ್ಕೆ : ಗುರುಮೂರ್ತಿ ಪೆಂಡಕೂರು*

**ಪುಟ : ೨೨ + ೫೮ = ೮೦** **ಬೆಲೆ : ರೂ. ೭೫**

**ಅಮ್ಮ ಪ್ರಕಾಶನ,** ರಾಮನಗರ, ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ



*ಪ್ರಪಂಚದ ಹಿಂಸೆಗೆ ಪ್ರತಿಸ್ಪರ್ಧಿಯಾಗಿ ಕಾಣುವುದು ಗೌತಮ ಬುದ್ಧ. ಭಾರತದಲ್ಲಿ ಜನಿಸಿ ಇಡೀ ಪ್ರಪಂಚಕ್ಕೆ ಶಾಂತಿಯ ಅಧಿದೇವತೆಯೆನಿಸಿಕೊಂಡು ಈ ಮಾನವ ಕುಲಕ್ಕೆ ಶಾಂತಿಯೆಂಬ ಅಮೃತವನ್ನು ಉಣಿಸಿದವನು ಈತ. ಬುದ್ಧನ ಶಾಂತಿಯ ಸಂದೇಶಗಳು ಶತಮಾನಗಳಷ್ಟು ಹಿಂದಿನವಾದರೂ ಪ್ರಸ್ತುತದಲ್ಲಿನ ಅಮಾನವೀಯ ಯಂತ್ರ ನಾಗರಿಕ ಪ್ರಪಂಚಕ್ಕೆ ಔಷಧಿಯಂತೆ ಕಂಡು ಅನಿವಾರ್ಯವೆನಿಸಿವೆ. ಈ ಹಿನ್ನೆಲೆಯಲ್ಲಿ ಗೌತಮ ಬುದ್ಧ ಕಾಲಾತೀತ, ಧರ್ಮಾತೀತ ಹಾಗೂ ಪ್ರದೇಶಾತೀತ ದಾರ್ಶನಿಕ. ಕಥನ ಕಾವ್ಯದಂತಿರುವ ಡಾ|| 'ಕುರ್ಮೆ'ಯವರ 'ಧಮ್ಮಪಥಂ' ಬುದ್ಧನ ಜೀವನವನ್ನು ದರ್ಶಿಸುವ ಮಹಾಕಾವ್ಯ. ಸಿದ್ಧಾರ್ಥನು ಬುದ್ಧನಾದ ಕಥೆಯನ್ನು ಕಾವ್ಯ ಶೈಲಿಯಲ್ಲಿ ಹೇಳಿರುವ ಈ ಕಾವ್ಯ ಸಂಕಲನ ಸಿದ್ಧಾರ್ಥನ ಜನನದಿಂದ ಪ್ರಾರಂಭಿಸಿ ಬುದ್ಧನ ಜೀವನದ ಹಲವು ಹಂತಗಳ ಕಾಲಘಟ್ಟಗಳನ್ನು ತುಂಬ ಪ್ರಭಾತಿಯಾಗಿ ಕಾವ್ಯದ ಮೂಲಕ ಮನಮುಟ್ಟುವಂತೆ ನಿರೂಪಿಸಿದೆ. ಕಥನ ಕಲೆಯನ್ನು ಕಾವ್ಯವಾಗಿಸುವುದು ಬೋಧಿಸತ್ವ ಸಿದ್ಧಾರ್ಥನನ್ನು ಕಾವ್ಯಮಯವಾಗಿ ವರ್ಣಿಸುವುದು ಅಷ್ಟು ಸುಲಭದ ಮಾತಲ್ಲ, ಅದಕ್ಕೆ ಕಾವ್ಯದ ಲಯಗಳ ಸ್ಪಷ್ಟ ಅರಿವಿರಬೇಕು. ಬುದ್ಧನ ಜೀವನಗಾಥೆಯ ಅರಿವಿರಬೇಕು. ಈ ಎಲ್ಲಾ ಸಾಮರ್ಥ್ಯಗಳು ತೆಲುಗಿನ ಹಿರಿಯ ಕವಿ 'ಡಾ|| ಕುರ್ಮೆ'ಯವರಿಗಿರುವುದು ಈ ಸಂಕಲನದಿಂದ ಸ್ಪಷ್ಟಗೊಳ್ಳುತ್ತಿದೆ. 'ಗುರುಮೂರ್ತಿ'ಯವರ ಅನುವಾದ ಪ್ರಜ್ಞೆಗೂ ಇದು ಅನ್ವಯಿಸುತ್ತದೆ. ಕಾವ್ಯ ಸಂಕಲನ ನಲವತ್ತೊಂದು ಕವಿತೆಗಳನ್ನು ಒಳಗೊಂಡಿದ್ದು ಸಿದ್ಧಾರ್ಥನ ಪೂರ್ವಾಶ್ರಮವನ್ನು, ಸಾಧಿತ ಬದುಕಿನ ಹಲವು ಹಂತಗಳನ್ನು ಹಿಡಿದಿಟ್ಟಿರುವುದು ಕವಿಯ ಕಲ್ಪನಾ ಪ್ರತಿಭೆಗೆ ಸಾಕ್ಷಿ. ಹಾಗೆಯೇ ಓದುಗರಿಗೆ ಜೀವ ವೈವಿಧ್ಯತೆಯ ನಡುವಿನ ಸಾಮರಸ್ಯದ ಅಗತ್ಯ ಹಾಗೂ ಆಧ್ಯಾತ್ಮಿಕ ಸಿದ್ಧಿಯನ್ನು ನೀಡುತ್ತದೆ. ಹಣ-ಅಧಿಕಾರವೇ ಮುಖ್ಯವಾಗಿ ಎಲ್ಲವೂ ತಕ್ಷಣಕ್ಕೆ ಬದಲಾಗುತ್ತಿರುವ, ಸ್ವಾರ್ಥ ಮತ್ತು ಹಿಂಸೆಯಿಂದ ಮಾನವ ಸಂಬಂಧಗಳು ಪಲ್ಲಟಗೊಳ್ಳುತ್ತಿರುವ ಪ್ರಸ್ತುತ ಸಂದರ್ಭಕ್ಕೆ ಶಾಂತಿಯ ಸಂಕೇತವಾದ ಬುದ್ಧನ ಚಿಂತನೆ ಇಂದಿನ ಅಗತ್ಯವಾಗಿದೆ.*

## ಪರಿಷ್ಕೃತೆ (ಸಂಶೋಧನಾ ಸಂಪ್ರಬಂಧ)

*ಸುಧಾ ಚಿದಾನಂದ ಗೌಡ*

**ಪುಟ : ೧೨೮** **ಬೆಲೆ : ರೂ. ೧೨೫**

**ಸುಯೋಧನ ಪ್ರಕಾಶನ,** ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

ಪ್ರಪಂಚದ ಪ್ರಹಸನಗಳ ಇತಿಹಾಸದಲ್ಲಿ ಪ್ರಮುಖವಾಗಿ ನಿಲ್ಲುವ ಹೆಸರು ಇಂಗ್ಲಿಷ್ ನಾಟಕಕಾರ 'ವಿಲಿಯಂ ಷೇಕ್ಸ್‌ಪಿಯರ್.' ಈತ ತಾನು ಸೃಷ್ಟಿಸಿದ ಪ್ರತಿ ಪಾತ್ರದ ಆಂತರ್ಯವನ್ನು ಹೊರಗೆಡವುತ್ತಾನೆ. ಹಾಗಾಗಿ ಈತನ ಕೃತಿಗಳ ಪಾತ್ರಗಳು ಕಾಲಾತೀತವಾಗಿ ಜೀವಂತಿಕೆಯನ್ನು ಪಡೆಯುತ್ತವೆ. ಒಳಿತು-ಕೆಡುಕುಗಳ ಭೇದವನ್ನೇ ಮುಖ್ಯವಾಗಿಸಿಕೊಳ್ಳುವ, ಅದನ್ನು ಮನಮುಟ್ಟುವಂತೆ ಹೇಳುವ ಷೇಕ್ಸ್‌ಪಿಯರ್ ಸಂಕೇತಗಳನ್ನು ಅಷ್ಟೇ ಅದ್ಭುತವಾಗಿ ಬಳಸಿಕೊಂಡಿದ್ದಾನೆ. ಷೇಕ್ಸ್‌ಪಿಯರ್ ನಾಟಕಗಳನ್ನು ಕುರಿತ ಸಂಶೋಧನೆಗಳು ಹೆಚ್ಚೇ ಅನ್ನುವಷ್ಟು ಪ್ರಕಟಗೊಂಡಿವೆ. ಮಾರ್ಕ್ಸ್‌ವಾದ, ಸ್ತ್ರೀವಾದ, ಪ್ರತಿಮಾವಾದ ಹಾಗೂ ವಸಾಹತು ಹಿನ್ನೆಲೆಯ ದೃಷ್ಟಿಕೋನಗಳಿಂದ ನೋಡಿರುವ ವಿಮರ್ಶೆಗಳು, ಸಂಶೋಧನಾ ಕೃತಿಗಳು ಹೊರಬಂದಿವೆ. ಹೀಗೆ ಒಬ್ಬ ಸಾಹಿತಿಯನ್ನು-ಸಾಹಿತ್ಯವನ್ನು ಒಂದು ನೆಲೆಯಿಂದ ನೋಡುವುದು ಆ ಕಲೆಗೆ-ಕಲಾಕೃತಿಗೆ ನ್ಯಾಯ ಒದಗಿಸಿದಂತೆ ಆಗುತ್ತದೆಯೇ..? ಎಂಬ ಪ್ರಶ್ನೆ ಮೂಡುತ್ತದೆ.



ಆದರೆ ಸುಧಾ ಚಿದಾನಂದಗೌಡರ ಸ್ತ್ರೀ ದೃಷ್ಟಿಕೋನದ ಚಿಂತನೆ ಇಲ್ಲಿಯತನಕ ಇತರೆ ಸಂಶೋಧನಾ ಗ್ರಂಥಗಳಲ್ಲಿ ಕಾಣದ ಅಂಶಗಳ, ಹಲವು ನಿರ್ಲಕ್ಷಿತ ಸ್ತ್ರೀ ಪಾತ್ರಗಳ ಕಡೆ ಬೆಳಕು ಚೆಲ್ಲಿ ಅವುಗಳ ಪ್ರಾಮುಖ್ಯತೆಯನ್ನು ಮನಗಾಣಿಸುತ್ತದೆ. ಉದಾ : ಹಾರ್ಮಿಯನ್, ಕ್ಲಿಯೋಪಾತ್ರ, ಹೆಕೇಟ್, ಲೇಡಿ ಮ್ಯಾಕ್‌ಡಫ್, ಒಕ್ಟೇವಿಯಾ, ಫುಲ್‌ವಿಯಾ, ಇರಾಸ್ - ಮುಂತಾದವು. ಷೇಕ್ಸ್‌ಪಿಯರ್ ಸೃಷ್ಟಿಸಿದ ಅಸಂಖ್ಯಾತ ಪಾತ್ರಗಳಲ್ಲಿ ಮಹಿಳೆಯರದೇ ವಿಶಿಷ್ಟ ಸ್ಥಾನ. ಈತನ ಸ್ತ್ರೀ ಪಾತ್ರಗಳು ಪಾತ್ರದಿಂದ-ಪಾತ್ರಕ್ಕೆ ವೈವಿಧ್ಯತೆಯಿಂದ ಕೂಡಿವೆ. ಈ ಕೃತಿ ಸ್ತ್ರೀ ಚಿಂತನೆ ಮಾತ್ರವಲ್ಲದೆ ಷೇಕ್ಸ್‌ಪಿಯರ್‌ನ ಬದುಕಿನ ಪ್ರಮುಖ ಘಟ್ಟಗಳು ಹಾಗೂ ಆತನ ಸಮಗ್ರ ಬರಹಗಳ ಬಗ್ಗೆ ತುಲನಾತ್ಮಕ ಚರ್ಚೆ ನಡೆಸುತ್ತದೆ. ಒಟ್ಟಾರೆ ಷೇಕ್ಸ್‌ಪಿಯರ್‌ನ ಸಮಗ್ರ ಮಾಹಿತಿಯ ಕೋಶವಾಗಿಯೂ ಕೃತಿಯನ್ನು ಗಮನಿಸಬಹುದು.

## ರಘುವೀರ ಸಹಾಯ ಕವಿತೆಗಳು




*ಸಂ. ಹಾಗೂ ಅನುವಾದ : ಪ್ರೊ|| ಕಾಶೀನಾಥ ಅಂಬಲಗೆ*

**ಪುಟ : xiv + ೭೮ = ೯೨** **ಬೆಲೆ : ರೂ. ೭೫**

**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ ಕಲಬುರ್ಗಿ - ೫೮೫ ೧೦೫

'ಸಾಹಿತ್ಯ ಸಮಾಜದ ಕನ್ನಡಿ' ಎಂಬ ಮಾತು ಸಾಹಿತ್ಯದ - ಸಾಹಿತಿಗಳ ಕರ್ಮವನ್ನು ಅವರ ನಡೆಯನ್ನು ಸೂಚಿಸುತ್ತದೆ. ಈ ಮಾತನ್ನು ಸಮರ್ಥವಾಗಿ ಪ್ರತಿಪಾದಿಸುವಂತೆ 'ರಘುವೀರ ಸಹಾಯ ಕವಿತೆಗಳು' ಮೂಡಿಬಂದಿದೆ. ಶೋಷಿತ/ತಳಸಮುದಾಯವನ್ನೇ ಮುಖ್ಯ ಧಾತುವನ್ನಾಗಿ ಬಳಸಿಕೊಂಡು ರಚನೆಯಾಗಿರುವ ಇಲ್ಲಿನ ಕವನಗಳು ಗದ್ಯ ಶೈಲಿಯಂತೆ ಕಂಡರೂ, ಕಾವ್ಯಕ್ಕಿರುವ ಇನ್ನಿತರೆ ಆಯಾಮಗಳನ್ನು ತೆರೆಯುತ್ತವೆ. ಇಲ್ಲಿ ಬಳಸಿರುವ ಭಾಷೆ ಹಾಗೂ ಅಭಿವ್ಯಕ್ತಿ ವಿಧಾನ ರೊಚ್ಚಿನಿಂದ ಕೂಡಿದ್ದು, ಸಾಮಾಜಿಕ ಕೃತಿಗಳ ಕುರಿತು ವ್ಯಂಗ್ಯ, ಸಾಮಾನ್ಯನ ಹದಗೆಟ್ಟ ಬದುಕು, ದುಡಿಯುವ ವರ್ಗದ ಅಪಮಾನಗಳು, ಅಸಮಾನತೆಗಳ ಕುರಿತ ಲೇವಡಿಯಿದೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ನಡೆಯುತ್ತಿರುವ ಉಳ್ಳವರ ದಬ್ಬಾಳಿಕೆ, ಮೌಢ್ಯಗಳ ಆಡಳಿತ, ಶ್ರೇಷ್ಠತೆಯ ಕೊಳಕು, ಈ ಕೊಳಕೇ ಎಲ್ಲಾ ವಲಯಗಳನ್ನು ಆಕ್ರಮಿಸಿ ಸಾಮಾನ್ಯನ ಗೋಳನ್ನು ನಿರ್ಲಕ್ಷಿಸಿರುವ ಸ್ಥಿತಿಯನ್ನು, ಪರಿಣಾಮಕಾರಿಯಾಗಿಯೇ ಚಿತ್ರಿಸುತ್ತವೆ. ಉದಾ : 'ಶಾಸಕರು ಬಡವರಿಗೆ ಶಸ್ತ್ರ ಕೊಡುತ್ತಾರೆ ನೀರು ಕೊಡುವುದಿಲ್ಲ'

'ಆರಿದ ನೆಲದ ಮೇಲೆ ಹಸಿದವರ ಬೇಡಿಕೆಗಳಿಗೆ ಧ್ವನಿ ಕೊಡಲಾರರು'

ಕವಿತೆಗಳು ಪ್ರಾರಂಭದಲ್ಲಿ ಪ್ರಜಾತಂತ್ರ ವ್ಯವಸ್ಥೆಯಲ್ಲಿನ ಜೀವ ವಿರೋಧಿ ಬದುಕನ್ನು ಚಿತ್ರಿಸುತ್ತಾ ತದನಂತರ ಅವುಗಳ ವಿರುದ್ಧ ಬಂಡೇಳುವ ಕಡೆ ಓದುಗರನ್ನು ಸೆಳೆಯುತ್ತವೆ. ಇಂದಿನ ಸಾಹಿತ್ಯ-ಸಾಹಿತಿಗಳ ಸೋಗಲಾಡಿತನಗಳನ್ನು, ಭೋಪರಾಕ್ ಬರಹಗಳನ್ನು ಖಂಡಿಸುತ್ತಾ ಹೊಸ ಸಾಹಿತ್ಯ ಮೀಮಾಂಸೆಯ ನಿರ್ಮಾಣದ ಕಡೆ ಯುವ ಬರಹಗಾರರನ್ನು ಸೆಳೆಯುತ್ತಾರೆ. ಅನುವಾದವೂ ಸಹ ಮೂಲ ಕವಿಯ ಆಶಯ, ತೀವ್ರತೆಯನ್ನು ಹಿಡಿದಿಡುವ ಕಡೆ ಮುತುವರ್ಜಿಯನ್ನು, ಎಚ್ಚರವನ್ನು ವಹಿಸಿದೆ. ಇಡೀ ಸಂಕಲನ ಜಾತಿ, ಧರ್ಮ ಮುಂತಾದ ಹತ್ತು ಹಲವು ವಿಚಾರಗಳ ಬಗ್ಗೆ ಚರ್ಚಿಸುತ್ತದೆ. ಒಟ್ಟಾರೆ ಸಂಕಲನ ದುಡಿಯುವ ವರ್ಗದ ಬಹುದೊಡ್ಡ ರೂಪಕವಾಗಿ (ಮೆಟಾಫರ್) ಮೂಡಿಬಂದಿದೆ.

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

---

## ಸಾದರ ಸ್ವೀಕಾರ

**ಮುಂಬಯಿ ಅಂಡರ್‌ವರ್ಲ್ಡ್** (ಮುಂಬಯಿ ಕತ್ತಲೆ ಜಗತ್ತಿನ ಕತೆ)
*ಶ್ರೀನಿವಾಸ ಜೋಕಟ್ಟೆ*
**ಪುಟ : ೪೫೬ + iv** **ಬೆಲೆ : ರೂ. ೨೩೫**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ನಳಿನ ಕಾಂತಿ** (ಮಲಯಾಳಂ ಕತೆಗಳು)
*ಟಿ. ಪದ್ಮನಾಭನ್; ಕನ್ನಡಕ್ಕೆ : ಕೆ. ಕೆ. ನಾಯರ್*
**ಪುಟ : xvi + ೧೨೮ = ೧೪೪** **ಬೆಲೆ : ರೂ. ೧೦೦**
**ಡಾ|| ಅಶೋಕ್ ಕುಮಾರ್, ಕನ್ನಡ ಸಂಘ,** ಕ್ರೈಸ್ಟ್ ಯೂನಿವರ್ಸಿಟಿ, ಹೊಸೂರು ರಸ್ತೆ, ಬೆಂಗಳೂರು - ೨೯

**ಆಂತರ್ಯದ ಬಯಲು** (ಮನದೊಳಗಣ ಅಭಿವ್ಯಕ್ತಿ ವೈಚಾರಿಕ ಚಿಂತನಗಳು) *ವೆಂಕಟೇಶ ಕೆ. ಜನಾದ್ರಿ*
**ಪುಟ : xx + ೧೫೦** **ಬೆಲೆ : ರೂ. ೭೦**
**ಕರ್ನಾಟಕ ಆರ್ಯವೈಶ್ಯ ಸಾಹಿತ್ಯ ಪರಿಷತ್ (ರಿ.),** ಬೆಂಗಳೂರು - ೫೬೦ ೦೦೩

**ಗಾಂಧಿ ಹೋರಾಟ ಯಾರ ವಿರುದ್ಧ?**
*ರಘೋತ್ತಮ ಹೊ. ಬ.*
**ಪುಟ : xvi + ೯೬** **ಬೆಲೆ : ರೂ. ೮೦**
**ತಾರಾ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,** ೨೮೫/ ಎಫ್ ೬, ೫ನೇ ವೆಸ್ಟ್ ಕ್ರಾಸ್, ಉತ್ತರಾದಿಮಠದ ರಸ್ತೆ, ಮೈಸೂರು - ೪

**ಭಾರತದ ಪ್ರಸಿದ್ಧ ಗಣಿತಜ್ಞರು** (೧೯-೨೦ನೇ ಶತಮಾನದ ಕೀರ್ತಿಶೇಷರು) *ಸಂ : ಡಾ|| ಎಸ್. ಬಾಲಚಂದ್ರ ರಾವ್*
**ಪುಟ : viii + ೨೧೪ + ೪** **ಬೆಲೆ : ರೂ. ೧೨೦**
**ಭವನ್ಸ್ ಗಾಂಧೀ ಸೆಂಟರ್ ಆಫ್ ಸೈನ್ಸ್ ಆ್ಯಂಡ್ ಹ್ಯೂಮನ್ ವ್ಯಾಲ್ಯೂಸ್,** ಭಾರತೀಯ ವಿದ್ಯಾಭವನ, ನಂ. ೪೩/೧, ಬೆಂಗಳೂರು - ೫೬೦ ೦೦೧

**ಲೋಕಜ್ಞಾನ** (ಸಾಂಸ್ಕೃತಿಕ ಅಧ್ಯಯನ ಮತ್ತು ಸಂವಾದಗಳ ಸಂಶೋಧನಾ ಪತ್ರಿಕೆ) *ಸಂ. : ಡಾ|| ನಿತ್ಯಾನಂದ ಬಿ. ಶೆಟ್ಟಿ*
**ಪುಟ : xiv + ೯೬** **ಬೆಲೆ : ರೂ. ೭೫**
**ಪ್ರಸಾರಾಂಗ,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು – ೫೭೨ ೧೦೩

**ಆಟಕ್ಕೂ ಉಂಟು ಲೆಕ್ಕಕ್ಕೂ ಉಂಟು** *ಚಂದ್ರಮತಿ ಸೋಂದಾ*
**ಪುಟ : ೧೬೮** **ಬೆಲೆ : ರೂ. ೯೦**
**ಸಾಹಿತ್ಯ ನಂದನ,** ನಂ. ೯, ೪ನೇ 'ಇ' ವಿಭಾಗ, ೧೦ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು** (ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ.ಗಾಗಿ ಸಲ್ಲಿಸಿದ ಮಹಾಪ್ರಬಂಧ)
*ಡಾ|| ಲಕ್ಷ್ಮೀದೇವಿ ಎಲ್.*
**ಪುಟ : xvi + ೨೭೦** **ಬೆಲೆ : ರೂ. ೧೫೦**

**ನಾಗಪ್ಪ - ನರಸಪ್ಪ ಸಾಂಸ್ಕೃತಿಕ ಸಂಕಥನ** (ಬೇಡ ನಾಯಕ ಸಮುದಾಯದ ಕೆಲವು ಐತಿಹ್ಯಗಳು) *ಡಾ|| ಲಕ್ಷ್ಮೀದೇವಿ ಎಲ್.*
**ಪುಟ : ೬೪** **ಬೆಲೆ : ರೂ. ೩೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವಾಲ್ಮೀಕಿ ಸಾಹಿತ್ಯ ಸಂಪದ,** ಹರ್ತಿಕೋಟೆ - ೫೭೭ ೫೪೫ ಹಿರಿಯೂರು ತಾಲೂಕು, ಚಿತ್ರದುರ್ಗ ಜಿಲ್ಲೆ

**ವಡೇವು** (ಪತ್ರಿಕಾ ಲೇಖನಗಳು) *ಸಿದ್ಧರಾಮ ಹಿರೇಮಠ*
**ಪುಟ : ೨೦೮ + iv = ೨೧೨** **ಬೆಲೆ : ರೂ. ೧೨೫**
**ಅಂಬಾರಿ ಪ್ರಕಾಶನ,** ೧೨೩೮, ಮಹಡಿ, ೩ನೇ ಕ್ರಾಸ್ ಗಂಗೆ ರಸ್ತೆ, ಕುವೆಂಪುನಗರ, ಮೈಸೂರು - ೫೭೦ ೦೨೩

**ದಾನಶೀಲ ಚಂದ್ರಪ್ಪ ಗೌರಶೆಟ್ಟಿ** *ಡಾ|| ಭತಮುರ್ಗೆ ಚಂದ್ರಪ್ಪ*
**ಪುಟ : ೯೬** **ಬೆಲೆ : ರೂ. ೭೫**
**ಪೂರ್ಣಿಮಾ ಪ್ರಕಾಶನ,** ಪ್ಲಾಟ್ ನಂ. ೫೩, ಶಿವಾಜಿನಗರ ಶ್ರೀ ಸಿದ್ಧಾರೂಢ ಮಠದ ಹಿಂದುಗಡೆ (ಗೋರನಳ್ಳಿ ವಿಸ್ತರಣೆ) ಚಿಟ್ಟಾರಸ್ತೆ, ಬೀದರ




# ಗ್ರಹಗಳ ಮುಖಾಮುಖಿ

**ಬೇ**ಸಿಗೆಯ ಧಗೆ. ಜೊತೆಗೆ ದೂಳು ಸೇರಿ ಈ ತಿಂಗಳಿನಲ್ಲಿ ನೀಲಿ ಆಕಾಶ ಬಣ್ಣ ಕಳೆದುಕೊಂಡು ಬೂದು ಬಣ್ಣಕ್ಕೆ ತಿರುಗಬಹುದು. ಸುಲಭವಾಗಿ ಗುರುತಿಸಬಹುದಾದ ನಕ್ಷತ್ರಪುಂಜಗಳೆಂದರೆ ಮಹಾವ್ಯಾಧ (ಒರೈಯನ್), ವಿಜಯಸಾರಥಿ (ಆರಿಗಾ) ಮಿಥುನ - ಇವು ಪಶ್ಚಿಮದಲ್ಲಿ ಕಾಣುತ್ತವೆ. ನೆತ್ತಿಯ ಮೇಲೆ ಸಿಂಹ, ಪೂರ್ವದಲ್ಲಿ ಕನ್ಯಾ ಮತ್ತು ತುಲಾ. ತುಲಾ ಮತ್ತು ಕಟಕ ಇವೆರಡೂ ಬಹಳ ಕ್ಷೀಣವಾದ ಪುಂಜಗಳು.

ಸಂಜೆಯ ಆಕಾಶದಲ್ಲಿ ಕಾಣುತ್ತಿರುವ ಗ್ರಹ ಒಂದೇ. ಅದೇ ಗುರು ಗ್ರಹ. ಆದರೆ ಇದು ತಿಂಗಳ ಮೊದಲಲ್ಲಿ ಮಾತ್ರ. ಮೊದಲನೆಯ ವಾರ ಮುಗಿಯುವ ಹೊತ್ತಿಗೆ ಪೂರ್ವದ ಅಂಚಿನಲ್ಲಿ ಶನಿ, ಪಶ್ಚಿಮದ ಅಂಚಿನಲ್ಲಿ ಶುಕ್ರ ಕಾಣಿಸಿಕೊಳ್ಳುತ್ತವೆ. ದಿನ ಕಳೆದಂತೆ ಗುರುಗ್ರಹ ಪಶ್ಚಿಮದ ಅಂಚಿಗೆ ಸರಿಯುತ್ತದೆ. ಶನಿ ಮೇಲೇರಲು ತೊಡಗುತ್ತದೆ. ತಿಂಗಳ ಕೊನೆಯ ವಾರ ಗುರು ಮತ್ತು ಶುಕ್ರಗಳನ್ನು ಗಮನಿಸಿ. ಕ್ರಮೇಣ ಒಂದನ್ನೊಂದು ಸಮೀಪಿಸುತ್ತವೆ. ಜೊತೆಗೆ ಒಂದು ಹೊಸ ಚುಕ್ಕೆಯೂ ಕಾಣತೊಡಗುತ್ತದೆ. ಅದೇ ಬುಧ ಗ್ರಹ. ಹೀಗೆ ಪಶ್ಚಿಮದ ಅಂಚಿನಲ್ಲಿ ಬುಧ, ಗುರು ಮತ್ತು ಶುಕ್ರ ಇವು ರಚಿಸುವ ತ್ರಿಕೋಣದ ಆಕರ್ಷಕ ವಿನ್ಯಾಸ ಪ್ರತಿ ಸಂಜೆಗೂ ಬೇರೆ ಬೇರೆಯಾಗಿರುತ್ತದೆ. ಇದರಿಂದ ಗ್ರಹಗಳ ಚಲನೆಯ ಗತಿ ತಿಳಿಯುತ್ತದೆ.

ಶನಿಗ್ರಹ ತುಲಾದಲ್ಲಿದೆ ಎಂಬುದರಿಂದ ಆ ಪುಂಜವನ್ನು ಗುರುತಿಸಬಹುದು. ಉತ್ತರದಲ್ಲಿ ಸಪ್ತರ್ಷಿಮಂಡಲ. ದಕ್ಷಿಣದಲ್ಲಿ ತ್ರಿಶಂಕು. ಚಿತ್ರ ನಕ್ಷತ್ರದ ಉತ್ತರಕ್ಕಿರುವ ಕೆಂಪು ನಕ್ಷತ್ರವೇ ಸ್ವಾತಿ. ಇದು ಸಹದೇವ ಎಂಬ ಪುಂಜಕ್ಕೆ ಸೇರಿದೆ. ತಿಂಗಳ ಮಧ್ಯೆ ಶುಕ್ರ ಗ್ರಹ ವೃಷಭದಿಂದ ಮಿಥುನದತ್ತ ಸರಿಯುವುದನ್ನು ಕಾಣಬಹುದು.

ಉ
ಪ
ದ
ಪೂ
ಸಪ್ತರ್ಷಿಮಂಡಲ
ಸಹದೇವ
ಸ್ವಾತಿ
ಸಿಂಹ
ಕಟಕ
ಕನ್ಯಾ
ಶನಿ ಚಿತ್ರಾ ಹಸ್ತಾ
ವಿಜಯಸಾರಥಿ
ಶುಕ್ರ
ವೃಷಭ
ಗುರು
ಮಹಾವ್ಯಾಧ
ಲುಬ್ಧಕ
ಮಹಾಶ್ವಾನ
ಅಗಸ್ತ್ಯ


ಮೇ ೨೬ ರ ಸಂಜೆ
ಶುಕ್ರ, ಗುರು ಮತ್ತು ಬುಧ

ಮಂಗಳ ಗ್ರಹ ತಿಂಗಳ ಕೊನೆಗೆ ಬೆಳಗಿನ ಜಾವ ಪೂರ್ವದ ಅಂಚಿನಲ್ಲಿ ಕಾಣುತ್ತದೆ. ಅದರ ಸ್ಥಾನ ವೃಷಭ ರಾಶಿಯಲ್ಲಿದೆ.

ಈ ತಿಂಗಳಲ್ಲಿ ಒಂದು ಸೂರ್ಯಗ್ರಹಣ ಇದೆ. ಅದು ನಮಗೆ ನೋಡಲು ಸಿಗುವುದಿಲ್ಲ. ಆದರೆ ಇಂದಿನ ಇಂಟರ್ನೆಟ್ ಯುಗದಲ್ಲಿ ಅದು ಕಷ್ಟವೇನಲ್ಲ. ಆಸ್ಟ್ರೇಲಿಯಾ ಮುಂತಾದ ದೇಶಗಳಿಂದ ನೇರ ಪ್ರಸಾರ ದೊರಕುತ್ತದೆ. ಇದು ಕಂಕಣಗ್ರಹಣ; ಪೂರ್ಣಗ್ರಹಣವಲ್ಲ. ಆದ್ದರಿಂದ ಬರಿಗಣ್ಣಿನಿಂದ ನೋಡುವುದು ಸಾಧ್ಯವಿಲ್ಲ. ಸೋಹೋ ಮುಂತಾದ ಬಾಹ್ಯಾಕಾಶ ಉಪಗ್ರಹಗಳು ತೆಗೆದ ಚಿತ್ರಗಳಲ್ಲಿ ಬುಧ ಮತ್ತು ಶುಕ್ರ ಎರಡನ್ನೂ ನೋಡುವುದು ಸಾಧ್ಯ. ಹಾಗೆಯೇ ಅಲ್ಲೊಂದು ಗ್ರಹಗಳ ಮುಖಾಮುಖಿ ಕಾಣಬಹುದು. ಸೂರ್ಯನ ಅಂಚಿನಲ್ಲಿಯೇ ಬುಧ ಮತ್ತು ಶುಕ್ರ ಈ ಎರಡೂ ಚುಕ್ಕೆಗಳನ್ನು ಕಾಣಬಹುದು.

ಮೇ ೨೫ರಂದು ಚಂದ್ರಗ್ರಹಣವೂ ಇದೆ; ಆದರೆ ಅದು ನಮ್ಮ ಹಗಲಿನಲ್ಲಿ ನಡೆಯುತ್ತದೆ. ಇದರಲ್ಲಿ ಚಂದ್ರ ಭೂಮಿಯ ನೆರಳಿನ ಹೊರ ಅಂಚನ್ನು ಅಂದರೆ ಪಾರ್ಶ್ವ ಛಾಯಾ ಪ್ರದೇಶವನ್ನು ಮಾತ್ರ ದಾಟಿ ಹೋಗುವುದರಿಂದ ಗ್ರಹಣ ಬರಿಗಣ್ಣಿಗೆ ತಿಳಿಯುವುದೇ ಇಲ್ಲ. ಇದಕ್ಕೆ ಪಾರ್ಶ್ವ ಛಾಯಾಗ್ರಹಣ ಎಂದು ಹೆಸರು. ಸಾಧಾರಣವಾಗಿ ಮೂರು ಗ್ರಹಣಗಳು ಒಟ್ಟಿಗೇ ಆಗುತ್ತವೆ. ಎರಡು ಚಂದ್ರಗ್ರಹಣಗಳ ನಡುವೆ ಒಂದು ಸೂರ್ಯಗ್ರಹಣ; ಅಥವಾ ಎರಡು ಸೂರ್ಯಗ್ರಹಣಗಳ ನಡುವೆ ಒಂದು ಚಂದ್ರಗಹಣ - ಈ ಸಂದರ್ಭದಲ್ಲಿ ಎರಡು ಬಾರಿ ಕಾಣುವ ಗ್ರಹಣ ಪಾರ್ಶ್ವಗ್ರಹಣವೇ ಆಗಿರುತ್ತದೆ. ಮೇ ೨೫ರದು ಪಾರ್ಶ್ವ ಎಂದು ಕರೆಯಲೂ ಸಾಧ್ಯವಾಗದಂತಹುದು. ಆದ್ದರಿಂದ ಜನಸಾಮಾನ್ಯರಿಗೆ ತಿಳಿಯಪಡಿಸುವ ಕ್ಯಾಲೆಂಡರ್‌ಗಳಲ್ಲಿ ಇದು ನಮೂದು ಆಗಿರುವುದಿಲ್ಲ.

ತಿಂಗಳ ಮೊದಲ ವಾರದಲ್ಲಿ ಬೆಳಗಿನ ಜಾವ ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಕುಂಭರಾಶಿಯಿಂದ ಹೊರಟಂತೆ ಕಾಣುವ ಈ ಉಲ್ಕೆಗಳ ಮೂಲ ಹ್ಯಾಲೀ ಧೂಮಕೇತುವಿನ ತುಣುಕುಗಳು.

## ಖಗೋಳ ದಿನಚರಿ

| | |
|---|---|
| ೨ | ಚಾಂದ್ರಮಾಸದ ಕೊನೆಯ ಪಾದ |
| ೫ | ಅಕ್ವಾರಿಡ್ಸ್ ಉಲ್ಕಾವೃಷ್ಟಿ. |
| ೧೦ | ಅಮಾವಾಸ್ಯೆ ೦೫:೫೮ಕ್ಕೆ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ) |
| ೧೨ | ಚಂದ್ರ - ಗುರು ಜೋಡಿ |
| ೧೩ | ಚಂದ್ರ - ಭೂಮಿ ಅಂತರ ಗರಿಷ್ಠ |
| ೧೮ | ಚಾಂದ್ರಮಾಸದ ಮೊದಲ ಪಾದ |
| | ಶುಕ್ರ - ರೋಹಿಣಿ - ಬುಧ ಪುಟ್ಟಗುಂಪು |
| ೨೩ | ಶನಿ - ಚಂದ್ರ ಜೋಡಿ |
| ೨೫, ೨೬, ೨೭ | ಗುರು - ಬುಧ - ಶುಕ್ರ ಪುಟ್ಟಗುಂಪು |
| ೨೫ | ಹುಣ್ಣಿಮೆ ೦೯:೫೫ ಪಾರ್ಶ್ವ ಛಾಯಾಗ್ರಹಣ |
| ೨೮ | ಶುಕ್ರ - ಗುರು ಜೋಡಿ |
| ೩೧ | ಚಾಂದ್ರ ಮಾಸದ ಕೊನೆಯ ಪಾದ |

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## ಕೆ. ಎಸ್. ಪಾರ್ಥಸಾರಥಿ

ವಚನ ಚಳುವಳಿಯ ಮೂಲ ಸ್ರೋತ ಜಾತಿ ವಿರೋಧಿ ಅಥವಾ ಸುಧಾರಣೆಯದಲ್ಲ; ಅದು ಕೇವಲ ಆಧ್ಯಾತ್ಮಿಕ ಚರ್ಚೆಯ ಪರಸ್ಪರ. ಬ್ರಿಟಿಷರು ನಮ್ಮೊಳಗೆ ಜಾತಿಪದ್ಧತಿಯನ್ನು ನೆಲೆಗೊಳಿಸಿದರು. ಮುಂತಾದ ಚರ್ಚೆಗಳು ಕೆಲದಿನಗಳಿಂದ ಬಿರುಸಾಗಿ ನಡೆಯುತ್ತಿವೆ. ಸಾಹಿತ್ಯದ ನೆಲೆಯಿಂದ ವಿದ್ವಾಂಸರು ಈ ಚರ್ಚೆಯನ್ನು ಪ್ರವೇಶಿಸಿ, ಉತ್ತಮವಾದ ಚರ್ಚೆ ನಡೆಯುತ್ತಿದೆ. ಸಾಮಾಜಿಕ ಕಳಕಳಿಯನ್ನು ಹೊತ್ತ ಒಬ್ಬ ಸಾಮಾನ್ಯನಾಗಿ ನಾನೂ ಒಂದೆರಡು ವಿಷಯಗಳನ್ನು ಹೇಳಲು ಬಯಸುತ್ತೇನೆ.

ನಮ್ಮಲ್ಲಿಯ ಜಾತಿವ್ಯವಸ್ಥೆ ನಮ್ಮದೇ. ಬೇರಾರೂ ಹುಟ್ಟಿಹಾಕಿದ್ದಲ್ಲ. ಇತ್ತೀಚೆಗೆ ಸಂಶೋಧಕರು ಇತರ ಕೆಲವು ದೇಶಗಳಲ್ಲೂ, ಅವರ ಸಮಾಜ ರಚನೆಯಲ್ಲೂ ಸರಿಸುಮಾರು ಇಂಥದೇ ವ್ಯವಸ್ಥೆ ಇದ್ದದ್ದನ್ನು ಗುರುತಿಸಿದ್ದಾರೆ. ಅಂದರೆ ಸಮರ್ಥನೆ ಅಲ್ಲ, ಹೀಗಿತ್ತು, ಇದೆ ಎನ್ನುವ ವಾಸ್ತವವನ್ನು ಗಮನಿಸುವುದು ಅಷ್ಟೆ. ನಮ್ಮನ್ನು ಆಳಲು ಬ್ರಿಟಿಷರಿಗೆ ನಮ್ಮಲ್ಲಿನ ಈ ಸಾಮಾಜಿಕ ಒಡಕು ಸಹಾಯ ನೀಡಿತು. ಸಮಕಾಲೀನವಾಗಿ ಅವರದೇ ದೇಶದೊಳಗೆ



# ಹಸುಳೆಯ ತೊದಲ್ನುಡಿಯಲ್ಲಿ ವ್ಯಾಕರಣ ದೋಷವ ಹೆಕ್ಕುವ ಪರಿ ನೋಡ !

ಹೊಸ ಕಾಲದ ವಿಜ್ಞಾನ, ಆರ್ಥಿಕ ಬೆಳವಣಿಗೆ, ಕೈಗಾರಿಕಾ ಕ್ರಾಂತಿ, ಪ್ರಜಾಪ್ರಭುತ್ವ ಮತ್ತಿತರ ಕೆಲವು ಆದರ್ಶಗಳು ಕ್ರಿಯಾಶೀಲವಾಗಿದ್ದಾಗ, ಬ್ರಿಟಿಷರು ನಮ್ಮ ಒಳಿತು ಬಯಸಿದ್ದರೆ ಅವನ್ನು ನಮ್ಮೊಳಗೂ ಹರಿಯಲು ಬಿಡಬಹುದಿತ್ತು. ಆದರೆ ನಮ್ಮನ್ನು ಕೇವಲ ಒಂದು ಜಹಗೀರಿಯಾಗಿ ಶೋಷಿಸಿದರೆ ವಿನಾ ಅವರ ಹೊಸಕಾಲದ ಜ್ಞಾನವನ್ನು, ಎನ್‌ಲೈಟನ್‌ಮೆಂಟನ್ನು ನಮಗೆ ನೀಡಲಿಲ್ಲ. ಅವರು ನಮಗೆ ಇಂಗ್ಲಿಷ್ ಕಲಿಸಲು ಮುಂದಾದ ಉದ್ದೇಶ ತಮ್ಮ ಆಡಳಿತ ಯಂತ್ರಕ್ಕೆ ಬೇಕಾದವರನ್ನು ತಯಾರಿಸಿಕೊಳ್ಳಲು ಮಾತ್ರ ಅಂತ ಮಕಾಲೆ ಮುಕ್ತವಾಗಿಯೇ ಬರೆದಿದ್ದಾನೆ. ಆದರೆ ಶಿಕ್ಷಣ ತನ್ನದೇ ಆದ ಒಳಸಂಚು ನಡೆಸಿ, ಸಬ್‌ವರ್ಸ್ಟ್ ಅಂತಾರಲ್ಲ ಆ ಬುಡಮೇಲು ಮಾಡುವ ಪ್ರವೃತ್ತಿಯದು. ಹಾಗೆಯೇ ಹಲವು ಆಂಗ್ಲ ವಿದ್ವಾಂಸರು ವೈದುಷ್ಯಕ್ಕೆ ತಕ್ಕ ಮರ್ಯಾದೆಯಲ್ಲಿ ನಮ್ಮದೇ ಸಂಸ್ಕೃತಿಯನ್ನು ಅಭ್ಯಸಿಸಿ, ಪ್ರಚಾರ ಮಾಡಿದರು. ಇವುಗಳಿಂದ ಪ್ರಚೋದಿತವಾದ ಸ್ವಾತಂತ್ರ್ಯ ಹೋರಾಟದ ತಯಾರಿ ಬ್ರಿಟಿಷರು ಉದ್ದೇಶಿಸಿದ್ದಲ್ಲ; ಬಯಸಿದ್ದಲ್ಲ. ಅದು ಸಾಮಾಜಿಕ ಪ್ರವೃತ್ತಿಯ ಸಹಜ ಬೆಳವಣಿಗೆ ಅಂತೆಯೇ ಮತಧರ್ಮದ, ಜಾತಿಯ ಬಿರುಕುಗಳನ್ನು ಬಳಸಿ ಅವರು ಒಡೆದು ಆಳಿದರೂ, ಜಮೀನ್ದಾರರೆಂಬ ಹೊಸ ವರ್ಗವನ್ನೇ ತಮ್ಮ ಬೆಂಬಲಕ್ಕೆ ಸೃಷ್ಟಿಸಿಕೊಂಡರೂ, ಅವರ ಕೈಮೀರಿ, ಸ್ವಾತಂತ್ರ್ಯದ ಹಂಬಲ ಬೆಳೆದು ಹಲವು ಚಳುವಳಿಗಳಾದವು. ಈ ಎಲ್ಲ ಬೆಳವಣಿಗೆಗಳಿಗೆ ನಾವು ಬ್ರಿಟಿಷರಿಗೆ ಕೃತಜ್ಞರಾಗಬೇಕಿಲ್ಲ, ವಿರೋಧಿಸಿಯೂ ಪ್ರಯೋಜನವಿಲ್ಲ. ವಸಾಹತುಶಾಹಿ ಶೋಷಕವೇ. ಅದರ ಹೊಟ್ಟೆಯಲ್ಲೇ ಅದರದೇ ಶತ್ರು ಹುಟ್ಟುವುದು ಅಷ್ಟೇ ಸಹಜ. ಹಾಗೆಂದು ವಸಾಹತುಶಾಹಿಯ ಧನಾತ್ಮಕತೆಯನ್ನು ಹುಡುಕಿ, ಹೆಕ್ಕಿ ತೆಗೆದು ಕೊಂಡಾಡಬೇಕಿಲ್ಲ. ದೆವ್ವಕ್ಕೆ ದೆವ್ವವೆಂದೇ ಹೆಸರಿಸಬೇಕು; ಬೇರೆ ಹೆಸರಿನಿಂದಲ್ಲ. ಕಲೋನಿಯಲಿಸಂನ ಸಮರ್ಥನೆಗೇ ಎಂಬಂತೆ ಹುಟ್ಟಿಕೊಂಡ ಪೋಸ್ಟ್ ಕಲೋನಿಯಲಿಸಂ ಮುಂತಾದುವನ್ನೆಲ್ಲ ಗುಡಿಸಿ ಕಸದ ಬುಟ್ಟಿಗೆ ಹಾಕಬೇಕು. ಅವು ಯಾವುವೂ ಸೃಜನಶೀಲ ಚರ್ಚೆಗಳಲ್ಲ.

ಇನ್‌ಫರ್‌ಮೇಷನ್ ಥಿಯರಿ ಅನ್ನುವ ಒಂದು ಅಭ್ಯಾಸನೀಯ ಶಿಸ್ತಿದೆ. ಅದು ಮೂಲತಃ ವಾಣಿಜ್ಯಲೋಕದಲ್ಲಿ ಜಾಹಿರಾತು ಕ್ಷೇತ್ರದ ಅಗತ್ಯಕ್ಕೆ ಹುಟ್ಟಿದ್ದು. ಜನರಿಗೆ ಅಗತ್ಯವಾದ ಸರಕನ್ನು ತಯಾರಿಸಿ ಮಾರುವುದು ಇಲ್ಲವೆ ತಯಾರಿಸಿದ ಸರಕನ್ನು ಅಗತ್ಯವೆನಿಸುವಂತೆ ಪ್ರಚಾರಮಾಡಿ ಮಾರುವ ತಂತ್ರಕ್ಕೆ ಸಂಬಂಧಪಟ್ಟದ್ದು. ಆದರೆ ಮುಂದೆ ಅದು ಸಾಮಾಜಿಕ ರಾಜಕೀಯ ಕ್ಷೇತ್ರಗಳಿಗೂ ಬಳಕೆಯಾಯ್ತು. ಜನಸಾಮಾನ್ಯರು ಅನೂಚಾನವಾಗಿ ಕೆಲವು ಪೂರ್ವಾಗ್ರಹಗಳನ್ನು, ವಾಸ್ತವವೆಂಬಂತೆ ನಂಬಿ, ಪ್ರೀತಿಯಿಂದ ತಬ್ಬಿ, ಉಳಿಸಿಕೊಂಡಿರುತ್ತಾರೆ. ಅದು ತನ್ನ ಪ್ರಸ್ತುತತೆಯನ್ನು ಕಳೆದುಕೊಂಡು ಸಮಕಾಲೀನದಲ್ಲಿ ಅರ್ಥಹೀನವೂ, ಇಂದಿನ ಪ್ರಗತಿಗೆ ಮಾರಕವೂ ಆಗಿ ಅಂಧಶ್ರದ್ಧೆಯಾಗಿ ಕಾಡುತ್ತಿರುತ್ತವೆ. ರೂಢಮೂಲವಾದ ಅಂಧವನ್ನು ಕೆಡವಬೇಕಾದರೆ ಒಂದು ತಂತ್ರಗಾರಿಕೆ ಬೇಕು ಅನ್ನುತ್ತದೆ ಇನ್‌ಫರ್‌ಮೇಷನ್ ಥಿಯರಿ : ಆ ಪೂರ್ವಾಗ್ರಹಗಳನ್ನು ನೇರವಾಗಿ ವಿರೋಧಿಸಬೇಡಿ. ಅದರ ನೆಲೆಯ ಸುತ್ತ ಕೆಲವು ಬಿಡಿ ಬಿಡಿ ಉಪ ಪ್ರಭೇದ ರೂಪದ ಅಷ್ಟೇನೂ ಬಿಗಿಯಾಗಿ ಹಿಡಿದಿರಿಸದ ಸಡಿಲವಾದ ಲಘು ಕಲ್ಪನೆಗಳನ್ನು ಟೀಕಿಸಿ ಅವನ್ನು ಉದುರಿಸುವುದು ಸುಲಭ. ಆ ಮಾರ್ಗದಲ್ಲಿ ಮುಂದುವರಿದಂತೆ ಬೇರೂರಿದ ಪರಿಕಲ್ಪನೆಯೂ ಸಡಿಲಗೊಳ್ಳುತ್ತದೆ. ನಂತರ ಅದನ್ನು ಕೀಳುವುದು ಸುಲಭವಾಗುತ್ತದೆ ಎನ್ನುತ್ತದೆ ಈ ತಂತ್ರ. ಮಹಾರಾಷ್ಟ್ರದಲ್ಲಿ ಸಾಮಾನ್ಯ ಜನ ಇಲಿಗಳನ್ನು ಬೆನಕನ ವಾಹನವೆಂದು ಪೂಜಿಸುತ್ತಾರೆ. ಅದು ಅಪಾರವಾದ ಧಾನ್ಯರಾಶಿಯನ್ನು ಹಾಳುಮಾಡುತ್ತಿದೆ. ಅದನ್ನು ಕೊಲ್ಲುವುದು ಅಗತ್ಯ. ಚೀನದ ಸರ್ವಾಧಿಕಾರವಾದರೆ ಒಂದು ಅಪ್ಪಣೆ ಸಾಕಾಗಿತ್ತು.

ಜಾತಿಪದ್ಧತಿಯ ವಿರುದ್ಧ ಹೋರಾಟಕ್ಕೆ ಸಹಸ್ರ ವರ್ಷದ ಇತಿಹಾಸವಿದೆ. ಕಾಲದಿಂದ ಕಾಲಕ್ಕೆ ಗುಣಾತ್ಮಕವಾಗಿ ಪ್ರಗತಿಪರ ಬದಲಾವಣೆಗಳು ಆಗಿವೆ. ಅದು ಬಸವಣ್ಣನ ಸಾಮಾಜಿಕ ಹೋರಾಟದಲ್ಲಿ, ಅತಿ ಮುಖ್ಯ ಘಟ್ಟವನ್ನು ಮುಟ್ಟಿತು ಮತ್ತು ಸಾಕಷ್ಟು ಪ್ರಭಾವ ಬೀರಿತು. ಆತ ಪ್ರಾರಂಭಿಸಿದ ವಚನ ಚಳುವಳಿ ಇಂದಿಗೂ ಪ್ರಸ್ತುತವಾಗಿರುವುದೇ ಅದರ ಗಟ್ಟಿತನ. ಅದರ ಕೆಲಸ ಇನ್ನೂ ಮುಂದುವರಿದಿದೆ. ಅದು ಕೇವಲ ಆಧ್ಯಾತ್ಮಿಕತೆಯ ವಿಷಯ ಅನ್ನುವುದು ಆಗುತ್ತಿರುವ ಬದಲಾವಣೆಯನ್ನು ದಿಕ್ಕು ತಪ್ಪಿಸುತ್ತದೆ. ಆಧ್ಯಾತ್ಮಿಕತೆ ವ್ಯಕ್ತಿಗೆ ಸಂಬಂಧಪಟ್ಟಿದ್ದು. ಚಳುವಳಿ ವ್ಯಷ್ಟಿಗೆ ಸಂಬಂಧಪಟ್ಟಿದ್ದು.

ಅವರು ಗುಬ್ಬಚ್ಚಿಗಳನ್ನು ಹಾಗೆ ಕೊಂದು ಮುಂದೆ ಅದು ದವಸಧಾನ್ಯಗಳ ಸಸ್ಯವನ್ನು ಕಾಡುವ ಕ್ರಿಮಿಕೀಟಗಳ ಹೆಚ್ಚಳಕ್ಕೆ ಕಾರಣವಾಯ್ತು. ಇದು ಸರ್ವಾಧಿಕಾರದ ಸಮಸ್ಯೆ. ನಮ್ಮ ಕೃಷಿ ಇಲಾಖೆಯ ತಜ್ಞರು ಇಲಿಗಳ ವಿರುದ್ಧ ಪ್ರಚಾರ ಮಾಡಲು ಬೇರೆಯೇ ತಂತ್ರ ಬಳಸಿದರು ಮತ್ತು ಅದು ಫಲ ನೀಡಿತು ಕೂಡ. ಇಲಿ ಬೆನಕನ ವಾಹನ ಗೌರವಾರ್ಹ; ಆದರೆ ವಾಹನ ತನ್ನ ಮಿತಿಯಲ್ಲಷ್ಟೇ ಇರಬೇಕು. ಅದಕ್ಕೆಂದೇ ಬೆನಕ ಅದನ್ನು ತನ್ನ ತೊಡೆಯ ಕೆಳಗೆ ಮೆಟ್ಟಿ ಹಿಡಿದಿದ್ದಾನೆ. ಅದರ ಸಂಖ್ಯೆಯನ್ನು ಮಿತಿ ಮೀರದಂತೆ ನಿಯಂತ್ರಿಸಿದರೆ ಅದನ್ನು ಅಗೌರವಿಸಿದಂತೆ ಅಲ್ಲ ಅಂತ ಬೆನಕನೇ ಹೇಳುತ್ತಿಲ್ಲವೇ! ಈ ವಿಚಾರಧಾರೆ ಜನಕ್ಕೆ ಒಪ್ಪಿತವಾಗಿ, ಉಪಯೋಗಕ್ಕೆ ಬಂತು.

ವೈದಿಕ ಪದ್ಧತಿಯ ವಿರುದ್ಧ ಹೋರಾಟದಲ್ಲಿ ಬುದ್ಧನ ಮಾರ್ಗ ಶಾಶ್ವತ ಪರಿಣಾಮ ಉಂಟುಮಾಡದೆ, ವೈದಿಕವೆ ಪುನಃ ಮೇಲುಗೈ ಆದದ್ದು ಒಂದು ಘಟ್ಟ. ಬುದ್ಧ ಅಳವಡಿಸಿ ಕೊಂಡ ಒಂದು ಮುಖ್ಯ ತಂತ್ರದಲ್ಲಿ ವೈದಿಕದ ವೇದ ಭಾಷೆಯನ್ನು ಸಂಸ್ಕೃತವನ್ನು, ಸಾಮಾನ್ಯ ಜನರ ಭಾಷೆ ಅಲ್ಲದ್ದನ್ನು ಅಂದರೆ ಸಾಮಾನ್ಯರಿಗೆ ನಿಗೂಢ ವಾದುದನ್ನು ಕೈಬಿಟ್ಟು ಸಾಮಾನ್ಯರ ಭಾಷೆಯನ್ನೇ ಮತಪ್ರಚಾರಕ್ಕೆ, ಪ್ರಸ್ತಾವನೆಗೆ ಬಳಸಿದ್ದು ಗಮನಾರ್ಹವಾದುದು. ಅದೇ ಸಮಯ ಆ ಚಿಂತನಾ ಲಹರಿ ವೈದಿಕಕ್ಕೆ ನೇರವಾಗಿ ತದ್ವಿರುದ್ಧ ವಾದುದು, ಹಣಾಹಣಿ, ಮುಖಾಮುಖಿಯಾದದ್ದು, ಅದು ತಂತ್ರವಾಗಿ ಅದರ ದೌರ್ಬಲ್ಯವೂ ಆಗಿತ್ತು ಎಂದು ಇಂದಿನ ಚಿಂತನೆಯಿಂದ ಹೇಳಬಹುದು. ಶಂಕರ ಪುನಃ ವೈದಿಕವನ್ನು ಎತ್ತಿ ನಿಲ್ಲಿಸುವಾಗ ಬುದ್ಧನ ಮಾಯಾವಾದವನ್ನೇ ಸಮರ್ಥಿಸುವ ಮುಸುಕು ಹಾಕುವುದು ಮತ್ತು ಪುನಃ ಸಂಸ್ಕೃತವನ್ನು ಮಾಧ್ಯಮವಾಗಿ ಸ್ಥಾಪಿಸುವುದು ಒಂದು ತಂತ್ರಗಾರಿಕೆಯಾಗಿ ತೋರುತ್ತದೆ. ತಮಿಳುನಾಡಿನ ಅಥವಾ ದಕ್ಷಿಣ ಭಾರತ ಅನ್ನೋಣವೇ? – ಶೈವ ಚಳುವಳಿ ವೈದಿಕಕ್ಕೆ ನೇರವಾಗಿ ಸವಾಲು ಹಾಕಿದ ಅಬ್ರಾಹ್ಮಣ ಚಳುವಳಿಯಾಗಿ, ಸಾಧಾರಣ ಜನರಿಗೆ ಗ್ರಾಹ್ಯವಾದ ಆಡುಭಾಷೆ ಮತ್ತು ಭಕ್ತಿಪಂಥವನ್ನು ಅಳವಡಿಸಿಕೊಳ್ಳುತ್ತದೆ. ತದನಂತರ ಬಂದ ರಾಮಾನುಜ ಮಾರ್ಗ ಇನ್ನು ಕೆಲವು ಆಸಕ್ತಿಪೂರ್ಣ ಸಮನ್ವಯಗಳನ್ನು ಮುಂದಿಡುತ್ತದೆ. ಅದು ಸಂಸ್ಕೃತವನ್ನು, ಆಡು ಭಾಷೆ ತಮಿಳನ್ನು ಅವೆರಡೂ ಭಾಷೆಗಳ ರಚನೆಗಳನ್ನು ತನ್ನ ಧರ್ಮ ತತ್ವಕ್ಕೆ ಆಕರವೆಂದು, ಸಮಾನವೆಂದು ಸಮೀಕರಿಸುತ್ತದೆ ಮತ್ತು ಮುಂದುವರಿದು ಎಲ್ಲ ಜಾತಿಗಳಿಗೂ ಅದರೊಳಗೆ ಪ್ರವೇಶ ಏರ್ಪಡಿಸುತ್ತದೆ. ರಾಮಾನುಜನ ರಚನೆಯಲ್ಲೇ ಜಾತಿ ಜಾತಿಗಳ ಮೇಲುಕೀಳು ಅಷ್ಟಾಗಿ ಹಣಕಿ ಹಾಕದೆ, ಎಷ್ಟೇ ದುರ್ಬಲವಾದರೂ ಜಾತಿವಿನಾಶಕ ಅಥವಾ ಸಮಾನಕ ಚಿಂತೆ ಮೊಟ್ಟಮೊದಲು ಕಲೆ ಹಾಕುತ್ತದೆ. ಆತನ ಅನುಯಾಯಿಗಳು ಜಾತಿ ಪ್ರಬೇಧಗಳನ್ನು ಉಳಿಸಿ ಕೊಂಡೇ ಆದರೂ ಎಲ್ಲರೂ ಬ್ರಾಹ್ಮಣನೂ ಅಬ್ರಾಹ್ಮಣನೂ ಶ್ರೀವೈಷ್ಣವನೆ ಎನ್ನುವ ನೆಲೆಯಲ್ಲಿ ಒಂದು ಮಹತ್ತರ ಸಮಾನತೆಯ ಹೆಜ್ಜೆ ಇಟ್ಟಂತೆ ತೋರುತ್ತದೆ. ಕರ್ನಾಟಕದ ವಚನ ಚಳುವಳಿ ಸ್ವಲ್ಪ ಹೆಚ್ಚು ಕಡಿಮೆ ಇದರ ಮುಂದುವರಿದ ಭಾಗವೆನ್ನಿಸುತ್ತದೆ. ಬಸವಣ್ಣನವರಿಗೆ ಸುಮಾರು ೫೦ ವರ್ಷ ಮುಂಚೆಯಷ್ಟೆ ಕರ್ನಾಟಕದಲ್ಲಿ ರಾಮಾನುಜ ಇದ್ದದ್ದು.




ಇದನ್ನು ಕೇವಲ ವಚನ ಚಳುವಳಿ ಎನ್ನುವುದು ಸರಿಯಲ್ಲ, ವಚನ ಮಾಧ್ಯಮವಷ್ಟೆ. ಅದೂ ವೈದಿಕವನ್ನು ಸಾಮಾನ್ಯ ಗೊಳಿಸುವ, ಸಕಲರನ್ನೂ ಒಳಗೊಳಿಸುವ ಮಹಾ ಪ್ರಯತ್ನ, ಶೈವ ವೈಷ್ಣವ ಮೇಲ್ನೋಟದ ಭಿನ್ನತೆ. ಅದೂ ಮುಂದುವರಿದ ವಿಶಿಷ್ಟಾ ದ್ವೈತವೇ, ಭಕ್ತಿಪಂಥವೇ. ಈ ಕಲ್ಯಾಣದ ಕ್ರಾಂತಿ ಎಲ್ಲ ಜಾತಿಗಳ ಸಮಾನತೆ ಸಾರುವಲ್ಲಿ ಹಿಂದೆಂದಿಗಿಂತ ದೊಡ್ಡ ಹೆಜ್ಜೆ ಇಟ್ಟಿತು.

ವಚನ ಚಳುವಳಿಯ ಮುಂದೆ ಇದ್ದ ಸವಾಲುಗಳು ವೈದಿಕದ ಏಕಸ್ವಾಮ್ಯವಾಗಿದ್ದ ಮತಧರ್ಮದ ಕೀಲಿಯನ್ನು ಜನಸಾಮಾನ್ಯರಿಗೆ ಒದಗಿಸುವುದು ಅಂದರೆ ಆ ಮತಧರ್ಮದ ತತ್ವಗಳು ಅಂಥದೇನೂ ಗಹನವಲ್ಲ, ಸಾಮಾನ್ಯ, ಅಶಿಕ್ಷಿತ ಕೀಳುಜಾತಿಯವನೂ ಅರಿತು ಆಚರಿಸ ಬಹುದಾದಷ್ಟು ಸರಳ; ವೈದಿಕರು ತಮ್ಮ ಪ್ರಭುತ್ವದ ಮೇಲಿನ ಅಧಿಕಾರ ಉಳಿಸಿಕೊಳ್ಳಲು ಅದರ ಸುತ್ತ ರಹಸ್ಯವನ್ನು ಬೆಸೆದಿದ್ದಾರೆ, ಸಾಮಾನ್ಯ ಜನರಿಗೆ ಗ್ರಾಹ್ಯವಾಗದ ಸಂಸ್ಕೃತ, ವೇದಪುರಾಣದ ಪರಿಭಾಷೆ ಬಳಸುತ್ತಾರೆ. ಅವುಗಳ ತಿರುಳನ್ನೋ ಜನಸಾಮಾನ್ಯರಿಗೆ ಜಾತ್ಯತೀತವಾಗಿ ಅವರದೇ ಭಾಷೆಯಲ್ಲಿ ನೀಡಿದರೆ ಅದು ಸಾಮಾಜಿಕವಾಗಿ ಉತ್ತಮ ಬೆಳವಣಿಗೆ ಎನ್ನುವ ಪರಿ ಇದು. ಈ ಮಾರ್ಗ ಜಾತಿ ವಿನಾಶಕವೇ ಅಲ್ಲವೇ? ಅವರು ಸಾಮಾನ್ಯರಿಗೆ ಆಧ್ಯಾತ್ಮಿಕತೆಗೆ ಹಕ್ಕು, ಪ್ರವೇಶ ದೊರಕಿಸಿಕೊಡುವುದರ ಮೂಲಕ ಸಾಧಿಸಿದ್ದೇನು? ಎಲ್ಲರನ್ನು ವೈದಿಕರನ್ನಾಗಿಸುವುದೇ ಅವರ ಸಂಚೇನು? ಸಾಮಾನ್ಯ ಜನರ ಮತಧರ್ಮ ಜ್ಞಾನಕ್ಕೆ ಅವರ ಆಡುಭಾಷೆಯ ರಚನೆಗಳೇ ಆಕರವಾಗಬಲ್ಲುವು. ವೇದಗೀತೆಗಳ ಹಂಗು ಅಗತ್ಯವಲ್ಲ. ಈ ಮೂಲಕ ಬೆಳೆದು ಬರುವ ಶರಣನೂ ಆ ಋಷಿಗಳಷ್ಟೇ ಆದರಣೀಯರು. ಜಾತ್ಯತೀತವಾಗಿ ಎಲ್ಲರಿಗೂ ತೆರೆದುಕೊಳ್ಳುವ ಪ್ರಯತ್ನವಾಗಿ ಈ ಬೆಳವಣಿಗೆ ಕ್ರಾಂತಿಕಾರಿ ಪರಿಣಾಮ ಬೀರಿತು. ಅದು ಕೇವಲ ಆಧ್ಯಾತ್ಮಿಕ ಕ್ರಾಂತಿಯಲ್ಲ. ಆ ಮುಸುಕಿನಲ್ಲಿ ನಡೆದ ಸಾಮಾಜಿಕ ಕ್ರಾಂತಿ. ಇಂದು ಆ ಆಧ್ಯಾತ್ಮಿಕ ಕ್ರಾಂತಿಯ ಭಾಷೆಯಲ್ಲಿ ಸಾಮಾಜಿಕ ಪರಿವರ್ತನೆ ಮಾಡಲಾಗು ವುದಿಲ್ಲ. ಬಂಡವಾಳದ ಬೆಳವಣಿಗೆಗೆ ವಿಕಾಸಕ್ಕೆ ಜಾತಿಪದ್ಧತಿ ತೀವ್ರ ಸ್ವರೂಪದ ಅಡಚಣೆಯಾಗಿದೆ. ಸಮಾನತೆಯ, ಪ್ರಜಾಪ್ರಭುತ್ವದ ಹೆಸರಿನಲ್ಲಿ ಅದನ್ನು ತೊಡೆದು ಹಾಕದೆ ಮುಂದಿನ ಪ್ರಗತಿ ಸಾಧ್ಯವಿಲ್ಲ. ಯಾವುದೇ ಚಳುವಳಿಗಳನ್ನು ಅಂದಂದಿನ ಸಾಮಾಜಿಕ, ಆರ್ಥಿಕ, ರಾಜಕೀಯ ನೆಲೆಯಲ್ಲಿ ಇಟ್ಟು ವಿಮರ್ಶಿಸದೆ ಇದ್ದರೆ ಆ ಚರ್ಚೆ ದಾರಿತಪ್ಪುತ್ತದೆ. ಪ್ರಭುತ್ವದ ಸೂತ್ರ ಹಿಡಿಯಲು ಮತಧರ್ಮದ ಭಾಷೆ - ಅದನ್ನು ಆಧ್ಯಾತ್ಮಿಕ ಮಾರ್ಗವೆಂದು ಹೇಳಿಕೊಂಡರೆ ಕೆಲವರಿಗೆ ಹಿತವೆನ್ನಿಸುತ್ತದೆ. ಹೇಳಿಕೊಳ್ಳಲಿ - ಶ್ರೇಣೀಕೃತ ಸಮಾಜ ವ್ಯವಸ್ಥೆಯ ಭಾಷೆ ಕಾಲಕಾಲಕ್ಕೆ ಬದಲಾಯಿ ಸುತ್ತದೆ. ಅಂದಿನ ಭಾಷೆ ವಚನ ಚಳವಳಿ. ಅವು ಇಂದಿಗೂ ಅರ್ಥವತ್ತಾಗಿರುವುದೇ ಅದರ ಹಿರಿಮೆ. ವಚನಗಳನ್ನು ಯಾರಿಗಾಗಿ ರಚಿಸಿದರು? ಬಹುವಾಗಿ ಸಾಧಾರಣ ಜನತೆಗಾಗಿ; ಅನುಭವ ಮಂಟಪಕ್ಕಾಗಿ ಮಾತ್ರ ಅಲ್ಲ. ಅವು ಶೋಷಣೆಯ ವಿರುದ್ಧದ ಸ್ಪಷ್ಟ ದನಿ. ಅಂದಿನ ಜಾತಿವ್ಯವಸ್ಥೆ ಅಂದಿನ ಶೋಷಣೆಯ ಮೂಲ. ಶೋಷಣೆಗೆ ವಿರೋಧ ವನ್ನು ಶಿವನ ಹೆಸರಿನಲ್ಲಿ ಪ್ರಕಟಿಸಿದರೆ ಅದನ್ನು ಹತ್ತಿಕ್ಕಲು ಎಂಥ ಪ್ರಭುತ್ವವೂ ಹೆದರುತ್ತದೆ. ಅಂದು ಆ ಮಾರ್ಗ ಕ್ರಾಂತಿಕಾರಿ. ಇಂದು ಇದು ಸಾಲದು. ಆಧ್ಯಾತ್ಮಿಕವೆಂಬ ಮತಧರ್ಮ ಭಾಷೆ ಸೋತಿದೆ. ಇದು ಕೈಗಾರಿಕ ಯುಗ. ಇಂದಿನ ವಿರೋಧ ಪ್ರಕಟಣೆಗೆ ಬೇರೆಯೇ ನುಡಿಗಟ್ಟುಗಳು ತಯಾರಾಗಿವೆ. ಇಂದಿನ ಉದ್ದೇಶಕ್ಕೂ ಹಲವಾರು ವಚನ ಗಳನ್ನು ಬಳಸಬಹುದು. ಆ ರಚನೆಗಳ ಆಶ್ಚರ್ಯಕರ ಪ್ರಸುತ್ತತೆ, ಘಟ್ಟಿತನ! ಅವು ನೀಡುವ ಬಂಡಾಯದ ಕರೆ!

## ಅಭಿನಂದನೆಗಳು



ಕರ್ನಾಟಕ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ದಾರ್ಶನಿಕ ಸಮೂಹ (ವಿಷನ್ ಗ್ರೂಪ್) ಈ ಬಾರಿಯ ತನ್ನ ೨೦೧೨ನೇ ಸಾಲಿನ 'ಶ್ರೇಷ್ಠ ವಿಜ್ಞಾನ ಸಂವಹನಕಾರ' ರಾಜ್ಯ ಪ್ರಶಸ್ತಿಯನ್ನು ಜನಪ್ರಿಯ ಆಯುರ್ವೇದ ವೈದ್ಯೆ ಡಾ॥ ವಸುಂಧರಾ ಭೂಪತಿ ಅವರಿಗೆ ನೀಡಿ ಗೌರವಿಸಿದೆ. ಪ್ರಶಸ್ತಿಯು ನಗದು ಹಾಗೂ ಸ್ಮರಣ ಫಲಕವನ್ನು ಒಳಗೊಂಡಿದೆ. ನವಕರ್ನಾಟಕ ಪ್ರಕಾಶನಕ್ಕೆ ಪುಸ್ತಕಗಳನ್ನು ಹಾಗೂ 'ಹೊಸತು' ಪತ್ರಿಕೆಗೆ ಲೇಖನಗಳನ್ನು ಆಗಾಗ್ಗೆ ಬರೆಯುತ್ತಿರುವ ಪ್ರಶಸ್ತಿ ಪುರಸ್ಕೃತೆ ಡಾ॥ ವಸುಂಧರಾ ಭೂಪತಿ ಅವರಿಗೆ ಪತ್ರಿಕೆ ಹಾಗೂ ಪ್ರಕಾಶನ ಬಳಗ ಅಭಿನಂದನೆ ಸಲ್ಲಿಸುತ್ತದೆ.

# ಮೊಡವೆ



ಚಂದ್ರನಂತ ಮೊಗದಲ್ಲಿ ಬಂತೊಂದು ಮೊಡವೆ
ಹಾಲ್ಗೆನ್ನೆಯ ಕೆನ್ನೆಗೆ ಬೇಕೆ ಇದರ ಗೊಡವೆ
ಚೆಲುವೆಯ ಸೊಬಗಿಗೆ ಬೇಕಿಲ್ಲ ಒಡವೆ
ಇಂತಹ ಸುಂದರಿಯನು ನೀ ತಾಕಬೇಡವೆ...

ಚೈತ್ರದ ಚಂದ್ರನ ತಾರೆಗಳ ನಡುವೆ
ನಕ್ಷತ್ರಗಳಂತೆ ಬೆಲೆ ಬಾಳುವ ಒಡವೆ
ಕಂಗೊಳಿಸುವ ಆ ಕಣ್ಣುಗಳ ಕೆಳಗಿನ ಮೊಡವೆ
ಏಕೇ ನೀ ದೃಷ್ಟಿ ಬೊಟ್ಟಿನಂತೆ ನೋಡುವೆ...

ತಿಂಗಳ ಅಂತ್ಯದ ದಿನಕೆ ಎದುರು ನೋಡುವೆ
ಸುಂದರ ಕನ್ಯೆಯ ಸೊಬಗನು ನೀ ಕಾಡುವೆ
ಅವಳಂದವ ಕೆಡಿಸುತ ನೀ ಅವಮಾನ ಪಡುವೆ
ಆಕೆಯ ಸಂಗವ ನೀನೆಂದು ಬಿಡುವೆ...

ಚಿನ್ಮಯ ಚೆಲುವೆಯಲ್ಲಿ ನೀ ಬಂದು ಕೂಡುವೆ
ಮುಗ್ಧ ಮನಸ್ಸಿಗೆ ಅಮಿತ ನೋವು ಕೊಡುವೆ
ಮತ್ತಷ್ಟು ಕಷ್ಟವ ನೀಡಿ ಸಂತಸದಿ ಹಾಡುವೆ
ಸುಂದರಿಯ ಕೋಪಕೆ ಸಿಲುಕಿ ನೀ ಬಾಡುವೆ...

ಪ್ರೊ. ಎಸ್. ಆರ್. ವಿ., ನಾರಾಯಣಸ್ವಾಮಿ
ನಂ. ೨೮, ಬಳೇರ ಮನೆಗಳು, ನಾಗಪ್ಪರ ರಸ್ತೆ, ಮುಳ್ಳಿ ಅಂಚೆ,
ಮುಳಬಾಗಲು ತಾಲೂಕು, ಕೋಲಾರ ಜಿಲ್ಲೆ, ಮುಳ್ಳಿ - ೫೬೩ ೧೩೦

ಯಾವುದೇ ವೈರುಧ್ಯದ ಅಲಂಕಾರ ಪರಿಕರಗಳಲ್ಲಿನ ನೇರ ಆಡು ಮಾತು ! ನಮ್ಮ ಇಂದಿನ ಹೋರಾಟಕ್ಕೂ ಒದಗುವ ಇಷ್ಟು ಶತಮಾನಗಳಾದರೂ ತುಕ್ಕು ಹಿಡಿಯದ ಹತಿಯಾರುಗಳು ನಮ್ಮ ವಚನ ನಿಧಿ. ಅವಸಾನವಾಗುತ್ತಿರುವ ಮತಧರ್ಮದಿಂದ ಬಿಡಿಸಿಕೊಂಡ ಹೊಸಕಾಲದ ಮಾನವ ಧರ್ಮ ಸ್ಥಾಪನೆಗೆ ಒದಗುವ ಸಿದ್ಧ ಹತಿಯಾರುಗಳು.

ಹಸುಳೆಯ ತೊದಲ್ನುಡಿಯಲ್ಲಿ ವ್ಯಾಕರಣ ದೋಷವ ಹೆಕ್ಕುವ ಪರಿ ನೋಡಾ! ನಗೆಯು ಬರುತಿದೆ ಎನಗೆ ನಗೆಯು ಬರುತಿದೆ! ಹೀಗೆಂದು ಇಂದು ಬರೆದರೆ ಈ ಭಾಷೆ ಬರೆದವ ನಗೆಪಾಟಲಿಗೆ ಈಡಾಗಬೇಕಾಗುತ್ತದೆ. ಹಿಂದೊಮ್ಮೆ ಅದು ಸುಂದರ ಅನಿಸುತ್ತಿತ್ತು. ಭಾಷೆ ಸಾಮಾಜಿಕ ಬದಲಾವಣೆಯ ಹಂತಗಳನ್ನು ಹೊರಗೆಡವ ಬಲ್ಲದು. ಇತಿಹಾಸದ ನೆಲೆಗಟ್ಟಿನಲ್ಲೇ ವಿಮರ್ಶೆ ಸಾಗದಿದ್ದರೆ ಅದು ಹಲವಾರು ಅಸಾಂಗತ್ಯಗಳಿಗೆ ಎಡೆಮಾಡಿ ಕೊಡುತ್ತದೆ. ವಚನಗಳು ಸಮಾಜವನ್ನು ಉದ್ದೇಶಿಸಿದವು ಅವು ವ್ಯಕ್ತಿಯ ಆಧ್ಯಾತ್ಮಿಕ ಬೆಳವಣಿಗೆಗೂ ಬರುತ್ತವೆ. ವ್ಯಕ್ತಿಯನ್ನು ವ್ಯಷ್ಠಿಯಲ್ಲಿ ಸ್ಥಾಪಿಸುತ್ತದೆ. ವ್ಯಾಕರಣವೆಂದಾಗ ನೆನಪಿಗೆ ಬರುವುದು: ಅಂಥ ತರ್ಕಮತಿ ಶಂಕರ ಕೊನೆಗೂ ಹೇಳಿದ್ದು ಈ 'ಢುಕೃಿಯಂಕರಣ' ಬಿಡು ಮೂಢಮತೆ ! ಮಠಾಧೀಶರು ಇತರ ಮತಧರ್ಮೀಯರೊಡನೆ ಕಲೆತು, ತಮ್ಮ ನಡುವಿನ ಭಿನ್ನಭಿಪ್ರಾಯಗಳನ್ನು ಬದಿಗಿಟ್ಟು, ಧರ್ಮದ ರಕ್ಷಣೆಗೆ-ಸಂಸ್ಕೃತಿ ಅಂತಲೂ ಪ್ರಯೋಗಿಸಿ ಗೊಂದಲ ಉಂಟುಮಾಡುತ್ತಾರೆ. ಈ ಜಾಣರು - ಮುಂದಾಗ ಬೇಕು ಎಂದು ಕರೆ ನೀಡುತ್ತಿರುವುದರ ಅರ್ಥ ಜನತೆ ಮತಧರ್ಮಗಳ ಭ್ರಮೆ ಕಳೆದುಕೊಳ್ಳುತ್ತಿದ್ದಾರೆ ಅಂತ. ವೈಯಕ್ತಿಕ ಆಧ್ಯಾತ್ಮಿಕ ತುಮುಲ ಮಠದ ಹಿಡಿತದಿಂದ ಬಿಡುಗಡೆ ಯಾಗುತ್ತಿರುವುದು ಸ್ಪಷ್ಟ. ಮಾನವೀಯತೆ ಮತ್ತು ಸಾಮೂಹಿಕ ನ್ಯಾಯ ಇಂದಿನ ಸಾಮಾಜಿಕ ಪ್ರಜ್ಞೆಯನ್ನು ಸಂಚಲಿಸು ತ್ತಿರುವುದು. ವೈದಿಕ ಮತಕ್ಕೆ ಇದು ಒಂದು ಸವಾಲು. ಇದನ್ನು ಅಂಗೀಕರಿಸಲೂ ಆಗದೆ ತಿರಸ್ಕರಿಸಲೂ ಆಗದೆ ರಾಜಿಯ ಮಾರ್ಗ ಹುಡುಕಿಕೊಳ್ಳುವ ಪರಿಸ್ಥಿತಿ ಉಂಟುಮಾಡಿದೆ ಆ ಚಳುವಳಿಗಳ ಸಾಧನೆ. ಶೂದ್ರ ವೇದ ಕೇಳಿದರೆ ಆತನ ಕಿವಿಗೆ ಕಾದ ಸೀಸ ಸುರಿಯಬೇಕೆಂದಿದ್ದ ನಮ್ಮ ನಡುವೆ, ಬ್ರಾಹ್ಮಣರ ಬೀದಿಯಲ್ಲಿ ಬಸವಣ್ಣ ಮತದ - ಲಿಂಗಾಯತರು, ವೀರಶೈವರ - ಜಂಗಮರು ವೇದೋಪನಿಷತ್ತುಗಳನ್ನು ಬಾಯಿಯಲ್ಲಿ ಉಚ್ಚರಿಸುತ್ತಾ ಹಾದುಹೋಗುವ ಕಚ್ಚು ಬಂದದ್ದು ಈ ಚಳುವಳಿಯ ಸಾಧನೆ ಹಾಗೆಯೇ ಪ್ರಭುತ್ವದ ಹಿಡತವೂ ವೈದಿಕದ ಕೈ ಜಾರಿ ಹೋಯಿತು.

ವೈಯಕ್ತಿಕವಾಗಿ ಮೋಕ್ಷ ಸಾಧಿಸಿಕೊಳ್ಳುವ ವೈದಿಕ ತತ್ವ ಗಳಿಗೆ ಈಗ ಮನ್ನಣೆ ಇಲ್ಲ. ಸಾಮೂಹಿಕವಾಗಿ ಒಳಿತು ಸಾಧಿಸುವ ಮಾರ್ಗದ ಹುಡುಕು ಇಂದಿನ ಹಂಬಲ. ಸಮಾನತೆ, ಪ್ರಜಾಪ್ರಭುತ್ವಗಳ ಬಯಕೆ ಬೆಳೆಯಲು ಆ ಕಳೆದು ಆ ಎಲ್ಲ ಚಳುವಳಿಗಳೂ ತಮ್ಮ ಕೊಡುಗೆ ನೀಡಿವೆ. ಆ ಕಳೆದು ಹೋದವುಗಳ ಎಲ್ಲಾ ಚರ್ಚೆಯೂ ಒಂದು ಚಾರಿತ್ರಿಕ ಮಿತಿ ಮೀರಿದಾಗ ಅರ್ಥಶೂನ್ಯವಾಗುತ್ತದೆ. ಕೆಲ ವಿದ್ವಾಂಸರಿಗೆ ವೈದುಷ್ಯದ ಮುದ ನೀಡಬಹುದು. ಜನತೆಗೆ ಬೇರೆಯೇ ಸಮಸ್ಯೆಗಳು, ಆಶಯಗಳು ಇವೆ. ಅವರಿಗೆ ಈ ವಿವಾದಕ್ಕೆ ಕಿವಿಗೊಡಲು ಸಮಯವಿಲ್ಲ.

ಚಾರಿತ್ರಿಕ ಘಟ್ಟಗಳಲ್ಲಿ ಅಂದಂದಿನ ಮುಖ್ಯ ಸೆಲೆಗಳ ಭಾಷೆ ಯಲ್ಲೇ ಅಂದಿನ ಎಲ್ಲ ಚರ್ಚೆಗಳೂ ನಡೆಯುವುದು. ೧೦-೧೨ ನೆಯ ಶತಮಾನದ ಘಟ್ಟದಲ್ಲಿ ಪ್ರಭುತ್ವದ ಅಧಿಕಾರ ಹಿಡಿಯುವ ಚರ್ಚೆಯಲ್ಲಿ ಅಂದಿನ ಆಧ್ಯಾತ್ಮಿಕ ಪುನರ್ವಿಮರ್ಶೆಯ ಚರ್ಚೆ ಪ್ರಮುಖ ಪಾತ್ರವಹಿಸುತ್ತದೆ. ಆಧ್ಯಾತ್ಮಿಕತೆಯ ಲೋಕಕ್ಕೆ ಪ್ರವೇಶ ಕೇವಲ ಉನ್ನತ ಜಾತಿ ವರ್ಗಕ್ಕೆ ಮಾತ್ರ ಸೀಮಿತವಲ್ಲ ಎನ್ನುವ ಚಿಂತನೆ ಪ್ರಭುತ್ವದ ಮೂಲವನ್ನೇ ಅಲುಗಾಡಿಸುತ್ತದೆ. ಅದು ಕೇವಲ ಕೆಲ ಅನುಭಾವಿಗಳ ಮಂಟಪದ ಆರಾಮದ ಚರ್ಚೆಗೆ ಸೀಮಿತ ವಾಗದೆ ಸಾಮಾಜಿಕ ಪರಿವರ್ತನೆಯ ಕ್ರಿಯೆಯಾಗಿ, ಪ್ರಭುತ್ವ ವನ್ನು ಅದರ ಬೇರನ್ನೇ ಅಲುಗಾಡಿ ಸುತ್ತದೆ ಇಂದು ನಮ್ಮ ಮಟ್ಟಿಗೆ ಜಾತಿ-ಜಾತಿ ವಿನಾಶದ ಚರ್ಚೆ ಅದೇ ಆಧ್ಯಾತ್ಮಿಕತೆಯ ಜಾಡು ಹಿಡಿಯಲಾರದು. ಅದು ಆರ್ಥಿಕ ಸಮಾನತೆ, ಪ್ರಜಾಪ್ರಭುತ್ವದ ಚರ್ಚೆ. ಆಧ್ಯಾತ್ಮಿಕ ಚರ್ಚೆಯನ್ನು ಇಂದು ಬೇಕಾದರೆ, ಸಾಮಾನ್ಯಜನರಿಗೆ ಆಸಕ್ತಿ ಯಿಲ್ಲದ ಕೆಲವೇ ಜನರ ಚರ್ಚೆಯಾಗಿಸಿಕೊಳ್ಳಬಹುದು. ವಚನಗಳನ್ನು ಮೊದ ಮೊದಲಿಗೆ ಅನುಭವ ಮಂಟಪಕ್ಕೆ ರಚಿಸಿಕೊಂಡರೇನೋ. ಆದರೆ ಎಲ್ಲ ಸ್ತರದ ಜಾತಿಯ ಜನ ಅದನ್ನು ರಚಿಸ ಲಾರಂಭಿಸಿದ ಮೇಲೆ ಅದು ಚಳುವಳಿಯ ರೂಪ ಪಡೆದು ಅನುಭವ ಮಂಟಪದ ಎಲ್ಲೆಮೀರಿ, ರಾಜನ ಅಧಿಕಾರದ ಬುಡಕ್ಕೆ ಪೆಟ್ಟಾಗುವ ಮಟ್ಟಕ್ಕೆ ವಿಸ್ತೃತವಾದುದನ್ನು ಗಮನಿಸಬೇಕು. ಐತಿಹಾಸಿಕ ಅಭ್ಯಸನೀಯ ಮಾರ್ಗದಲ್ಲಿ ಈ ಬೆಳವಣಿಗೆಯನ್ನು ಗಮನಿಸುವುದು ಪ್ರಸ್ತುತ. ಗಾಂಧಿ, ತಾನು ಮಾಡಿದ್ದೆಲ್ಲ ತನ್ನ ಸ್ವಂತ ಆಧ್ಯಾತ್ಮಿಕ ವಿಕಾಸಕ್ಕೆ, ಸತ್ಯಾನ್ವೇಷಣಕ್ಕೆ, ಸ್ವಾತಂತ್ರ್ಯ ಹೋರಾಟವೂ ಅದರ ಒಂದು ಅಂಗವೇ ವಿನಾ ಪ್ರಮುಖವಲ್ಲ ಅಂದರು. ಆದರೆ ಅದು ನಿಜವೇ ? ಪರಿಣಾಮದಲ್ಲಂತೂ ಅಲ್ಲ. ಅವರೊಬ್ಬರೇ ಗುಹೆಯಲ್ಲಿ ಕುಳಿತು ತಪಸ್ಸು ಮಾಡಿದ್ದರೆ ಸ್ವಾತಂತ್ರ್ಯ ಅವತರಿಸುತ್ತಿತ್ತೆ ? ರಾಮಾನುಜನಂಥವನಿಗೆ ಗುರು ಒಬ್ಬ ಒಂದು ಆಧ್ಯಾತ್ಮಿಕವನ್ನು ರಹಸ್ಯವೆಂದು ಬೋಧಿಸಿ, ಇದನ್ನು ರಹಸ್ಯವಾಗೇ ಇಡದಿದ್ದರೆ ನಿನ್ನ ತಲೆ ಹೋಳಾಗುತ್ತದೆ ಎಂದಾಗ, ನನ್ನ ತಲೆ ಹೋಳಾದರೂ ಚಿಂತೆಯಿಲ್ಲ, ಜನತೆಗೆ ಇದರಿಂದ ಬಿಡುಗಡೆಯಾದರೆ ಸರಿ ಎಂದು ಆ ರಹಸ್ಯವನ್ನು ಬಹಿರಂಗ ಮಾಡಲು ಮುಂದುವರಿಯುವ ಆತನ ಆಧ್ಯಾತ್ಮ ಕೇವಲ ಆಧ್ಯಾತ್ಮಿಕವಾಗಿ ಹೇಗೆ ಉಳಿಯಬಲ್ಲುದು ? ಪ್ರಚಲಿತ ಕಟ್ಟುಕಟ್ಟಲೆಯನ್ನು ಮುರಿಯಲು ಮುಂದಾಗುವ ನಂದನಾರ್, ಚೈತನ್ಯ, ಆಂಡಾಳ್ ಮುಂತಾದವರ ನಡೆ ಕೇವಲ ಅವರ ವೈಯಕ್ತಿಕ ಆಧ್ಯಾತ್ಮಿಕ ಸಾಧನೆಯಾಗಿ ಹೇಗೆ ಉಳಿದೀತು ? ಬಸವಣ್ಣನ ಆಧ್ಯಾತ್ಮಿಕತೆ ರೂಢಮೂಲವಾಗಿ ಅಂದಿನ ಸಮಾಜದ ಬೇರನ್ನೇ ಅಲುಗಾಡಿಸಿದ್ದು ಕೇವಲ ಆಧ್ಯಾತ್ಮ ಹೇಗೆ ಆದೀತು ?

ಜಾತಿಪದ್ಧತಿಯ ವಿರುದ್ಧ ಹೋರಾಟಕ್ಕೆ ಸಹಸ್ರ ವರ್ಷದ ಇತಿಹಾಸವಿದೆ. ಕಾಲದಿಂದ ಕಾಲಕ್ಕೆ ಗುಣಾತ್ಮಕವಾಗಿ ಪ್ರಗತಿಪರ ಬದಲಾವಣೆಗಳು ಆಗಿವೆ. ಅದು ಬಸವಣ್ಣನ ಸಾಮಾಜಿಕ ಹೋರಾಟದಲ್ಲಿ, ಅತಿ ಮುಖ್ಯ ಘಟ್ಟವನ್ನು ಮುಟ್ಟಿತು ಮತ್ತು ಸಾಕಷ್ಟು ಪ್ರಭಾವ ಬೀರಿತು. ಆತ ಪ್ರಾರಂಭಿಸಿದ ವಚನ ಚಳುವಳಿ ಇಂದಿಗೂ ಪ್ರಸ್ತುತವಾಗಿರುವುದೇ ಅದರ ಗಟ್ಟಿತನ. ಅದರ ಕೆಲಸ ಇನ್ನೂ ಮುಂದುವರಿದಿದೆ. ಅದು ಕೇವಲ ಆಧ್ಯಾತ್ಮಿಕತೆಯ ವಿಷಯ ಅನ್ನುವುದು ಆಗುತ್ತಿರುವ ಬದಲಾವಣೆಯನ್ನು ದಿಕ್ಕು ತಪ್ಪಿಸುತ್ತದೆ. ಆಧ್ಯಾತ್ಮಿಕತೆ ವ್ಯಕ್ತಿಗೆ ಸಂಬಂಧಪಟ್ಟಿದ್ದು, ಚಳುವಳಿ ವ್ಯಷ್ಟಿಗೆ ಸಂಬಂಧಪಟ್ಟಿದ್ದು.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ,
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

# ಖಾಪ್ ಪಂಚಾಯ್ತಿಯ ಅನುಕರಣೀಯ ನಿರ್ಣಯ

**ಹ**ರಿಯಾಣದ ಖಾಪ್ ಪಂಚಾಯ್ತಿಗಳು ಕಳೆದ ೨-೩ ವರ್ಷಗಳಲ್ಲಿ ದೇಶದಾದ್ಯಂತ ಕುಖ್ಯಾತಿ ಹೊಂದಿವೆ. ಸಗೋತ್ರ ವಿವಾಹದ ನೆಪದಲ್ಲಿ ಹಲವಾರು ಪ್ರೇಮಿಗಳನ್ನು ಬಗೆ ಬಗೆಯ ನೋವಿಗೀಡುಮಾಡಿವೆ. ಜಾತಿವಾದಿ ಹುಲಿಯುಗುರಿನಲ್ಲಿ ಸಿಕ್ಕ ಯುವ ಪ್ರೇಮಿಗಳು ತಮ್ಮ ತಮ್ಮ ಹುಟ್ಟೂರುಗಳಿಂದ ದೂರವಾಗಿ ನೋವಿನಲ್ಲಿ ನರಳುತ್ತಲಿದ್ದಾರೆ. ಕೆಲವು ಪ್ರೇಮಿಗಳೂ ಹತ್ಯೆಗೀಡಾಗಿದ್ದಾರೆ. ಇಂಥ ಹತ್ಯೆಗಳನ್ನು ''ಮರ್ಯಾದಾ ಹತ್ಯೆ'' ಎಂದು ಹೆಸರಿಸಿದ್ದಾರೆ ಈ ನರಭಕ್ಷಕರು.

ಆದರೆ, ಕೆಲ ತಿಂಗಳುಗಳ ಹಿಂದೆ ಇದೇ ಖಾಪ್ ಪಂಚಾಯ್ತಿಯು ಇಡೀ ದೇಶವೇ ಅನುಸರಿಸಬೇಕಾದಂಥ ನಿರ್ಣಯವೊಂದನ್ನು ಕೈಗೊಂಡಿದೆ. ಇಂಥ ನಿರ್ಣಯವನ್ನು ನಮ್ಮ ನಾಡಿನಲ್ಲಿ (ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ) ಅನುಷ್ಠಾನಗೊಳಿಸಿದರೆ ನಮ್ಮ ನೆಲ-ಜಲದ ರಕ್ಷಣೆಯಾಗುತ್ತದೆಂಬುದರಲ್ಲಿ ಅನುಮಾನವಿಲ್ಲ.

**ಸವಳು ಮತ್ತು ಜೌಗಿಗೊಳಗಾದ ಹರಿಯಾಣದ ನೆಲ**

| | |
|---|---|
| ಕೃಷಿಯೋಗ್ಯ ನೆಲ | ೩೫೦,೦೦೦ ಹೆಕ್ಟೇರ್ |
| ಅಪಾಯದ ಅಂಚಿನಲ್ಲಿರುವ ನೆಲ | ೫೦,೦೦೦ ಹೆಕ್ಟೇರ್ |
| ಜಜ್ಜರ್ ಪಂಚಾಯ್ತಿಯ ಕೃಷಿಯೋಗ್ಯ ಭೂಮಿ | ೧೬೦,೦೦೦ ಹೆಕ್ಟೇರ್ |
| ಭತ್ತದ - ಬೆಳೆ ಬೆಳೆಯುವ ಭೂಮಿ | ೦೩೦,೦೦೦ ಹೆಕ್ಟೇರ್ |
| ಸವಳು ಭೂಮಿ | ೦೦೨,೦೦೦ ಹೆಕ್ಟೇರ್ |

**ಆಕರ :** ಡೌನ್ ಟು ಅರ್ಥ್ : ನವೆಂಬರ್ ೨೦೧೨

### ನೀರಾವರಿ ಪ್ರದೇಶದ ಸವಳು ಭೂಮಿ : ದುಷ್ಪರಿಣಾಮಗಳು

ಯಾವುದೇ ನಿರ್ಣಯ ಇದೇ ಜನವರಿಯಲ್ಲಿ ಹರಿಯಾಣದ ಜಜ್ಜರ್ ಖಾಪ್ ಪಂಚಾಯ್ತಿಯು ತನ್ನ ವ್ಯಾಪ್ತಿಯಲ್ಲಿ ಬರುವ ೩೬ ಹಳ್ಳಿಗಳಲ್ಲಿ ಭತ್ತವನ್ನು ಬೆಳೆಯಬಾರದೆಂದು ನಿರ್ಣಯಿಸಿದೆ. ಇದಕ್ಕೆ ಕಾರಣವೆಂದರೆ, ಭತ್ತದ ಬೆಳೆಗಾಗಿ ನೀರನ್ನು ಒಂದೊಂದು ಮಡಿಯಲ್ಲಿ ಸುಮಾರು ೩೦-೫೦ ಸೆಂ.ಮೀ.ವರೆಗೆ ಸದಾ ನಿಲ್ಲಿಸಿರಬೇಕು. ೧೯೭೦ರಿಂದ ಜವಾಹರಲಾಲ ನೆಹರು ಕಾಲುವೆಯಿಂದ ಸಮೃದ್ಧ ನೀರು ಸಿಗಲು ಶುರುವಾದಾಗ ರೈತರು ತುರ್ತು ಹಣದಾಸೆಗಾಗಿ ಭತ್ತ ಬೆಳೆಯಲು ಆರಂಭಿಸಿದರು. ವರ್ಷಕ್ಕೆ ಮೂರು ಬೆಳೆ. ನೀರು ಆವಿಯಾದಂತೆಲ್ಲಾ, ಮಣ್ಣಿನ ಮೇಲೆ ಲವಣಗಳು ಪೊರೆಯಂತೆ ನಿಂತುಬಿಡುತ್ತವೆ. ಅಂತರ್‌ಜಲದ ಮಟ್ಟ ಏರುತ್ತಾ ಹೋಗಿ, ಮಣ್ಣು ಜೌಗು ಹೊಂದುತ್ತದೆ. ಸವಳು ಭೂಮಿ, ಯಾವ ಬೆಳೆಯನ್ನೂ ಬೆಳೆಯುವುದಿಲ್ಲ, ಇದೊಂದು ಬಗೆಯ ಹಸಿ ಮರುಭೂಮಿ !!

ಸುಮಾರು ೩೦ ವರ್ಷಗಳಲ್ಲಿ ಲಕ್ಷಾಂತರ ಹೆಕ್ಟೇರ್ ಭೂಮಿ ಹರಿಯಾಣದಲ್ಲಿ ಸವಳು ಭೂಮಿಯಾಗಿದೆ. ಇದನ್ನು ಗಮನಿಸಿದ ಜಜ್ಜರ್ ಖಾಪ್ ಪಂಚಾಯ್ತಿಯು, ಈ ನಿರ್ಣಯ ಕೈಗೊಂಡಿದೆ. ಇದರಲ್ಲಿ ಸರ್ಕಾರದ ಒತ್ತಡವಿಲ್ಲ; ಇದು ಗಮನಿಸಬೇಕಾದ ಅಂಶ.

### ನಮ್ಮ ರಾಜ್ಯದಲ್ಲಿ

ಇಂಥದೇ ಪರಿಸ್ಥಿತಿಯು ನಮ್ಮ ರಾಜ್ಯದ, ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ಉಲ್ಬಣಗೊಂಡಿದೆ ಹಾಗೂ ವಿಸ್ತರಿಸುತ್ತಲೂ ಇದೆ. ಇದಕ್ಕೆ ಅತ್ಯಂತ ಉತ್ತಮ ಉದಾಹರಣೆ ಎಂದರೆ ರಾಯಚೂರು ಜಿಲ್ಲೆಯ ಸಿಂಧನೂರು ಮತ್ತು ಮಾನ್ವಿ ಹಾಗೂ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕುಗಳು. ಈ ವ್ಯಾಧಿಯು ನನ್ನ ಜನ್ಮಸ್ಥಳವಾದ ರಾಯಚೂರು ಜಿಲ್ಲೆಯ ದೇವದುರ್ಗಕ್ಕೂ ವಿಸ್ತರಿಸುತ್ತಲಿದೆ.

ಈ ಭಾಗ, ಹಿಂದೆ ಹೈದ್ರಾಬಾದ ಪ್ರಾಂತ್ಯದಲ್ಲಿದ್ದಾಗ, ಅಂದಿನ ರಾಜ್ಯದ ಭೂವಿಜ್ಞಾನ ಇಲಾಖೆಯ ಮುಖ್ಯಸ್ಥ ದಿ॥ ಕ್ಯಾಪ್ಟನ್ ಮನ್ ಈ ಪ್ರದೇಶದ ಸರ್ವೇಕ್ಷಣೆ ಮಾಡಿ, ಈ ಎರೆಭೂಮಿ (ಕಪ್ಪು ಮಣ್ಣು) ಭಾರೀ ನೀರಾವರಿಗೆ ಯೋಗ್ಯವಲ್ಲ ಎಂದು ಸಂಪ್ರಬಂಧಗಳನ್ನು ಪ್ರಕಟಿಸಿದ್ದಾನೆ.

೧೯೬೦ರ ಸುಮಾರಿಗೆ ತುಂಗಭದ್ರಾ ಜಲಾಶಯದ ಎಡದಂಡೆ ಕಾಲುವೆಯಿಂದ ನೀರು ಹರಿಸಿದಾಗ, ನೀರನ್ನು ಪೂರಕ ನೀರಾವರಿಗಾಗಿ ಉಪಯೋಗಿಸಬೇಕೆಂದು ನಿರ್ಬಂಧಿಸಲಾಗಿತ್ತು. ಆದರೆ, ಆಂಧ್ರದಿಂದ ವಲಸೆ ಬಂದ ರೈತರಿಗೆ ಜೋಳ ಬೆಳೆಯುವುದರಲ್ಲಿ ಆಸಕ್ತಿ ಇರಲಿಲ್ಲ, ಇಲ್ಲಿಯ, ಮೂಲ ರೈತರಿಂದ ತೀರ ಸುಲಭ ಬೆಲೆಯಲ್ಲಿ ಭೂಮಿ ಖರೀದಿಸಿ ಭತ್ತ ಮತ್ತು ಕಬ್ಬು ಬೆಳೆದು ದೊಡ್ಡ ದೊಡ್ಡ ಶ್ರೀಮಂತರಾದರು; ರಾಜಕೀಯವಾಗಿ ಪ್ರಬಲರಾದರು. ಸರ್ಕಾರ ತನ್ನ ನಿಯಮಾವಳಿಗಳನ್ನು ಅನುಷ್ಠಾನಗೊಳಿಸದಾಯಿತು. ಇದರ ದುಷ್ಫಲವೆಂದರೆ ಲಕ್ಷಾಂತರ ಹೆಕ್ಟೇರ್ ಭೂಮಿ ಜೌಗುಗಟ್ಟಿತು. ಭೂಮಿ ಬಂಜೆಯಾದಂತೆಲ್ಲ, ಇಲ್ಲಿಯ ಆಂಧ್ರದ ರೈತರು, ಈಗ ಕೃಷ್ಣಾ ಮೇಲ್ದಂಡೆಯ ನೀರಾವರಿ ಪ್ರದೇಶಗಳಿಗೆ ವಲಸೆ ಹೋಗಿದ್ದಾರೆ. ಕಲಬುರ್ಗಿ ಜಿಲ್ಲೆಯ ಸುರಪುರ, ಶಹಾಪೂರ ಹಾಗೂ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕುಗಳಲ್ಲಿ ಭತ್ತದ ಬೆಳೆ ಆರಂಭಗೊಂಡಿದೆ. ಬಹುಶಃ ಮುಂದಿನ ೧೦-೧೫ ವರ್ಷಗಳಲ್ಲಿ ಇಲ್ಲಿಯ ಎರೆಭೂಮಿಯು ಸವಳು ಭೂಮಿಯಾಗುವುದರಲ್ಲಿ ಯಾವುದೇ ಬಗೆಯ ಅನುಮಾನವಿಲ್ಲ.

**ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಜೌಗುಪ್ರದೇಶ (ಚ.ಕಿ.ಮೀ.)**
**(ಒಂದು ಅಂದಾಜು)**

| ಕ್ರ.ಸಂ. | ತಾಲ್ಲೂಕು | ಕೃಷಿಯೋಗ್ಯ ಭೂಮಿ | ನೀರಾವರಿ ಪ್ರದೇಶ | ಜೌಗು+ಸವಳು ಪ್ರದೇಶ |
|---|---|---|---|---|
| ೧. | ರಾಯಚೂರು | ೧,೦೫,೩೯೭ | ೧೭,೨೨೬ | ೧,೦೦೦ (೬%) |
| ೨. | ಮಾನ್ವಿ | ೧,೧೭,೮೧೦ | ೪೨,೧೧೫ | ೪,೫೦೦ (೧೦.೭%) |
| ೩. | ಸಿಂಧನೂರು | ೧,೦೭,೩೫೦ | ೪೮,೨೦೭ | ೪,೦೦೦ (೮.೩%) |
| ೪. | ಗಂಗಾವತಿ | ೮೭,೫೯೩ | ೪೦,೨೯೨ | ೫,೦೦೦ (೧೨.೪%) |
| | ಒಟ್ಟು | ೪,೧೮,೧೫೦ | ೧,೪೭,೮೪೦ | ೧೪,೫೦೦ (೯.೮%) |

(ಬ್ರ್ಯಾಕೆಟ್‌ನಲ್ಲಿರುವ ಸಂಖ್ಯೆಯು ಶೇಕಡವಾರು ಸಂಖ್ಯೆಯನ್ನು ಸೂಚಿಸುತ್ತದೆ)

### ಸವಳು ಮತ್ತು ಜೌಗಿಗೆ ಜಲ ಭೂವೈಜ್ಞಾನಿಕ ಕಾರಣಗಳು

ಎರೆಭೂಮಿ ಎಂದರೇನು ಎಂಬುದನ್ನು ನಮ್ಮ ಕಡೆ ''ಎರೆ ಅಂದರೆ ದೊರೆ'' ಎಂಬ ಮಾತನ್ನು ನಾನು ಬಾಲಕನಿದ್ದಾಗ ಕೇಳಿದ್ದೆ. ಈಗ, ಭೂವಿಜ್ಞಾನಿಯಾಗಿ ನಾನು ಅರ್ಥೈಸಬಲ್ಲೆ, ಎರೆಮಣ್ಣಿನಲ್ಲಿ ಜೇಡುಗಳು ಇರುತ್ತವೆ. ಈ ಜೇಡುಗಳು ತೇವಾಂಶವನ್ನು ಹೀರಿಕೊಂಡು ಸಂಗ್ರಹಿಸಿಕೊಳ್ಳುತ್ತವೆ. ಆದ್ದರಿಂದ ಈ ಬರಪೀಡಿತ ಪ್ರದೇಶದಲ್ಲಿ ಮಳೆಯು, ಬಿತ್ತನೆ ಸಮಯದಲ್ಲಿ ಒಂದೆರಡು ಸಲ ಬಂದರೆ ಸಾಕು; ಸಮೃದ್ಧ ಜೋಳದ ಬೆಳೆ ಬರುತ್ತದೆ. ಸಾಮಾನ್ಯವಾಗಿ ಎರೆಮಣ್ಣು ಸುಮಾರು ೨೦ಮೀ. ಮಂದವಾಗಿರುತ್ತದೆ. ಅದರ ಅಡಿಯಲ್ಲಿ ಗಟ್ಟಿಯಾದ ಶಿಲೆ ಇರುತ್ತದೆ. ಆದ್ದರಿಂದ ಭಾರೀ ನೀರಾವರಿ ಬೆಳೆಗಳಾದ ಭತ್ತ ಮತ್ತು ಕಬ್ಬನ್ನು ಬೆಳೆದರೆ, ಎರೆಭೂಮಿ ನೀರನ್ನು ಸಂಗ್ರಹಿಸಿಕೊಂಡು ಬಸಿದುಹೋಗಲು ಬಿಡುವುದಿಲ್ಲ, ಜೌಗು ಉಂಟಾಗುತ್ತದೆ. ಬಿಸಿಲಿನ ತಾಪದಿಂದ ಲವಣಗಳು ಭೂಮಿಯ ಮೇಲ್ಪದರದ ಮೇಲೆ ಹೆಪ್ಪುಗಟ್ಟುತ್ತವೆ. ಹೀಗಾಗಿ ಭೂಮಿ, ಹಸಿ ಮರುಭೂಮಿಯಾಗುತ್ತದೆ. ಇದನ್ನು ತಡೆಗಟ್ಟಬೇಕಾದರೆ ಎರೆಭೂಮಿ ಪ್ರದೇಶದಲ್ಲಿ ಭತ್ತ ಮತ್ತು ಕಬ್ಬನ್ನು ಬೆಳೆಯಲೇಬಾರದು. ಇದೊಂದೇ ಪರಿಣಾಮಕಾರಿ ಪರಿಹಾರ.

ಆದ್ದರಿಂದ ಹರಿಯಾಣದ ಜಜ್ಜರ್ ಖಾಪ್ ಪಂಚಾಯ್ತಿಯ ನಿರ್ಣಯ ಅನುಕರಣೀಯ !! ನಮ್ಮಲ್ಲಿ ಇದು ಸಾಧ್ಯವೆ ?

**ಡಾ॥ ಎಚ್. ಚಂದ್ರಶೇಖರ**
'ಸಂಗಮ', ಎಮ್.ಐ.ಜಿ.-೭೭, ೬ನೇ ಕ್ರಾಸ್, ೬ನೇ ಮೇನ್
ಕೆ.ಹೆಚ್.ಬಿ. ಕಾಲನಿ, ೨ನೇ ಹಂತ, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

# ಕನಕ : ವರ್ತಮಾನದ ನಿರೂಪಣೆಗಳು



ಇಂದಿನ ಪ್ರಜಾಪ್ರಭುತ್ವ ಯುಗದ ಮತಶಕ್ತಿಯಾಗಿ ಪರಿಣಮಿಸಿರುವ ಈ ಶರಣಕೂಟ ಅಂದಿಗೂ ದೊಡ್ಡ ಶಕ್ತಿಯಾಗಿಯೇ ಇತ್ತು. ಇಂದಿನ ಈ ರಾಜಕೀಯ ಶಕ್ತಿ ಸಂಚಯನದ ಚರಿತ್ರೆ ಶರಣ ಚಳುವಳಿಯ ಕಾಲಘಟ್ಟಕ್ಕೆ ವಿಸ್ತರಿಸಿಕೊಂಡಿದೆ ಎಂಬುದನ್ನು ಗಮನಿಸಿದಾಗ, ಆವೊತ್ತಿಗೆ ಸಾಂಪ್ರದಾಯಿಕ ಶಕ್ತಿಗಳು ಅನುಭವಿಸಿರಬಹುದಾದ ಬಿಕ್ಕಟ್ಟಿನ ಚಹರೆಗಳು ಸಹಜವಾಗಿಯೇ ಗೋಚರವಾಗುತ್ತವೆ. ಅಗ್ರಹಾರಗಳು ಇನ್ನಷ್ಟು ವೈದಿಕೀಕರಣಕ್ಕೊಳಗಾದ ಇಂತಹ ಕಾಲಘಟ್ಟದಲ್ಲಿಯೇ ಒದಗಿ ಬಂದ ವಿಷ್ಣು ಕಥೆಗಳಿವು.

**ಜಯಪ್ರಕಾಶ್ ಶೆಟ್ಟಿ ಎಚ್.**

- ೧ -

**ಕ**ನಕನನ್ನು ಕುರಿತ ವರ್ತಮಾನದ ನಿರೂಪಣೆಗಳನ್ನು ಪ್ರಸ್ತಾಪಿಸುವ ಮೊದಲಿಗೆ, ವರ್ತಮಾನವೆಂದು ನಾವು ಗಟ್ಟಿಯಾಗಿ ನಂಬಲೇಬೇಕಾದ ನಮ್ಮ ಸುತ್ತಣ ವರ್ತಮಾನದಿಂದ ಕನಕನನ್ನು ಬೇರೆಯಾಗಿಸಿಕೊಂಡು ಚರ್ಚಿಸಲಾಗದು. ಅಂದರೆ ನಮ್ಮ ಸುತ್ತಲೇ ಇಂದು ನಿನ್ನೆ ನಡೆದ ಘಟನೆ, ಬೆಳವಣಿಗೆಗಳಿಂದ ನಮ್ಮನ್ನು ಕತ್ತರಿಸಿಕೊಂಡು ಕನಕನ ಕುರಿತಾದ ನಿರೂಪಣೆಗಳ ವೈವಿಧ್ಯದ ಕುರಿತು ಮಾತನಾಡುವುದು ಸೋಗಲಾಡಿತನವಾಗುತ್ತದೆ. ಅದೇ ಸಂದರ್ಭದಲ್ಲಿ ನಮ್ಮದೇ ಕನಕನನ್ನು ನಮಗೆ ತೋರಿಸಿಕೊಡುತ್ತಲೇ ಬಂದ ಚರಿತ್ರೆಯ ಕರುಳಬಳ್ಳಿಯನ್ನೂ ಜತನದಿಂದ ಕಾಪಿಟ್ಟುಕೊಳ್ಳುತ್ತಲೇ ನೆಲದ ದನಿಗೆ ಹತ್ತಿರವಾಗುವ ಕನಕನೇನಾದರೂ ನಮಗೆ ಲಭ್ಯವಾಗಬಲ್ಲನೇ ಎಂಬುದು ಪ್ರಾಯಶಃ ನಮ್ಮ ಆಶಯವೆಂದೇ ನಾನು ಭಾವಿಸುತ್ತೇನೆ. ಹೀಗೆ ಹೇಳುವಾಗ ನಮ್ಮ ಸುತ್ತಿನ ಎರಡು ಘಟನೆಗಳನ್ನು ದಾಖಲಿಸುವುದು ಈ ಸಂದರ್ಭದಲ್ಲಿ ಅತೀ ಜರೂರತ್ತಿನದೆಂದೇ ನಾನು ಭಾವಿಸುತ್ತೇನೆ. ಈ ಎರಡರಲ್ಲಿ ಒಂದು ಕೆಳಜಾತಿಯ ಜನರನ್ನು ಮೇಲ್ಜಾತಿಯವರು ಉಂಡುಬಿಟ್ಟ ಎಂಜಲಲ್ಲಿ ಉರುಳಿಸುವುದನ್ನು ನಿಷೇಧಿಸುವಂತೆ ಒತ್ತಾಯಿಸಿ, ಆ ಮಡೆಸ್ನಾನದ ತಾಯಿಬೇರಿನಂತಿರುವ ಪಂಕ್ತಿಭೇದವನ್ನು ವಿರೋಧಿಸಿ ಕನಕನ ಜೊತೆಗೆ ಹೇಗೋ ಲಗತ್ತಾಗಿರುವ ಉಡುಪಿಯ ಮಠವೊಂದರ ಎದುರುಗಡೆ ದುಡಿಮೆಗಾರರ ಮುಖವಾಣಿ ಎನಿಸಿದ ರಾಜಕೀಯಪಕ್ಷವೊಂದರ ನೇತಾರಿಕೆಯಲ್ಲಿ ನಡೆದ ಪ್ರತಿಭಟನೆ ಮತ್ತು ಅದು ಆ ಸಂದರ್ಭದಲ್ಲಿ ನಡೆದ ಲಾಠಿಪ್ರಹಾರಕ್ಕೆ ಸಂಬಂಧಿಸಿದುದು. ಇನ್ನೊಂದು ದಕ್ಷಿಣ ಕನ್ನಡದ ಮತ್ತೊಂದು ಮೂಲೆಯಲ್ಲಿ ಊರ ಯುವಕರು ಅತ್ಯುತ್ಸಾಹದಿಂದ ಭಾಗವಹಿಸಿ ಆಗುಗೊಳಿಸಿದ ದೇಗುಲವೊಂದರ ದೈವೀಕಾರ್ಯಕ್ಕೆ ಸಂಬಂಧಿಸಿದುದು. ''ನಾವೆಲ್ಲರೂ ಒಂದೇ'' ಎಂದೇ ಕೂಗಿಕೊಳ್ಳುತ್ತಾ ಆಯೋಜಿಸಲಾದ ಬಯಲಭೋಜನದಲ್ಲಿ ಜಾತಿಶ್ರೇಷ್ಠರಿಗೆ ಊಟದ ಪ್ರತ್ಯೇಕ ಪಂಕ್ತಿಯೇ ನಡೆದು ನಾವೆಲ್ಲರೂ ಒಂದಲ್ಲ ಎಂಬ ಸ್ಪಷ್ಟ ಸಂದೇಶವೇ ಹೊರಬಿದ್ದಿತಲ್ಲಿ. ಈ ಮೂಲದಿಂದಲೇ ಸಮರೋತ್ಸಾಹದ ಗಿಳಿಪಾಠವನ್ನು ಕಲಿತು ಸ್ವಾಭಿಮಾನ ಪ್ರಕಟಣೆಯ ನೈತಿಕ ಸೊಗಸನ್ನೇ ಬತ್ತಿಸಿಕೊಂಡು, ಸೇವೆಗೆಂದೇ ಮೀಸಲಾದ ನಮ್ಮದೇ ಅಣ್ಣ-ತಮ್ಮಂದಿರು ಅಸಹಾಯಕವಾಗಿ ಗೊಣಗಿಕೊಂಡರು. ಈ ಸಂಬಂಧವಾದ ವಿವರವಾದ ಸುದ್ದಿಯನ್ನು ಗಮನಿಸಿದ್ದೇವೆ. (ಅದು ಶರ್ಟ್ ತೆಗೆದು ಉಣ್ಣುವ ಮನಸ್ಸುಳ್ಳವರ ಪಂಕ್ತಿಯಷ್ಟೇ ಎಂಬ ಸಮಜಾಯಿಷಿಯೂ (೧೮-೧-೦೩) ಈ ದಿನದ ಪತ್ರಿಕೆಯಲ್ಲಿಯೇ ಇದೆ. ಆದರೆ ಕೃಷಿಯೇ ಮೊದಲಾದ ದುಡಿಮೆಯ ಜಗತ್ತಿಗೆ ಸೇರಿದ ಜನ ಮೈತುಂಬ ಬಟ್ಟೆ ಹಾಕುವ ದಿನಗಳು ವರ್ಷಕ್ಕೆ ೩೦ನ್ನು ಮೀರುವುದಿಲ್ಲ ಎಂಬ ಸತ್ಯವನ್ನು ಇದಕ್ಕೆದುರಾಗಿ ಹಿಡಿಯುವ ಹಕ್ಕನ್ನು ಊಳಿಗದ ಹೊರೆಹೊತ್ತ ಆ ಯುವಕರು ಉಳಿಸಿಕೊಂಡಂತಿಲ್ಲ!).

ನಾವು ಬದುಕಿರುವ ಈ ಕಾಲಘಟ್ಟದ ಇನ್ನೊಂದು ಬೆಳವಣಿಗೆಯನ್ನೂ ನಾವಿಲ್ಲಿ ಮೆಲುಕು ಹಾಕಿಕೊಳ್ಳಬೇಕಿದೆ. ಅದು ಆಹಾರಕ್ರಮಗಳನ್ನು ವೈರುಧ್ಯದ ನೆಲೆಯಲ್ಲಿ ಜೋಡಿಸಿಕೊಳ್ಳುವಂತೆ ಪ್ರೇರೇಪಣೆ ನೀಡುವ ಮೂಲಕ ವೈಷಮ್ಯದ ಬಿತ್ತುವಿಕೆಯನ್ನು ಆಗುಗೊಳಿಸುತ್ತಿರುವ ಬೆಳವಣಿಗೆ. ಆಹಾರವನ್ನು ಗುಣದೊಂದಿಗೆ, ಜಾತಿಯೊಂದಿಗೆ, ಧರ್ಮದೊಂದಿಗೆ ಜೋಡಿಸಿ ಶ್ರೇಷ್ಠ-ಕನಿಷ್ಠ, ಸಾತ್ವಿಕ-ತಾಮಸ, ಸಂತರ್ಪಣ-ಆಕ್ರಮಣ, ಪುರಸ್ಕೃತ-ಬಹಿಷ್ಕೃತದ ವಿರುದ್ಧ ರೂಪಗಳಲ್ಲಿ ಸ್ಥಾಯೀಗೊಳಿಸಿ ಸಾಮಾಜಿಕ ಶ್ರೇಣೀಕರಣದ ಜೊತೆಗೆ ಪರಸ್ಪರ ನಂಬಿಕೆ ಇಲ್ಲದ ಸಾಮಾಜಿಕ ಕಂದರವನ್ನು ಸೃಷ್ಟಿಸಿಕೊಡುತ್ತಿರುವ ಬಗೆ ಆತಂಕಕಾರಿಯಾದುದು. ಮಾತು ಕಲಿಯಲೆಂದು ಶಾಲೆಯ ಮೆಟ್ಟಿಲೇರುವ ಬಡಮಕ್ಕಳ ಬಾಯಿಗೆ ಸತ್ವಯುತವಾದ ಆಹಾರವಾದೀತೆಂದು ಸರ್ಕಾರ ಇಕ್ಕಲು ಹೊರಟ ಮೊಟ್ಟೆಯ ತುತ್ತನ್ನೇ ತಾಮಸ ಆಹಾರದ ಹುಯ್ಯಿಲೆಬ್ಬಿಸಿ ಕಸಿದು ಇಲ್ಲವಾಗಿಸಿದ ಆಹಾರ ರಾಜಕಾರಣದ ಕಾಲವಿದು. ಅಕ್ಕಿಯ ಬಣ್ಣ, ಅನ್ನವಾಗುವ ಧಾನ್ಯದ ಮೂಲವನ್ನಾಧರಿಸಿಯೂ ಶ್ರೇಣೀಕರಣಗಳು ಚಾಲನೆಯಲ್ಲಿರುವ ಕಾಲವೂ ಹೌದು. ಹಲವರಿಗಿಂತ

ಕೆಲವರಷ್ಟೆ ತಿನ್ನುವುದನ್ನೇ ಆರೋಗ್ಯಕರ ಆಹಾರ ಮಾದರಿಯೆಂಬ ಸಾಮಾಜಿಕ ಹಾಗೂ ವೈಜ್ಞಾನಿಕ ಸತ್ಯವನ್ನೂ ಉತ್ಪಾದಿಸಿಕೊಂಡು ಬರಲಾಗುತ್ತಿದೆ. ಇದರ ಜೊತೆಗೆ ಆಳುವ ಕಾರಣಕ್ಕಾಗಿ ನೆಲದ ಭೌಗೋಳಿಕ ಗಡಿರೇಖೆಗಳನ್ನು ರಾಷ್ಟ್ರವೆಂಬ ನಿರ್ವಚನದಡಿಗೆ ವಿವರಿಸಿ ಕೊಡಲೆಂದು ಮೈದಳೆದ 'ನೇಷನ್ ಸ್ಟೇಟ್' ಪರಿಕಲ್ಪನೆ ಸಮುದಾಯಗಳ ನಡುವಿನ ಇನ್ನೊಂದು ಬೇಲಿಯಾಗಿ ಪರಿಣಮಿಸುತ್ತಿದೆ. ನೆಲದ ಚರಿತ್ರೆಗೆ ಸಂಬಂಧಿಸಿ ಕಟ್ಟಿಕೊಳ್ಳಲಾಗುತ್ತಿರುವ ರಾಷ್ಟ್ರ-ದೇಶದ ಕುರಿತಾದ ಸಂಕಥನಗಳು ವರ್ತಮಾನದ ಸಮುದಾಯವನ್ನು ವಿಭಜಿಸಿ ವಿವರಿಸಿಕೊಳ್ಳಲು ಒತ್ತಾಯಿಸುತ್ತಿವೆ.

ಈ ಹಿನ್ನೆಲೆಯಲ್ಲಿ ಕನಕನ ಕಾಲದ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೂ ನಮ್ಮ ಕಾಲದ ಸಾಂಸ್ಕೃತಿಕ ಬಿಕ್ಕಟ್ಟುಗಳಿಗೂ ನಡುವೆ ಇರುವ ಸಾಮ್ಯತೆ ಯಾವುದು? ಜಾತಿ-ಧರ್ಮಗಳ ಧ್ರುವೀಕರಣ ಸಂಭವಿಸುತ್ತಿರುವ ಈ ಕಾಲಘಟ್ಟದಲ್ಲಿ ಕನಕನನ್ನು ಸಮಕಾಲೀನಗೊಳಿಸಿಕೊಳ್ಳುವ ಬಗೆ ಹೇಗೆ? ಎಂಬ ಪ್ರಶ್ನೆಯೇ ಮೇಲಣ ಸಂಗತಿಗಳನ್ನು ಯಾಕೆ ನೆನಪಿಸಿಕೊಳ್ಳಬೇಕಾಗಿದೆ ಎನ್ನುವುದಕ್ಕೆ ಉತ್ತರಗಳೂ ಆಗುತ್ತವೆ. ವಾಸ್ತವಿಕವಾಗಿ ಈ ಮೇಲಣ ಸಂಗತಿಗಳೇ ಕನಕನನ್ನು ನಾವು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಲೇ ಬರುತ್ತಿರುವ ಕಾರಣಗಳ ಹಿಂದಿನ ಸತ್ಯಗಳು. ಶ್ರೇಷ್ಠತೆ ಮತ್ತು ಪ್ರತ್ಯೇಕತೆಯನ್ನು ಅತ್ಯಂತ ಅಚ್ಚುಕಟ್ಟಾಗಿ ಶತಶತಮಾನಗಳಿಂದ ಪರಿಪೋಷಿಸಿಕೊಂಡು ಬರಲಾಗುತ್ತಿರುವ ಮಾದರಿಗಳಿವು. ಈ ಮಾದರಿಗಳೊಂದಿಗೆ ಕನಕನ ಮುಖಾಮುಖಿಯನ್ನು ಯೋಚಿಸುವುವಲ್ಲಿ, ಉಣ್ಣುವ ಅನ್ನ ಮತ್ತು ತಾಣದ ಪ್ರತ್ಯೇಕತೆಯೊಂದಿಗೆ ಉಚ್ಚ-ನೀಚ ಎನ್ನುವ ದೇಹಾಧಾರಿತ ಕುಲಾಚರಣೆಯನ್ನು ಚಾಲ್ತಿಯಲ್ಲಿರಿಸಿದ ಸಾಮಾಜಿಕ ಅಧಿಕಾರ ಕೇಂದ್ರಕ್ಕೆ ಕನಕನದು ಆತ್ಮ-ಜೀವಗಳ ಕುಲ ಯಾವುದು ಎನ್ನುವ ತರ್ಕಬದ್ಧ ಪ್ರಶ್ನೆ. ಅನ್ನದ ಹೆಸರಿನಲ್ಲಿ ತರತಮವನ್ನೆಣಿಸಿದ ಭೇದಕಾರರಿಗೆ ಭತ್ತ-ರಾಗಿಗಳೆಂಬ ಆಹಾರ ಬಗೆಗಳ ಸಂವಾದದ ಮೂಲಕವೇ ಒಡ್ಡಿದ ಸಾಂಸ್ಕೃತಿಕ ಪ್ರತಿರೋಧ. ನೋಯುವ ಹಲ್ಲಿಗೆ ತುಡಿಯುವ ನಾಲಗೆಯಂತೆ ಕನಕನನ್ನು ಹೀಗೆ ಮತ್ತೆ ಮತ್ತೆ ಮುಖಾಮುಖಿಯಾಗಿಸುತ್ತಲೇ ಬರುತ್ತಿರುವುದು ಆತ ಕುದಿಗೊಂಡ ಈ ಸಾಮಾಜಿಕ ತರತಮಕ್ಕಾಗಿ.

- ೨ -

ಮೂಲಭೂತವಾಗಿ ಭಕ್ತಿಚಳುವಳಿಯ ಮೂಲಧಾತುವಾಗಿರುವುದು ಹೊಸ ಮನುಷ್ಯನ ಪರವಾದ ಹುಡುಕಾಟ. ಅದು ವ್ಯವಸ್ಥೆಯನ್ನು ಮೀರುವ ಯತ್ನವೆನ್ನಲಾಗುತ್ತದೆ. ಆದರೆ ಕರ್ನಾಟಕದ ಮಟ್ಟಿಗಂತೂ ವೈಷ್ಣವ ಪಂಥೀಯ ಭಕ್ತಿಚಳುವಳಿಯ ಹುಟ್ಟಿನ ಕಾಲಘಟ್ಟದ ಚಾರಿತ್ರಿಕ ವಾಸ್ತವತೆ ಮತ್ತು ಮರುಪ್ರಸಕ್ತಿಗಾಗಿ ಅದು ಆಯ್ದುಕೊಳ್ಳುವ ಪುರಾಣಪರಿಕರ ಮೂಲಗಳು ಈ ಮಾತಿಗೆ ಪೂರಕವಾಗಿಲ್ಲ. ಮಧ್ಯಕಾಲೀನ ಸಂದರ್ಭದ ಭಕ್ತಿಚಳುವಳಿಯ ಉಪ ಉತ್ಪನ್ನದಂತೆ ಬಂದ ಭಾಗವತ ಪರಂಪರೆಯ ಭಕ್ತಿಕಾವ್ಯಗಳೂ ಇದನ್ನೇ ಸಮರ್ಥಿಸುತ್ತವೆ. ಯಾಕೆಂದರೆ ಭಕ್ತಿಚಳುವಳಿಯ ಭಾಗವೇ ಆದ ಮಧ್ಯಕಾಲೀನ ಸಂದರ್ಭದ ಈ ಕಾವ್ಯಗಳು ರಚನೆಯಾದ ಆವರಣ, ಅವುಗಳ ವಸ್ತುಸ್ವರೂಪಗಳು ಹಾಗೂ ತಮ್ಮ ಪ್ರಸಾರಕ್ಕಾಗಿ ಅವು ಸಾಂಸ್ಕೃತಿಕ ಮಾಧ್ಯಮಗಳನ್ನು ಬಳಸಿಕೊಂಡ ರೀತಿಗಳೂ ಒಟ್ಟು ಚಳುವಳಿಯ ಸಾಂಪ್ರದಾಯಿಕ ಆಶಯವನ್ನೇ ಧ್ವನಿಸುತ್ತವೆ. ಈ ಹಿನ್ನೆಲೆಯಲ್ಲಿ ಯಾವ ಸ್ವರೂಪ ಮತ್ತು ಉದ್ದೇಶದಲ್ಲಿ ಈ ಕಾಲದ ಕಾವ್ಯಗಳು ರಚನೆಯಾದುವು? ಈ ಕಾವ್ಯಗಳೂ ಎಂತಹ ಆವರಣಗಳಲ್ಲಿ ಹುಟ್ಟಿಕೊಂಡವು? ಇವು ಆಯ್ದುಕೊಂಡ ವಸ್ತುಗಳಾವುವು? ಈ ವಸ್ತುಗಳನ್ನು ಜನಸಮುದಾಯಕ್ಕೆ ತಲುಪಿಸುವುದಕ್ಕಾಗಿ ಸಮುದಾಯದ ನಡುವಿನ ಯಾವ್ಯಾವ ಸಾಂಸ್ಕೃತಿಕ ಮಾಧ್ಯಮಗಳನ್ನು ಬಳಸಿಕೊಳ್ಳಲಾಯಿತು? ಇತ್ಯಾದಿ ಪ್ರಶ್ನೆಗಳು ಮುಖ್ಯವಾಗುತ್ತವೆ. ಹೀಗೆ ಗಮನಿಸುವಲ್ಲಿ ಗೇಯಪ್ರಧಾನ ಚುಟುಕು ರೂಪಗಳಾದ ಕೀರ್ತನೆಗಳೂ ಹಾಡಿನ ಮೂಲಕವೂ, ಭಾಗವತ ಕಾವ್ಯಗಳು ಗಮಕದ ಮೂಲಕವೂ ತಲುಪಲು ಹವಣಿಸಿದ್ದು ಕಾಣಿಸುತ್ತದೆ. ಇವುಗಳ ಜೊತೆಗೆ ಜನಪದ ಮಾದರಿಗಳಾದ ಯಕ್ಷಗಾನ, ದೊಡ್ಡಾಟದಂತಹ ರಂಗಮಾಧ್ಯಮದ ಮೂಲಕ ರಾಮಾಯಣ-ಭಾರತಗಳೆಂಬ ವೈದಿಕ ಕಾವ್ಯವಸ್ತುಗಳ ಮರುನಿರೂಪಣೆಗೊಂಡ ಪ್ರಸಂಗಗಳು ಬಂದುದನ್ನು ಕಾಣುತ್ತೇವೆ. ಹೆಚ್ಚು ಕಡಿಮೆ ಇವೆಲ್ಲವೂ ಒಂದೇ ಮಾದರಿಯ ಕಥಾವಸ್ತುವನ್ನು ತಮ್ಮ ಉದ್ಯೋಗಕ್ಕಾಗಿ ಬಳಸಿಕೊಂಡಿವೆ. ಅವೆಲ್ಲವೂ ವಿಷ್ಣು ಕಥೆಗಳೇ ಆಗಿವೆ. ಭಕ್ತಿಚಳುವಳಿಯ ಪ್ರಭಾವಲಯದಲ್ಲಿ ಯಾಕೆ ಈ ಎಲ್ಲ ಮಾದರಿಗಳಲ್ಲಿಯೂ ವಿಷ್ಣು ಕಥೆಗಳೇ ಸೃಷ್ಟಿಯಾದುವು? ಯಾಕೆ ರಾಮಾಯಣ, ಭಾರತ, ಭಾಗವತಗಳನ್ನೇ ಚಿಕ್ಕ-ದೊಡ್ಡ ರೂಪಗಳಲ್ಲಿ ಇಡಿಯ ಚಳುವಳಿ ಪುನರ್‌ರೂಪಿಸುತ್ತಾ ಹೋಯಿತು? ಎಂಬ ಪ್ರಶ್ನೆಗಳನ್ನು ಇಲ್ಲಿ ನಾವು ಅಗತ್ಯವಾಗಿ ಕೇಳಿಕೊಳ್ಳಲೇಬೇಕಾಗುತ್ತದೆ.

ಗಮನಿಸಬೇಕಾದ ಸಂಗತಿಯೇನೆಂದರೆ ಮೇಲೆ ಹೇಳಲಾದ ಭಕ್ತಿಚಳುವಳಿ ಮತ್ತು ಭಾಗವತ ಪರಂಪರೆಯ ಕಥಾವಸ್ತುಗಳ ಪುನರುತ್ಪಾದನೆಯ ಕಾಲಘಟ್ಟ, ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ಮಹತ್ತರ ಬದಲಾವಣೆ ಸಂಭವಿಸಿದ ಸಂಕ್ರಮಣೋತ್ತರ ಅವಧಿಯೆಂಬುದನ್ನು ಗಮನಿಸಬೇಕು. ವೈದಿಕತೆ ಅತಿ ಹೆಚ್ಚು ಸವಾಲುಗಳನ್ನು ಎದುರಿಸಿದ ಕಾಲಘಟ್ಟವಿದು. ತಂತ್ರ, ಬೌದ್ಧ, ಜೈನ, ಆದಿವಾಸಿ, ಜಾನಪದ ಮೊದಲಾದ ಅವೈದಿಕ ದರ್ಶನಗಳ ಗೆರಿಲ್ಲಾ ಹೊಡೆತಕ್ಕೆ ಸಿಕ್ಕು ಘಾಸಿಗೊಳ್ಳುತ್ತಿದ್ದ ವೈದಿಕತೆಗೆ, ಹೊಸದಾಗಿ ಪ್ರವೇಶ ಪಡೆದ ಇಸ್ಲಾಂ ಮತ್ತು ಬಹುಸಂಖ್ಯಾತ ತಳಜಾತಿಗಳನ್ನು ಒಂದು ಛತ್ರಿಯಡಿಗೆ ತಂದ ಶರಣ ಚಳುವಳಿಗಳು ಕರ್ನಾಟಕದಲ್ಲಿ ಬಲವಾದ ಏಟನ್ನೇ ಕೊಟ್ಟಿದ್ದುವು. ಜೈನಧರ್ಮ ಹಾಗೂ ಅನೇಕ ಶಮಣಧಾರೆಗಳ ಉಪಸ್ಥಿತಿಗಿಂತಲೂ ದೊಡ್ಡ ಪ್ರಮಾಣದಲ್ಲಿ ತಳಸಮುದಾಯಗಳ ಧ್ರುವೀಕರಣದ ಯಶಸ್ಸು ಸಾಧಿಸಿದ ಶರಣ ಚಳುವಳಿ ವೈದಿಕತೆಯ ಬಿಕ್ಕಟ್ಟನ್ನು ಇನ್ನಷ್ಟು ತೀವ್ರಗೊಳಿಸಿತ್ತು. ಶರಣ ಚಳುವಳಿ ನಡೆದುಹೋದ ತರುವಾಯದ ಸರಿಸುಮಾರಿಗೆ ವಿಜಯನಗರದ ಆಡಳಿತವೂ ಕುಸಿತ ಕಂಡು, ಸಹಜವಾಗಿಯೇ ವೈದಿಕತೆಗಿದ್ದ ಪ್ರಭುತ್ವದ ಬೆಂಬಲವೂ ಅಸ್ಥಿರಗೊಂಡಿತು. ಈ ಎಲ್ಲಾ ಸವಾಲುಗಳಿಂದ ಅಗ್ರಹಾರಗಳು ಅಸ್ತಿತ್ವವನ್ನು ಖಾತರಿಗೊಳಿಸಿಕೊಳ್ಳಬೇಕಾದ ಒತ್ತಡಕ್ಕೆ ಸಿಲುಕಿ ವೈದಿಕ ಸಂಪ್ರದಾಯ ಶರಣತೆ ಇನ್ನಷ್ಟು ಬಿಗಿಯಾಗತೊಡಗಿತ್ತು, ನಿಷ್ಠುರವಾಗತೊಡಗಿತ್ತು. ಶರಣ ಚಳುವಳಿಯ ಕಾರಣದಿಂದಾಗಿ ಕೆಳಜಾತಿ ಜನವರ್ಗಗಳನ್ನು ಸಂಘಟನೆಯ ಮೂಲಕ ಲಿಂಗಾಯತ ಮತವಾಗಿ ಒಂದು ಸದೃಢಬಲವಾಗಿ ತೆರೆದುಕೊಂಡುದರ ಪರಿಣಾಮ ಇಂದಿಗೆ ಹೆಚ್ಚು ಪ್ರಕಟವಾಗಿಯೇ ಗೋಚರವಾಗುತ್ತಿದೆ. ಲಿಂಗಾಯತರನ್ನು ಬದಿಗೆ ಸರಿಸಿ ಕರ್ನಾಟಕದ ರಾಜಕಾರಣವನ್ನು ಮಾಡಲಾಗದು ಎಂಬ ನೇರ ಎಚ್ಚರಿಕೆಯನ್ನು ನಮ್ಮ ವರ್ತಮಾನದ ರಾಜಕಾರಣಿಗಳು ರವಾನಿಸುತ್ತಿರುವುದು, ಕರ್ನಾಟಕದ ಕೆಳಜಾತಿಗಳನ್ನು ಶಿವಸಂಸ್ಕೃತಿಯ ನೆರಳಿನಡಿಗೆ ತರುವಲ್ಲಿ ಯಶಸ್ವಿಯಾಗಿದ್ದ ಶರಣ ಚಳುವಳಿಯ ಚಾರಿತ್ರಿಕ ಕಾರಣದಿಂದ. ಇದು ಶೂದ್ರ ಸಮುದಾಯಕ್ಕೆ ಶಿವಸಂಸ್ಕೃತಿಯ ನೆಲೆಯಡಿಗೆ ಬಸವ ಚಳುವಳಿ ತುಂಬಿಟ್ಟ ಶಕ್ತಿ.

ಇಂದಿನ ಪ್ರಜಾಪ್ರಭುತ್ವ ಯುಗದ ಮತಶಕ್ತಿಯಾಗಿ ಪರಿಣಮಿಸಿರುವ ಈ ಶರಣಕೂಟ ಅಂದಿಗೂ ದೊಡ್ಡ ಶಕ್ತಿಯಾಗಿಯೇ ಇತ್ತು. ಇಂದಿನ ಈ ರಾಜಕೀಯ ಶಕ್ತಿ ಸಂಚಯನದ ಚರಿತ್ರೆ ಶರಣ ಚಳುವಳಿಯ ಕಾಲಘಟ್ಟಕ್ಕೆ ವಿಸ್ತರಿಸಿಕೊಂಡಿದೆ ಎಂಬುದನ್ನು ಗಮನಿಸಿದಾಗ, ಆವೊತ್ತಿಗೆ ಸಾಂಪ್ರದಾಯಿಕ ಶಕ್ತಿಗಳು ಅನುಭವಿಸಿರಬಹುದಾದ ಬಿಕ್ಕಟ್ಟಿನ ಚಹರೆಗಳು ಸಹಜವಾಗಿಯೇ ಗೋಚರವಾಗುತ್ತವೆ. ಅಗ್ರಹಾರಗಳು ಇನ್ನಷ್ಟು ವೈದಿಕೀಕರಣಕ್ಕೊಳಗಾದ ಇಂತಹ ಕಾಲಘಟ್ಟದಲ್ಲಿಯೇ ಒದಗಿಬಂದ ವಿಷ್ಣು ಕಥೆಗಳಿವು.

## ಅಮ್ಮ

ಪುರಾಣದ ಲಕ್ಷ ಪುಟಗಳ ಮಧ್ಯೆ
ನೆನಪಿನ ಪುಟವೇ ಅಮ್ಮ

ಕಾಲಗಳು ದೂರವಾದರೂ
ನೆನಪುಗಳ ಕೆದಕುವವಳು ಅಮ್ಮ

ಸುಖ ದುಃಖಗಳ ಓಟದ
ಸುಖದ ಜಯವೇ ಅಮ್ಮ

ನಕ್ಷತ್ರಗಳು ಕೋಟಿಗಳಿದ್ದರೂ
ಬೆಳದಿಂಗಳ ಚೆಲ್ಲುವವಳು ಅಮ್ಮ



ಇನ್ನೂ ಒಂದು ಸಂಗತಿಯೆಂದರೆ, ಅಂದಿಗೂ ಮತ್ತು ಇಂದಿಗೂ ಸಮಾನವಾಗಿ ಇಡಿಯ ದೇಶದ ವ್ಯಾಪಕ ಕ್ಯಾನವಾಸ್‌ನಲ್ಲಿ ಶಿವಸಂಸ್ಕೃತಿಯ ದೇಶೀಪರಂಪರೆಯ ನೆಲೆಯನ್ನು ಅಭದ್ರಗೊಳಿಸಲು ವೈದಿಕರು ಬಳಸಿದ ಪ್ರಭಾವಶಾಲಿ ಆಯುಧಗಳೆಂದರೆ, ವಿಷ್ಣುಪಾರಮ್ಯದ ಆಡುಂಬೊಲವಾದ ಈ ಎರಡು ಮಹಾಕಾವ್ಯಗಳು. ಅನೇಕ ಸಣ್ಣ-ದೊಡ್ಡ ಸಮುದಾಯಗಳು ಕಾಪಿಟ್ಟುಕೊಂಡು ಬಂದಿದ್ದ ತಮ್ಮದೇ ಆದ ಸಮುದಾಯ ಸ್ಮೃತಿಯ ಮಹಾಕಾವ್ಯಗಳ ನೆಲೆಗಟ್ಟನ್ನು ಕದಲಿಸುವ ಕೆಲಸವನ್ನು ಇವು ಇಂದಿಗೂ ಮುಂದುವರಿಸಿವೆ. ಇದರಿಂದಲೇ ಅವುಗಳಿಗೆ ಪಾನ್ ಇಂಡಿಯನ್ ಆದ ಗುಣವೊಂದಿದೆ ಎಂದು ಸ್ಥಾಪಿಸಲು ಸಾಧ್ಯವಾಯಿತು. ಇದನ್ನು ಚರಿತ್ರೆಯ ವಿಕಾಸಗತಿಯಲ್ಲಿ ವೈದಿಕತೆ ಸಾಧಿಸಿದ ಯಶಸ್ಸೆಂದೇ ಗಮನಿಸಬೇಕಾಗುತ್ತದೆ. ಕನ್ನಡವನ್ನೂ ಒಳಗೊಂಡು ಇತರ ದೇಸೀ ಭಾಷೆಗಳಲ್ಲಿ ರಾಮಾಯಣ ಮತ್ತು ಭಾರತಗಳ ಲಿಖಿತ ಪುನರಾವೃತ್ತಿಗಳನ್ನು ಯಾರು ತಂದರು ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಉತ್ತರಗಳು ಅಗ್ರಹಾರಕ್ಕೆ ಕರೆದೊಯ್ಯುತ್ತವೆ. ಕನ್ನಡದಲ್ಲಿ ಜೈನಪರಂಪರೆಯಿಂದ ಹೊರತಾದ ರೂಪದಲ್ಲಿ ರಾಮಾಯಣ-ಭಾರತಗಳ ಆವೃತ್ತಿಗಳಾವುವು ಎಂಬುದು ನಮ್ಮ ಕಣ್ಣಮುಂದೆಯೇ ಇವೆ. ಮಧ್ಯಕಾಲೀನ ಕನ್ನಡದ ಚರಿತ್ರೆಯವರೆಗೆ, ಅಂದರೆ ಭಕ್ತಿಚಳುವಳಿಯ ಕಾಲಘಟ್ಟದವರೆಗೆ ಈ ಪ್ರಕ್ರಿಯೆ ಸಂಭವಿಸಲಿಲ್ಲ ಎಂಬುದನ್ನೂ ಗಮನಿಸಬೇಕು. ಇದೇ ಕಾಲಘಟ್ಟದ ಕನ್ನಡದ ಶೈವಕವಿಗಳ ಕಾವ್ಯವಸ್ತುವಿನ ಆಯ್ಕೆ-ನಿರಾಕರಣೆಯನ್ನು ಈ ಹಿನ್ನೆಲೆಯಲ್ಲಿಯೇ ಗಮನಿಸಬೇಕು. ಅದರಲ್ಲಿಯೂ ಹರಿಹರನಂತಹ ಕವಿಗಳು ಯಾವ ಪುರಾಣಕ್ಕೆ ವಲಸೆ ಹೋದರು, ಯಾವುದರ ಕುರಿತಾಗಿ ಸಲ್ಲದ ನಿರಾಕರಣೀಯ ಮಾದರಿಯೆಂಬ ಅತ್ಯುಗ್ರ ನಿಲುವನ್ನು ತಾಳಿದರೆಂಬುದನ್ನು ಗಮನಿಸಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಹರಿಹರನಲ್ಲಿರುವ ಕನ್ನಡ ಪ್ರಜ್ಞೆಗೆ ವಿಶೇಷ ಮಹತ್ವವಿದೆ.

ಕರ್ನಾಟಕದ ಸಾಂಸ್ಕೃತಿಕ ಸಂದರ್ಭದಲ್ಲಿ ನಡೆದ ಈ ಬೆಳವಣಿಗೆಗಳಿಗೂ, ಮಧ್ಯಕಾಲೀನ ಯುಗದಲ್ಲಿ ವೈದಿಕ ಕವಿಗಳು ಪ್ರಚುರಗೊಳಿಸಿದ ಹರಿಕೀರ್ತನೆ ಮತ್ತು ಹರಿಕಥಾ ವಸ್ತುವುಳ್ಳ ಹಾಡುಗಬ್ಬಗಳಿಗೂ ನೇರ ಸಂಬಂಧವಿದೆ. ಶರಣಚಳುವಳಿ ಶಿವಸಂಸ್ಕೃತಿ ಹಿನ್ನೆಲೆಯಲ್ಲಿ ಕ್ರೋಡೀಕರಿಸಿದ ಬಲಕ್ಕೆ ಪ್ರತಿರೋಧವಾಗಿಯೇ ವೈದಿಕರು ದೇವಾಲಯದಂತಹ ಅಗ್ರಹಾರದ ನೆಲೆಗಳಿಂದ ವೈದಿಕಮೌಲ್ಯಗಳನ್ನು ನಿಸ್ಸಂಕೋಚವಾಗಿ ತುಂಬಿದ ವಿಷ್ಣುಕಥನವನ್ನು ಪ್ರಸಾರಿಸಿದರು. ಮನುಸ್ಮೃತಿಯ ಅನೇಕ ಮೌಲ್ಯಗಳನ್ನು ಹಾಗೆ ಹಾಗೆಯೇ ತಂದರು. ಪ್ರಾಯಶಃ ವೈದಿಕರು ಅನುಭವಿಸಿದ ಸಾಂಸ್ಕೃತಿಕ ಬಿಕ್ಕಟ್ಟಿನಿಂದ ಪಾರಾಗಲು ಮತ್ತು ತಮ್ಮ ಅಧೀನ ಸಮುದಾಯಗಳ ಮೇಲಿನ ಹಿಡಿತವನ್ನು ಗಟ್ಟಿಗೊಳಿಸಿಕೊಳ್ಳಲು ಕಂಡುಕೊಂಡ ದಾರಿಗಳಿವು. ವಿಜಯನಗರ ಪತನಾನಂತರ ಇನ್ನಷ್ಟು ಬಿಕ್ಕಟ್ಟನ್ನು ಎದುರಿಸಿರಬಹುದಾದ ಈ ಸಮುದಾಯ ಶಿವಸಂಸ್ಕೃತಿಗೆ ಉತ್ತರಿಸಲು ಮೂರು ಮುಖ್ಯ ದಾರಿಗಳನ್ನು ಕಂಡುಕೊಂಡಂತಿದೆ. - (೧) ಅಕ್ಷರಕಾವ್ಯಗಳನ್ನು ಹಾಡುಗಬ್ಬದ ಧಾಟಿಯಲ್ಲಿ ಬರೆದುದಲ್ಲದೆ ಹೀಗೆ ಬರೆಯಲಾಗಿದ್ದ ಅಕ್ಷರಕಾವ್ಯಗಳನ್ನು ದೇವಾಲಯದಂತಹ ಸಾಂಸ್ಕೃತಿಕ ಕೇಂದ್ರಗಳಲ್ಲಿ ಹಾಡಿ ಅದಕ್ಕೆ ವಿವರಣೆ/ವ್ಯಾಖ್ಯಾನ ಹೇಳುವ 'ಗಮಕ' ಎನ್ನುವ ಕಾವ್ಯ ಪ್ರಸರಣದ ಹೊಸ ದಾರಿಯನ್ನು ಕಂಡುಕೊಂಡುದು: (೨) ಜಾನಪದ ರಂಗಭೂಮಿಯ ಸೋಗಿನಲ್ಲಿ ವಿಷ್ಣುಕಥೆಗಳನ್ನು, ವೈದಿಕ ಮೌಲ್ಯಗಳನ್ನು ತುಂಬಲು ದಾರಿಕಂಡುಕೊಂಡುದು. ಉದಾಹರಣೆಗೆ ವಿಷ್ಣುಕಥೆಯನ್ನು ಪ್ರಸಾರಿಸುವ ಕೃಷ್ಣಪಾರಿಜಾತದಂತಹ ರಂಗಪ್ರಕಾರವನ್ನು ಅಭಿವೃದ್ಧಿಪಡಿಸಿದ್ದು. ವೈದಿಕೇತರ ಶಾಕ್ತ ಗುಡಿಗಳಲ್ಲಿ ವಿಷ್ಣುದಶಾವತಾರ ಮೇಳಗಳನ್ನು ಅಣಿಗೊಳಿಸಿ ಈ ನಡುಗನ್ನಡ ಮೂಲದ ಕಾವ್ಯಗಳಿಂದ ಹರಿಕಥನದ ಪ್ರಸಂಗಗಳನ್ನು ಪುನರುತ್ಪಾದಿಸಿ ಆಡಿಸಿದ್ದು: (೩) ಕೆಳಜಾತಿಗಳಿಗೆ (ದಕ್ಷಿಣ ಕರ್ನಾಟಕದ ದಾಸಪ್ಪಗಳು ಮತ್ತು ಉತ್ತರ ಕರ್ನಾಟಕದ ಚೆನ್ನದಾಸರು) ವೈಷ್ಣವ ದೀಕ್ಷೆಕೊಟ್ಟು ದಾಸದೀಕ್ಷೆಯ ಮೂಲಕ ಹರಿಕಥನವನ್ನು ಪ್ರಸಾರಿಸುವ ವೈರಮುಡಿಯಂತಹ ಸಮುದಾಯಗಳ ಹುಟ್ಟಿಗೆ




ಕಾರಣವಾದುದು. ಈ ಮೂರೂ ದಾರಿಗಳನ್ನು ಪರಿಣಾಮಕಾರಿಯಾಗಿ ಬಳಸಿದ್ದರಿಂದಲೇ ಇವತ್ತಿಗೆ ಕರ್ನಾಟಕದಲ್ಲಿ ಶಿವಸಂಸ್ಕೃತಿಯ ಸಂಖ್ಯಾಬಾಹುಳ್ಯದ ನಡುವೆಯೂ, ಗುಪ್ತ ರಾಜಕೀಯ ಶಕ್ತಿಯಾಗಿ ಅದಕ್ಕೆ ನೆಲೆಗೊಳ್ಳಲು ಸಾಧ್ಯವಾಗಿದೆ ಎಂಬುದನ್ನು ಮರೆಯಬಾರದು. ಹಾಗಾಗಿಯೇ ಭಾರತೀಯ ವಿಶಾಲ ಕ್ಯಾನ್ವಾಸಿನಲ್ಲಿಯೇ ಕಾಣಿಸಿಕೊಳ್ಳುವ ಭಕ್ತಿಚಳುವಳಿಯನ್ನು ಕುರಿತು ಪ್ರಭುತ್ವ ವಿರೋಧಿ, ಪ್ರಗತಿಪರವೆಂಬ ಸರಳ ತೀರ್ಮಾನಗಳು ಸಹಜವಾಗಿಯೇ ಅವಸರದ ತೀರ್ಮಾನವಾಗುತ್ತದೆ. ಈ ಹಿನ್ನೆಲೆಯಲ್ಲಿ, ''ಸಾಮಾನ್ಯವಾಗಿ ಭಕ್ತಿಪಂಥವನ್ನು ಒಂದು ಪ್ರತಿಭಟನಾತ್ಮಕ ಚಳುವಳಿ ಎಂಬರ್ಥದಲ್ಲಿ ವ್ಯಾಖ್ಯಾನಿಸುವುದುಂಟು. ರಾಜತ್ವದ ವಿರುದ್ಧದ ಪ್ರತಿಭಟನೆ ಎಂದೂ ವ್ಯಾಖ್ಯಾನಿಸುವುದುಂಟು. ಆದರೆ, ಇವೆರಡೂ ಅರ್ಧಸತ್ಯಗಳು. 'ಹಿಂದೂ' ಧರ್ಮದ ಚೌಕಟ್ಟಿನೊಳಗೆ ನಿಂತು 'ಮಧ್ಯಯುಗ'ದ ಭಾರತೀಯ ಚರಿತ್ರೆಯ ಸಂದರ್ಭದಲ್ಲಿ ಈ ಭಕ್ತಿಪಂಥ ಪ್ರಭುತ್ವ ಮತ್ತು ಸಾಂಪ್ರದಾಯಕತೆಯನ್ನು ಸ್ಥಿರೀಕರಿಸುವ ಕೆಲಸ ಕೂಡ ಮಾಡಿದೆ ಎನ್ನುವುದೂ ನಿಜ. ಅದರಲ್ಲೂ ಆದಿವಾಸಿ ಮತ್ತು ಕೆಳಜಾತಿಗಳನ್ನು ಹಿಂದೂ ಧರ್ಮದ ಕೇಂದ್ರೀಕೃತ ವ್ಯವಸ್ಥೆಯೊಳಗೆ ಅದು ತಂದುಬಿಟ್ಟಿತು.'' ಎನ್ನುವ ಡಿ. ಆರ್. ನಾಗರಾಜ ಅವರ ಗುರುತಿಸುವಿಕೆ ಸರಿಯಾಗಿಯೇ ಇದೆ ಎನ್ನಬೇಕು. ಹಾಗಾಗಿ ಇಂತಹ ಚಳುವಳಿಯೊಂದನ್ನು ಕರ್ನಾಟಕದ ಸಂದರ್ಭದಲ್ಲಿ ಅದರ ಕ್ರಿಯಾಚರಣೆಯ ಸ್ವರೂಪವನ್ನು ಮರೆತು ಪ್ರಗತಿಪರ ಆಶಯದ ಚಳುವಳಿಯಾಗಿ ಗುರುತಿಸಬೇಕಾಗಿಲ್ಲ.

ಈ ಸಂಗತಿಯ ಜೊತೆಗೆ ನಮಗಿರಬೇಕಾದ ಇನ್ನೊಂದು ಎಚ್ಚರವನ್ನೂ ಇಲ್ಲಿ ಪ್ರಸ್ತಾಪಿಸಬೇಕು. ಅದೇನೆಂದರೆ ಭಾರತವೆನ್ನಲಾಗುವ ಭೂಖಂಡದ ಇತಿಹಾಸವನ್ನು ಕೆದಕಿಕೊಳ್ಳುವುದಾದರೆ, ಈ ಭೂಭಾಗಕ್ಕೆ ಸಂಬಂಧಿಸಿದ ಮಧ್ಯಯುಗೀನ ಕಾಲಘಟ್ಟವು ತಳಮಳಗಳ ಕಾಲಘಟ್ಟವೂ ಹೌದು. ರಾಜಕೀಯ, ಧಾರ್ಮಿಕ, ತಾತ್ವಿಕವೆನ್ನಬಹುದಾದ ಬಹು ಆಯಾಮಗಳಲ್ಲಿ ಇದು ಸಂಘರ್ಷಗಳ ಕಾಲಘಟ್ಟ. ಆದರೆ ಭಾರತದ ಪುರಾತನ ಹಾಗೂ ಈ ಮಧ್ಯಯುಗಕ್ಕೆ ಸಂಬಂಧಿಸಿದ ಸಮಾಜೋ-ಧಾರ್ಮಿಕ ಚರಿತೆ, ಜೀವನ/ಲೋಕ ವಿವರಣ ಕ್ರಮವಾದ ಮೀಮಾಂಸೆ ಹಾಗೂ ತಾತ್ವಿಕವಾದ ಸಂಘರ್ಷಗಳನ್ನು ವಿವರಿಸಿಕೊಂಡು ಬರುವಲ್ಲಿ ಕೆಲವು ಸಿದ್ಧಕ್ರಮಗಳು ನೆಲೆನಿಂತುಬಿಟ್ಟಿವೆ. ಈ ಸಿದ್ಧಕ್ರಮಗಳು ಯಾವುದನ್ನು ಹೇಗೆ ಓದಿಸಬೇಕು, ಯಾವುದನ್ನು ಹೇಗೆ ನೋಡಬೇಕು ಎಂಬ ನಿರಂತರ ತರಬೇತಿಯನ್ನು ಆಗುಗೊಳಿಸುವ ಮೂಲಕ ನಮ್ಮದೇ ಗತದ ಕುರಿತಾಗಿ ನೋಡಿಕೊಳ್ಳಲು ಇರಿಸಿಕೊಳ್ಳಬೇಕಾದ ನಮ್ಮದೇ ಕಣ್ಣುಗಳನ್ನು ಅಪಹರಿಸಿಬಿಟ್ಟಿವೆ. ಕೃತಿಯೊಂದರ ರಚನೆಯಂತೆಯೇ ಅದರ ಓದೂ ಕೂಡ ರಾಜಕಾರಣದ ಭಾಗವೇ ಆಗಿರುವುದರಿಂದ ಈ ಸಿದ್ಧಕ್ರಮಗಳು ಯಾವುದನ್ನು ಸಮೂಹಕ್ಕೆ ಓದಿಸಬೇಕು ಮತ್ತು ಯಾವುದನ್ನು ಸಮೂಹಕ್ಕೆ ಸಿಗದ ಹಾಗೆ ನೋಡಿಕೊಳ್ಳಬೇಕು ಎಂಬ ವಿಚಾರದಲ್ಲಿಯೂ ತಮ್ಮ ಜಾಣ ಎಚ್ಚರವನ್ನು ಉಳಿಸಿಕೊಂಡು ಬಂದಿವೆ. ಅದನ್ನು ಇನ್ನಷ್ಟು ಸ್ಪಷ್ಟಪಡಿಸುವುದಾದರೆ, ಇಂತಹ ಗಂಭೀರ (?) ಎಚ್ಚರದೊಂದಿಗೆ ಸಮೂಹವನ್ನು ನಿಯಂತ್ರಿಸುವ ಪರೋಕ್ಷ ರಾಜಕಾರಣವನ್ನು ಹಿತಾಸಕ್ತಗುಂಪೊಂದು ಈ ಸಿದ್ಧಕ್ರಮಗಳನ್ನು ಚಾಲ್ತಿಯಲ್ಲಿಡುವ ಮೂಲಕವೇ ಅನೂಚಾನವಾಗಿ ಕಾದುಕೊಂಡು ಬಂದಿದೆ ಎನ್ನಬಹುದು. ಹಾಗಾಗಿ ನಾವುಗಳು ಕಟ್ಟಿಕೊಳ್ಳಬೇಕಾದ ಪ್ರತಿರಾಜಕಾರಣ ಸಾಧ್ಯವಾಗಬೇಕಾದರೆ ಈವರೆಗಿನ ನಮ್ಮ ಚರಿತ್ರೆ, ಮೀಮಾಂಸೆ ಮತ್ತು ತಾತ್ವಿಕ ಅನುಸಂಧಾನಗಳನ್ನು ಈ ಸಿದ್ಧಕ್ರಮಗಳಿಂದ ಹೊರತಾದ ಬೇರೆಯದೇ ಆದ ರೀತಿಯಲ್ಲಿ ಓದಿಕೊಳ್ಳಬೇಕಾಗಿದೆ. ಅಂತೆಯೇ ಕನಕನನ್ನು ಈವರೆಗೆ ಓದಿ ಒಪ್ಪಿಸಿರುವ ಬಗೆಯನ್ನು ಕೆದಕುತ್ತಾ ನಮಗೆ ಬೇಕಾದ ವರ್ತಮಾನದ ಕನಕನನ್ನು ಹೊಸದಾಗಿ

ಹುಡುಕಿಕೊಳ್ಳಬೇಕಾಗಿದೆ. ಯಾಕೆಂದರೆ ಈವರೆಗೆ ಕನಕನನ್ನು ಓದಿರುವ ಕ್ರಮ ಯಾವುದು ? ಮತ್ತು ನಮ್ಮ ಮುಂದಿರುವ ಕನಕನನ್ನು ಕಟ್ಟಿಕೊಟ್ಟ ಓದು ಯಾವುದು ? ಆ ಓದು ಕನಕನ ಯಾವ ಹೊರಚಾಚುಗಳನ್ನು ಅನುಮತಿಸಿದೆ ಮತ್ತು ಯಾವುದನ್ನು ನಿರಾಕರಿಸಿದೆ ಎಂಬ ವಿಶ್ಲೇಷಣೆಯ ಬೆಳಕಿನಲ್ಲಿಯೇ ಚಾಲ್ತಿಯಲ್ಲಿರುವ ಕನಕ ಮತ್ತು ನಮಗೆ ಬೇಕಾದ ಕನಕ ಎಂಬ ನೆಲೆಗಳನ್ನು ವಿಭಜಿಸಿ ವಿವರಿಸಿಕೊಳ್ಳಬೇಕಾಗುತ್ತದೆ. ಓದು ಮತ್ತು ಓದುವ ಕ್ರಮದ ಮೂಲಕ ಮಾಡುವ ರಾಜಕಾರಣಗಳನ್ನು ಅರ್ಥೈಸುವ ನಿಟ್ಟಿನಲ್ಲಿ ಈ ವಿಶ್ಲೇಷಣೆ ಅನಿವಾರ್ಯವೂ ಹೌದು.

- ೩ -

ಕನಕದಾಸನನ್ನು ಏಕರೂಪಿಯಾದ ಮಾದರಿಯಲ್ಲಿ ನಿರೂಪಿಸಿಕೊಳ್ಳಲಾಗದು. ಆತ ಏಕರೂಪಿಯಾಗಿ ದಕ್ಕುವುದಿಲ್ಲ, ಹಾಗೆ ದಕ್ಕದಂತೆ ಮಾಡಲಾಗಿದೆಯೇ/ ದಕ್ಕಿಸಿಕೊಳ್ಳಲಾಗಿಲ್ಲವೇ ಎನ್ನುವುದು ನಿಜಕ್ಕೂ ಪ್ರಶ್ನೆ. ಒಂದಂತೂ ಸ್ಪಷ್ಟ. ಕನಕ ಒಂದು ಅಚ್ಚಿಗೆ ಸಿಗಲಾರ. ಕನಕನ ರಚನೆಗಳ ಭಾಷಿಕ ಅಧ್ಯಯನವನ್ನು ಮಾಡಿದ ಕೆ. ವಿ. ನಾರಾಯಣ ಅವರು ಕಥಕ ಮತ್ತು ಕೀರ್ತನಕಾರನೆಂಬ ಉಭಯ ಮಾದರಿಯಲ್ಲಿ ಕನಕನನ್ನು ವಿವರಿಸಿಕೊಳ್ಳುತ್ತಾ, ಕಥಕ ಕನಕನಿಗಿಂತ ಕೀರ್ತನಕಾರ ಕನಕನಲ್ಲಿರುವ ಭಾಷೆಯ ಹೊಸ ಚಹರೆಯನ್ನು ಗುರುತಿಸುತ್ತಾರೆ. ನಮಗೆ ಕನಕ ಇನ್ನೂ ಒಂದು ವಿಧದಲ್ಲಿ ಸೀಳಾಗಿಯೇ ದಕ್ಕಬಲ್ಲ. ಅದು ಆತನ ಪ್ರವೃತ್ತಿಗೆ ಸಂಬಂಧಿಸಿದುದು. ಅಲ್ಲಿ ಕನಕ ಮತ್ತು ದಾಸ ಎಂಬೆರಡೂ ಹೊಂದಾಣಿಕೆಯಾಗದ, ಬೇರಾಗಿಯೇ ನಿಲ್ಲುವ ಸೀಳುಗಳಿವೆ. ದಾಸ ಕನಕ, ನೆಲದ ಕನಕನಿಗಿಂತ ಬೇರೆಯಾಗಿಯೇ ಕಾಣುತ್ತಾನೆ. ಇದರ ಜೊತೆಗೆ ಕನಕನನ್ನು ಭಕ್ತ, ಕೀರ್ತನಕಾರ ಎಂಬ ಕಟ್ಟಿಗೆ ಕಟ್ಟಿಡಲು ಎಷ್ಟೇ ಪ್ರಯತ್ನಿಸಿದರೂ, ವೈಷ್ಣವ ಭಕ್ತಿಗೆ ಆತ ಸೀಮಿತಗೊಳ್ಳದೇ ಹೋಗುತ್ತಾನೆ. ಕನಕನಲ್ಲಿ ವೈಷ್ಣವ ಚಹರೆಗಳಿಲ್ಲವೇ ಎಂದರೆ ಖಂಡಿತಾ ಅಂತಹ ಚಹರೆಗಳಿವೆ. ಹಾಗಾಗಿಯೂ ಆತ ಅದಕ್ಕೊಂದಕ್ಕೆ ಬಂಧಿಯಾಗಿ ಉಳಿಯುವುದಿಲ್ಲ ಎನ್ನುವುದು ಬಹಳ ಮುಖ್ಯ. ಆ ಅರ್ಥದಲ್ಲಿ ದಾರ್ಶನಿಕವಾಗಿ, ಪಾಂಥಿಕವಾಗಿ ಕನಕ ಜಂಗಮನೇ ಹೊರತು ಜಡನಲ್ಲ. ರಾಮಧಾನ್ಯ ಚರಿತೆ, ನಳಚರಿತೆಯಂತಹ ಕೃತಿ ರಚಿಸಿದ ಕನಕನಿಗೆ ಬದುಕೆಂದರೆ ಬರಿಯ ಭಕ್ತಿ, ಅಷ್ಟೇ ಅಲ್ಲ, ಆತನ ಹರಿಭಕ್ತಿಸಾರವೂ ಬರಿಯ ಹರಿಸಂಕೀರ್ತನವಲ್ಲ. ಆತನಿಗೆ ತನ್ನ ಕೃತಿಗಳೆಲ್ಲವೂ ಸಾಮಾಜಿಕ ಸಂದರ್ಭದಲ್ಲಿಯ ಅನುಭವಶೋಧದ ಮಾಧ್ಯಮಗಳು. ಅಲ್ಲಿ ಕುಲಶ್ರೇಷ್ಠತೆ, ಅಸಮಾನತೆ, ವರ್ಣಾಶ್ರಮದ ನಿರಾಕರಣೆಯ ಸಾಮಾಜಿಕ ಜರೂರಿದೆ. ಸಾಂಸಾರಿಕ ಬದುಕಿನ ಔನ್ನತ್ಯದ ಜೊತೆಗೆ ಇಂದ್ರಿಯ ಸಮುಚಿತವಾಗಿ ಬಾಳುವ ಮನುಷ್ಯನ ಸಂಕಟಗಳನ್ನು ಒಳಗೊಂಡ ಬಹು ಆಯಾಮಗಳಿವೆ. ಹಾಗಾಗಿ ಆತನ ವ್ಯಕ್ತಿತ್ವಕ್ಕೆ ಕವಿ ಮತ್ತು ಕೀರ್ತನಕಾರನ ಆಚೆಗೆ ಒಂದು ಸಾಮಾಜಿಕತೆಯ ಮುಖವಿದೆ.

ಬಹಳ ಮುಖ್ಯವಾದ ಸಂಗತಿಯೆಂದರೆ ಕನಕ ಇವತ್ತು ಕೇವಲ ಕೀರ್ತನಕಾರ, ಕವಿ, ಜಂಗಮ, ಶಮಣಧಾರೆಯ ಸೂಚನೆಯಿರುವ ಅವಧೂತನಾಗಿ ಮಾತ್ರವೇ ಉಳಿದಿಲ್ಲ. ಅದರಾಚೆಗೆ ಒಂದು ಸಮುದಾಯ ಆತನನ್ನು ತನ್ನ ಅಸ್ಮಿತೆಯ ದ್ಯೋತಕವಾಗಿ ಒಪ್ಪಿಕೊಂಡಿದೆ. ಇವತ್ತು ಕನಕನನ್ನು ತನ್ನ ಸಾಂಸ್ಕೃತಿಕ ಐಕಾನಾಗಿ ಬಹುಮಟ್ಟಿಗೆ ಒಪ್ಪಿಕೊಂಡಿರುವ ಹಾಗೂ ಸ್ಥಾಪಿಸಿಕೊಳ್ಳುವಲ್ಲಿ ಯಶಪಡೆದಿರುವ ಕುರುಬ ಕುಲ ಈ ದೇಶದ ಬುನಾದಿಯ ಕುಲಗಳಲ್ಲೊಂದು. ಮಹಾಕವಿ ಕಾಳಿದಾಸನೂ ಇದೇ ಕುಲಕ್ಕೆ ಸೇರಿದವನೆನ್ನಲಾಗಿದೆ. ಇದಕ್ಕೆ ಕನಕ ದಕ್ಕುವುದು ಅದರ ಸಾವಿರಾರು ವರ್ಷಗಳ ಸಾಂಸ್ಕೃತಿಕ ಪಯಣದ ನಂತರ. ಸಾವಿರಾರು ವರ್ಷಗಳ ಈ ನಿಡಿದಾದ ಪಯಣದಲ್ಲಿ ಅದರ ಆರಾಧನಾತ್ಮಕ ಚಹರೆಗಳು ಏನಾಗಿದ್ದವು ? ಈ ದೇಶದ ತಾತ್ವಿಕ ಸಂಘರ್ಷಗಳಿಗೆ ಈ ಕುಲ ಯಾವ ಪ್ರಮಾಣದಲ್ಲಿ ಸಾಕ್ಷಿಯಾಗಿದೆ ? ಅದು ತನ್ನ ದೈವವನ್ನು ಕಟ್ಟಿಕೊಳ್ಳುತ್ತಾ ಬಂದ ಬಗೆ ಎಂತಹದ್ದು ? ಎಂಬ ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಳ್ಳಬೇಕಾಗುತ್ತದೆ. ಈ ದೇಶದ ಮೂಲಕುಲಗಳಲ್ಲೊಂದಾದ ಕುರುಬ ಕುಲ ಮೂಲತಃ ಶೈವ-ಶಾಕ್ತ ಪರಂಪರೆಯದು. ಹಾಲು-ರಸ-ಜಲ ಸಂಸ್ಕೃತಿಯ ಮಾತೃಪ್ರಧಾನತೆಯ ಚಹರೆಯುಳ್ಳದ್ದು. ಕುರಿಹಿಕ್ಕೆ-ಬಳ್ಳಗಳನ್ನು ಶಿವನೆಂದು ಆರಾಧಿಸಿಕೊಂಡು ದ್ವೈತಾದ್ವೈತಗಳನ್ನು ದಾಟಿಕೊಂಡು ಬದುಕಿದ ಸಮುದಾಯವಿದು. ಕುರಿಗಳು ಮೇಯಲು ಹೋದಲ್ಲೆಲ್ಲಾ ತಮ್ಮದೇ ವಿಠಲ-ಬೀರಪ್ಪನನ್ನು ಸಿಕ್ಕಿದ ಇಟ್ಟಿಗೆಯ ಮೇಲಿಟ್ಟು ಆರಾಧಿಸಿಕೊಳ್ಳಬಲ್ಲ ಆಹ್ವಾನ-ವಿಸರ್ಜನಗಳ ಸಹಜತೆಯನ್ನು ಮೈಗೂಡಿಸಿಕೊಂಡ ಕುಲವಿದು. ಪ್ರಧಾನವಾಗಿ ಬೆವರಿನ ಸಂಸ್ಕೃತಿಗೆ ಸಮೀಪವಾದ ಶಿವಪರಂಪರೆಯ ದಟ್ಟ ಛಾಯೆಯಿರುವ ಸಮುದಾಯವೆಂಬುದು ಸ್ಪಷ್ಟ. ಪ್ರತಿನಿಧೀಕರಣದ ಕಾರಣಕ್ಕಾಗಿ, ಅಸ್ಮಿತೆಯ ಕಾರಣಕ್ಕಾಗಿ ಈ ಸಮುದಾಯವು ತನ್ನ ಸಾಂಸ್ಕೃತಿಕ ಪ್ರತಿನಿಧಿಯಾಗಿ ಕಟ್ಟಿಕೊಳ್ಳುವ ಕನಕ ಯಾರಿಂದ ನಿರ್ದೇಶಿತವಾದ ಮಾದರಿ ಎಂಬ ಎಚ್ಚರ ಬಹಳ ಮುಖ್ಯ. ಯಾಕೆಂದರೆ ಸಮುದಾಯದ ಸಾಮಾಜಿಕ ಮತ್ತು ಆರಾಧನಾತ್ಮಕ ಇತಿಹಾಸವನ್ನೂ ಇಂತಹ ಸಾಂಸ್ಕೃತಿಕ ಅಸ್ಮಿತೆಯ ಅಚ್ಚುಗಳ ಮೂಲಕ ಕಳೆದುಕೊಳ್ಳುವಂತಾದರೆ ಉಂಟಾಗುವ ಅಪಾಯಗಳ ಕಡೆಗೂ ಎಚ್ಚರ ಹೊಂದಿರಬೇಕಾಗುತ್ತದೆ. ಹಾಗಾಗಿ ಸಮುದಾಯವೊಂದು ಕನಕನಂಥವನನ್ನು ತನ್ನ 'ಐಕಾನ್' ಆಗಿ ಬಳಸಿಕೊಳ್ಳುವಲ್ಲಿ ಆತನ ಪಾಂಥಿಕ ಚಹರೆಯನ್ನು ಹೇಗೆ ವಿವರಿಸಿಕೊಳ್ಳುತ್ತದೆ, ಯಾವ ಪಾಂಥಿಕ ಧಾರೆಯಲ್ಲಿ ಅನುಸಂಧಾನ ಮಾಡಿಕೊಳ್ಳುತ್ತಿದೆ ಎನ್ನುವುದು ಮುಖ್ಯವಾಗುತ್ತದೆ.

ಈಗ ನಮ್ಮೆದುರಿಗಿರುವುದು ಬಹುಮಟ್ಟಿಗೆ ವೈಷ್ಣವ ಪಾಂಥಿಕ ಅಚ್ಚಿನಲ್ಲಿಯೇ ಎರಕಹೊಯ್ದು ನೀಡಲಾದ ಕನಕ. ಹಾಗಾಗಿಯೇ ಕನಕ ಎಂದ ತಕ್ಷಣ ನಮಗೆ ಆತನ ಬಾಡ ನೆನಪಾಗುವುದಕ್ಕಿಂತಲೂ ಉಡುಪಿ, ವಿಜಯನಗರಗಳೆಂಬ ಇನ್ನೆರಡು ನೆಲೆಗಳು ಥಟ್ಟನೆಯೆ ನೆನಪಾಗುವಂತೆ ನಮ್ಮನ್ನು ಸಿದ್ಧಗೊಳಿಸಲಾಗಿದೆ. ಉಡುಪಿಯ ದೇಗುಲದಲ್ಲಿಯ ಕಿಂಡಿಯೊಂದಕ್ಕಿರುವ ಕನಕನ ಕಿಂಡಿಯೆಂಬ ಹೆಸರು ಮತ್ತು ದೇಗುಲದ ಹೊರಗೆ ನಿಲ್ಲಿಸಲಾದ ಕನಕನ ಮೂರ್ತಿಗಳೇ ಕನಕನಿಗಿರುವ ಉಡುಪಿಯ ಸಂಬಂಧದ ಕುರುಹುಗಳಾಗಿ ನಿಂತುಬಿಟ್ಟಿವೆ. ಆದರೆ ವಾಸ್ತವಿಕವಾಗಿ ನೀಲಗಂಗಯ್ಯ ಪೂಜಾರ ಅವರೆನ್ನುವಂತೆ, ''ಅನುಕೂಲಕ್ಕೆ ತಕ್ಕಂತೆ ಒಮ್ಮೆ ನವಗ್ರಹ ಕಿಂಡಿಯೆಂದು ಮಾಧ್ವ ಮಡಿವಂತರೆದುರು, ಮತ್ತೊಮ್ಮೆ ಸಾಹಿತ್ಯ ಸಂದರ್ಭದಲ್ಲಿ ಕನಕನ ಕಿಂಡಿಯೆಂದು ಕರೆಯುವ ಈ ಕಿಂಡಿ ಹುಟ್ಟಿಕೊಂಡದ್ದೇ ಕ್ರಿ.ಶ. ೧೪೩೬ರ ಅಣ್ಣಪ್ಪ ಒಡೆಯನ ದಾಳಿಯ ನಂತರದ ದೇವಾಲಯದ ಪುನಾರಚನೆಯ ಕಾಲಕ್ಕೆ.'' ಈ ಕಾಲಕ್ಕೂ ವ್ಯಾಸ-ಕನಕದಾಸರ ಕಾಲಕ್ಕೂ ಏನಿಲ್ಲವೆಂದರೂ ಒಂದು ನೂರು ವರ್ಷಗಳ ಅಂತರವಿದೆ. ಕನಕನನ್ನು ಉಡುಪಿಯ

## ನಗಳು



**ನಾ**ನು
ಸುಖಾಸುಮ್ಮನೆ
ನಗೋದಿಲ್ಲ
ಅಂತ
ನಗಕ್ಕೆ
ಬಲವಂತ
ಮಾಡಿದ..
ಬಲವಂತ ಮಾಡಿ ಮಾಡಿ
ಹೊಸ ಅಳು ಶುರುಮಾಡ್ದ.
ಅರ್ಥವೇ ಇಲ್ಲದ ಅಳು
ಭಾವ ಶೂನ್ಯದ ಅಳು

ನಗು ಅಳು
ಒಂದಾಗಿ
ನಗಳು
ಅಂತ ಆಯ್ತು..
ನಾನು ಹೊಸದಾಗಿ
ಹುಟ್ಟಿದ್ ನಾಯಿಗೆ 'ನಗಳು'
ಎಂದೆಸರಿಟ್ಟೆ..
ಅಳು–ನಗು
ಇರದೇ
ಊಳಿಡುತ್ತಾ–ಬೊಗಳುತ್ತಿತ್ತು..
ಅದು ಏನಿರಬಹುದೆಂದು
ಹುಡುಕುವಷ್ಟರಲ್ಲಿ
ಮಲಗಿದ್ದೆ..
ಸುತ್ತಲು
ಅಳುತ್ತಿದ್ದರು..
ಅಳುವಿನಾಚೆಯ ಒಳಗೆ
ನಗು ತೇಲಿಬರುತ್ತಿತ್ತು...

**ಮೋಹನ್ ಕುಮಾರ ಪ್ರಗತ**

ಜೊತೆಗೆ ಜೋಡಿಸಲಾಗುವ ಸಂಕಥನದ ಅಸಲಿಯತ್ತುಗಳೇನೆ ಇದ್ದರೂ ಈ ಸಂಕಥನದ ಮೂಲಕವಾಗಿ, ಕನಕನನ್ನು ಹೊರಗೆ ನಿಲ್ಲಿಸಿ, ದೇಗುಲದ ಮೂರ್ತಿ ತಿರುಗಿದ ಕಥೆ ಕಟ್ಟಿ ಸಾಮಾನ್ಯರ ಸಮ್ಮತಿಯನ್ನು ಉತ್ಪಾದಿಸಿದ ಬಗೆ ಬೆರಗುಗೊಳಿಸುವಂತಹದ್ದು. ಈ ಕಿಂಡಿಯ ವೃತ್ತಾಂತ ಮತ್ತು ಮೂರ್ತಿಯ ಇರುವಿಕೆಗಳು ಕೆಳಸಮುದಾಯದ ಸಮ್ಮತಿಯ ಉತ್ಪಾದಕಗಳಾಗಿ ದುಡಿಯುವ ಜೊತೆಗೆ ಕನಕನನ್ನು ದ್ವೈತದಾರ್ಶನಿಕತೆಯ ವೈಷ್ಣವ ಪಂಥಕ್ಕೆ ಬಂಧಿಸಿಯೂ ಇಟ್ಟಿವೆ. ಕನಕನ ಉಡುಪಿಯ ಭೇಟಿ, ಆತನಿಗಾಗಿ ತಿರುಗಿದ ಮೂರ್ತಿ ಇವುಗಳನ್ನು ಕುರಿತ ಅಧಿಕೃತ ಚಾರಿತ್ರಿಕ ಸತ್ಯವನ್ನು ಕೆದಕಲಾರದಷ್ಟು ಪ್ರಮಾಣದಲ್ಲಿ, ಕನಕನಿಗೆ ಸಂಬಂಧಿಸಿದ ಕಿಂಡಿಯ ಕುರಿತಾದ ಸಂಕಥನವನ್ನು ಜನಮನದಲ್ಲಿ ನೆಲೆಗೊಳಿಸುವಲ್ಲಿ ಹಿತಾಸಕ್ತ ಗುಂಪು ಯಶಸ್ಸು ಪಡೆದಿದೆ. ಅದೇ ಹೊತ್ತಿಗೆ ಆತನ ಸಾಹಿತ್ಯ ಕೃತಿಗಳನ್ನು ಕುರಿತ ನಿರೂಪಣೆಗಳೂ ಆತನನ್ನು ವೈಷ್ಣವ ಪಾಂಥಿಕ ಬೇಲಿಯಲ್ಲಿಯೇ ಇರಿಸಿ, ಸಮಾಜದ ಕೆಳಸ್ತರದ ಒಪ್ಪಿಗೆಯನ್ನು ಉತ್ಪಾದಿಸುವ ಮಾಧ್ಯಮವಾಗಿ ಆತನನ್ನು ವೈಷ್ಣವ ಭಕ್ತಿಯ ಅಚ್ಚಿಗೆ ಒಗ್ಗಿಸಿಟ್ಟಿವೆ. ಹಾಗಾಗಿ ಕನಕನಂತಹ ಚಾರಿತ್ರಿಕ ವ್ಯಕ್ತಿತ್ವವನ್ನು ತಮ್ಮ ಅಸ್ಮಿತೆಯ ರೂಪಕವಾಗಿ ಬಳಸುವಾಗ ಈಗಾಗಲೇ ನಿರೂಪಿತವಾದ ಸಿದ್ಧ ನಿರೂಪಣೆಯನ್ನು ಮರುಪರಿಶೀಲನೆಗೆ ಒಡ್ಡಬೇಕಿದೆ. ಆವಾಹಿಸಿಕೊಳ್ಳುತ್ತಿರುವ ಸಮುದಾಯದ ಸಾಮಾಜಿಕ, ಪಾಂಥಿಕ ಇತಿಹಾಸಗಳ ಅರಿವಿನೊಂದಿಗೆ ಅಸ್ಮಿತೆಯಾಗುವ ವ್ಯಕ್ತಿತ್ವದ ತಾತ್ವಿಕತೆಯ ಹೊರಚಾಚುಗಳನ್ನು ಸರಿಯಾಗಿ ಗಮನಿಸಿಕೊಳ್ಳಬೇಕಾಗುತ್ತದೆ. ಹಾಗಾದಾಗ ಮಾತ್ರ, ''ಕನಕದಾಸರು ಮಾಧ್ವಯತಿ ವ್ಯಾಸರಾಯ ಸ್ವಾಮಿಗಳ ಸೇವೆಗೈದು ಅವರ ಕೃಪೆ ಪಡೆದು ಜ್ಞಾನಿಗಳಾದರು ಎಂಬ ಮಾತಾಗಲಿ, ಕನಕರ ದಾಸಸಿದ್ಧಿಗೆ ವ್ಯಾಸಕೃಪೆಯೇ ಕಾರಣವೆಂಬ ಸಂಗತಿಯಾಗಲಿ ಮಾಧ್ವ ಸಮುದಾಯದಲ್ಲಿ ಪ್ರಾಚುರ್ಯ ಪಡೆದ ದಂತಕಥೆಯಷ್ಟೆ. ಬ್ರಾಹ್ಮಣ ಜಗತ್ತಿಗೆಂದೇ ಸಂಸ್ಕೃತದಲ್ಲಿ ಸಮೃದ್ಧಪಂಥೀಯ ಸಾಹಿತ್ಯವನ್ನು ಸೃಷ್ಟಿಸಿ ಅದನ್ನೇ ಮೆದ್ದು, ಅದರದೇ ತೇಗು ಬಿಡುತ್ತಿರುವ ಮಾಧ್ವ ಸಂಪ್ರದಾಯದೊಂದಿಗೆ, ಉಡುಪಿಯ ಶ್ರೀಕೃಷ್ಣನೊಂದಿಗೂ ಕನಕರಂಥ ಉದಾರ ಪಂಥೀಯ ಕವಿಗಳಿಗೆ ಯಾವ ಸಂಬಂಧವಿರಲೂ ಸಾಧ್ಯವಿಲ್ಲ'' ಎಂಬ ಖಚಿತವಾದ ಅಭಿಪ್ರಾಯಗಳು ಹೊಮ್ಮಲು ಸಾಧ್ಯವಾಗುತ್ತದೆ. ಈ ಅಭಿಪ್ರಾಯಗಳು ಯಾಕೆ ಮುಖ್ಯವೆಂದರೆ ನಮ್ಮ ಸಾಂಸ್ಕೃತಿಕ ರೂಪಕದ ತಾತ್ವಿಕ ಸ್ವರೂಪವು ಅನ್ಯ ನಿರ್ದೇಶಿತವಾಗಬಾರದೆಂಬ ಎಚ್ಚರಕ್ಕಾಗಿ. ಹೇಗೆ ಶಂಕರರನ್ನೋ, ರಾಮಾನುಜರನ್ನೋ ತಮ್ಮ ಸಂಕೇತವಾಗಿಸಿಕೊಂಡವರು ಅನ್ಯತಾತ್ವಿಕತೆ ಮತ್ತು ಅನ್ಯತಾತ್ವಿಕರ ಅಂಕೆ/ಹಿಡಿತ ಉಂಟಾಗದಂತೆ ನೋಡಿಕೊಳ್ಳುತ್ತಾರೋ, ಅಂತಹ ಎಚ್ಚರವೊಂದು ಬಾಹ್ಯ ಮೂಲದಿಂದ ಸಿದ್ಧಗೊಂಡ ರೂಪವನ್ನು ಸ್ವೀಕರಿಸುವ ಮುನ್ನ ಸಮುದಾಯ ಹೊಂದಿರಬೇಕು. ಈ ಎಚ್ಚರವಿಲ್ಲದೆ ಈಗಾಗಲೇ ನಿರೂಪಿತವಾದ ಸಿದ್ಧರೂಪವನ್ನು ತಮ್ಮ ಅಸ್ಮಿತೆಯ ಸಂಕೇತವಾಗಿ, ಸಮಾಜೋ-ರಾಜಕೀಯ ಸಂಕೇತವಾಗಿ ಬಳಸುವಲ್ಲಿ, ಆ ಐಕಾನಿನ ತಾತ್ವಿಕ ಆಕೃತಿಯು ಸಮುದಾಯದ ತಾತ್ವಿಕ ಆಕೃತಿಯನ್ನು ಕಬಳಿಸಿಬಿಡುವ ಅಪಾಯವಿದೆ.

ಈ ತಾತ್ವಿಕತೆಯ ಪ್ರಶ್ನೆಯ ಜೊತೆಗೆ ಸಾಂಸ್ಕೃತಿಕ ಐಕಾನ್ ಒಂದನ್ನು ಬಳಸುವಲ್ಲಿ ಎದುರಾಗುವ ಸಾಮಾಜಿಕ ರಾಜಕೀಯ ವಾಸ್ತವದ ಸಮಸ್ಯೆಯ ಕುರಿತೂ ನಾವು ಎಚ್ಚರ ತಪ್ಪಬಾರದು. ಮುಖ್ಯವಾಗಿ ಕನಕ, ಅಂಬೇಡ್ಕರ್, ಗಾಂಧಿ ಇವೆಲ್ಲವೂ ಬಹುಮುಖ್ಯವಾಗಿ ಸಾಂಸ್ಕೃತಿಕ ಪ್ರತಿರೋಧದ ಮಾದರಿಗಳು. ಇಂತಹ ಸಾಂಸ್ಕೃತಿಕ ಪ್ರತಿರೋಧದ ಮಾದರಿಯೊಂದನ್ನು ಕೇವಲ ಸಾಮಾಜಿಕ ಪ್ರತಿನಿಧೀಕರಣದ ಮಾದರಿಯಾಗಿಸಿ, ತನ್ಮೂಲಕವಾದ ರಾಜಕೀಯ ಪ್ರತಿನಿಧೀಕರಣವನ್ನು ಸಾಧಿಸುವ ಮಟ್ಟದಲ್ಲಿ ಬಳಸಿಕೊಂಡಲ್ಲಿ, ಅದು ಕೇವಲ ಸಮುದಾಯವನ್ನು ಸಾಂತ್ವನಗೊಳಿಸುವ ಪ್ರಜಾಪ್ರಭುತ್ವ ಸಂದರ್ಭದ ಮತರಾಜಕಾರಣದ ವರಸೆಗಷ್ಟೇ ಅನುಕೂಲವಾಗುತ್ತದೆ. ಅಂದರೆ ಚುನಾವಣಾಧಾರಿತ ಮತರಾಜಕಾರಣದ ಚಲಾವಣೆಯ ನಾಣ್ಯವಾಗಿ ಆ ಮಾದರಿ ಬಳಕೆಗೊಂಡಂತಾಗುತ್ತದೆ. ಅದಲ್ಲದೆ ಕನಕ ಆತ್ಮ-ಜೀವಗಳೆಂಬ ಬಯಲನ್ನು ಎದುರಿಗಿಟ್ಟು ಇವುಗಳ ಜಾತಿ ಹೇಳಿ ಎಂದು, ''ಜಾತಿಪದ್ಧತಿಯನ್ನು ಪರಿಪೂರ್ಣಗೊಳಿಸಿ ಬಹುಸಂಖ್ಯಾತ ಜನಸ್ತೋಮವನ್ನು ಅವಮಾನಗೊಳಿಸಿದ'' ಹಿತಾಸಕ್ತ ಮಂದಿಯನ್ನು ಪ್ರಶ್ನಿಸಿದವನು. ಅಸಮಾನತೆಯೇ ಹೂರಣವಾದ ಜಾತಿವ್ಯವಸ್ಥೆಯ ವಿರೋಧಿಯನ್ನು ಜಾತಿಸಮಾಜವೊಂದಕ್ಕೆ ಸರಿಹೊಂದಿಸಿಕೊಂಡು, ಜಾತಿಗುರುತಲ್ಲಿ ಬಂಧಿಸುವಲ್ಲಿ ಬಹುಮುಖ್ಯವಾಗಿ ಎರಡು ಅಪಾಯಗಳಿವೆ. ಮೊದಲನೆಯದಾಗಿ, ಕನಕನಂತಹ ಸಾಂಸ್ಕೃತಿಕ ಪ್ರತಿರೋಧದ ದಟ್ಟ ಧ್ವನಿಯೊಂದನ್ನು ಸರ್ಕಾರಿ ಆಚರಣೆಯ ಸಾಂಕೇತಿಕ ಮಟ್ಟಕ್ಕೆ ಇಳಿಸಿದಂತಾಗುತ್ತದೆ. ಎರಡನೆಯದಾಗಿ, ದೊಡ್ಡ ಜನಸಮುದಾಯವೊಂದನ್ನು ಕನಕನ ಮೂಲಕ ಸಾಂತ್ವನಗೊಳಿಸಬಹುದಾದ 'ಅಪ್ರಜಾಸತ್ತಾತ್ಮಕ' ಒಳದಾರಿಯನ್ನು ಅಧಿಕಾರ ರಾಜಕಾರಣಕ್ಕೆ ಒದಗಿಸಿದಂತಾಗುತ್ತದೆ ಎಂಬುದನ್ನು ನಾವು ಗಮನಿಸಲೇಬೇಕಾಗುತ್ತದೆ. ಯಾಕೆಂದರೆ ಕನಕ ಹುಟ್ಟುಹಾಕಿದ್ದು ಸಾಂಸ್ಕೃತಿಕ ಪ್ರತಿರೋಧವನ್ನೇ ಹೊರತು ಆತನದು ಜಾತಿನಾಯಕನಾಗುವ ಯತ್ನವಲ್ಲ.

-೪-

ಕನಕ ಸಾಹಿತ್ಯದ ಮೌಲ್ಯೀಕರಣದ ಸಂದರ್ಭದಲ್ಲಿ ಆತನ ಕಾವ್ಯಗಳಿಗೆ ಸಿಗಬೇಕಾದ ಮಾನ್ಯತೆ ಅಗತ್ಯ ಪ್ರಮಾಣದಲ್ಲಿ ದಕ್ಕಿಲ್ಲವೆಂದೇ ಹೇಳಬೇಕು. ಆತನ ಕಾವ್ಯಗಳನ್ನು ಪುರಾಣದ ಅನುಬಂಧಗಳಾಗಿ ಗಮನಿಸುವ ಕ್ರಮವೊಂದಿದೆ. ಆದರೆ ಆತ ಪುರಾಣ ವಸ್ತುಗಳನ್ನೇನೋ ಬಳಸುತ್ತಾನೆ. ಆತನಲ್ಲಿ ಆ ಪುರಾಣ ವಸ್ತುಗಳು ಕೇವಲ ಅಸ್ಥಿಪಂಜರಗಳಷ್ಟೆ . ಆತ ಅದರೊಳಗೆ ತುಡಿಯುವುದು ತನ್ನ ಕಾಲದ ಜನ ಬದುಕಿನ ಇರುವಿಕೆ ಹಾಗೂ ಸಮಸ್ಯೆಯ ಸ್ವರೂಪವನ್ನು ಹೇಳಲು. ನಾನು ಕೇಳಿದ ಮಾಹಿತಿಯೊಂದರ ಮೇರೆಗೆ ದಾಂಪತ್ಯದ ಕಲಹಗಳಾದಾಗ 'ನಳಚರಿತೆ'ಯನ್ನು ಓದಿಸುವ ಪರಿಪಾಠ ಕೆಲವು ಹಳ್ಳಿಗಳ ಕಡೆ ಇದೆಯಂತೆ. ಇಂತಹ ರೂಢಿಗಳು ಪುರಾಣಕ್ಕಿಂತ ಬದುಕನ್ನು ದೊಡ್ಡದಾಗಿ ಕಾಣುವ ನೋಟ ಕ್ರಮದಿಂದ ಮಾತ್ರ ಸಾಧ್ಯವಾಗುವಂತಹದ್ದು. ಸೂಕ್ಷ್ಮವಾಗಿ ಗಮನಿಸಿದರೆ ನಳಚರಿತೆಯಲ್ಲಿರುವುದು ಭೋಗದ ನೆಲೆಯೂ, ಅತೃಪ್ತಿಯ ತಾಣವೂ ಆದ ಸ್ವರ್ಗದವರ ಕುಹಕಕ್ಕೆ ಸಿಕ್ಕಿ ಮೂರಾಬಟ್ಟೆಯಾದ ಬದುಕನ್ನು ಅನುಭವಿಸುವ ಗಂಡಹೆಂಡಿರು. ತಮ್ಮದಲ್ಲದ ತಪ್ಪಿಗೆ ಪಾಡುಪಡುವ ಈ ಜೋಡಿ ಮತ್ತೆ ಒಂದಾಗುವ ಮೂಲಕ ಸ್ವರ್ಗದವರ ವಿರುದ್ಧ ಜಯಗಳಿಸಿ ಲೋಕವನ್ನು ದೊಡ್ಡದೆನಿಸುತ್ತದೆ. ಹೀಗೆ ಆತ ಪುರಾಣವನ್ನು ಬಳಸುವುದು ಅದರ ಮರುವ್ಯಾಖ್ಯಾನಕ್ಕಾಗಿಯೇ ವಿನಾ ಪುರಾಣದ ಪ್ರಚಾರಕ್ಕಲ್ಲ. ಆತನ ಕೀರ್ತನೆಗಳಲ್ಲಿಯೂ ಪುರಾಣದ ಮರುವ್ಯಾಖ್ಯಾನದ ಈ ಗುಣವಿದೆ. ಅಂದರೆ ಆತನಿಗೆ ಪುರಾಣವಿರುವುದು ಮುರಿದು ಕಟ್ಟಲೆಂದಲ್ಲದೆ ಚಾಚೂತಪ್ಪದೆ ಅನುಸರಿಸುವ ಕುರುಡು ಅನುಸಂಧಾನಕ್ಕಲ್ಲ.

ಕನಕ ಗುರುತಿಸಿಕೊಂಡ ದಾಸಕೂಟ ಆತ ಪ್ರತಿನಿಧಿಸುವ ಬೆವರ ಬಳಗಕ್ಕೆ ಒಗ್ಗುವ ಮಾದರಿಯದಲ್ಲ. ಇನ್ನೊಂದು ರೀತಿಯಿಂದ ನೋಡುವುದಾದರೆ ಕನಕ ಸಮಾಜದ ಕೆಳಸ್ತರದ ಸಮ್ಮತಿಯನ್ನು ಉತ್ಪಾದಿಸುವ ಮಾಧ್ಯಮವಾಗಿ ವೈದಿಕ ಯಾಜಮಾನ್ಯದ ದಾಸಕೂಟಕ್ಕೆ ಒದಗಿಬಂದ ಸಂಪತ್ತಾಗಿದ್ದ. ಇಂತಹ ಕೂಟದೊಳಗೆ ಪ್ರವೇಶ ಪಡೆದ ಕನಕನಿಗೆ, ವೈದಿಕದ ಕೊಂಡಿ ಕಳಚಿಕೊಳ್ಳುವ ನಿರ್ಗಮನದ ಮೂಲಕ ವಚನಕಾರರು ಉಳಿಸಿಕೊಂಡಿದ್ದ ಸವಲತ್ತು ಕಳೆದುಹೋಗಿತ್ತು. ಆದರೆ ಕನಕನ ಜಾಗೃತಪ್ರಜ್ಞೆ ಕರ್ಮಠರ ನಡುವಿದ್ದೇ ಅವರ ಜಡತ್ವವನ್ನು ಕಟು ವಿವೇಚನೆಗೊಳಪಡಿಸಿ ಗುದ್ದು ಕೊಡುತ್ತದೆ. ಕನಕನಲ್ಲಿರುವ ವೈದಿಕ ವಿರೋಧವೂ ಅದೇ ವೈದಿಕದ ತೆಕ್ಕೆಯಲ್ಲಿದ್ದೇ ಸಂಭವಿಸಿದುದು. ಅವರ ನಡುವಿದ್ದೇ 'ಹೊಟ್ಟೆ ಗುಡುಮಗಳೆಲ್ಲ ಪರಮ ವೈಷ್ಣವರೇ ?' ಎಂದು ಪ್ರಶ್ನಿಸಿ ಮುಜುಗರಗೊಳಿಸುವಷ್ಟು ಸ್ವಾತಂತ್ರ್ಯವನ್ನು ಬದುಕಿನುದ್ದಕ್ಕೂ ಆತ ಕಳೆದುಕೊಂಡವ ನಾಗಿರಲಿಲ್ಲ. ಆತನಲ್ಲಿದ್ದುದು ಶಾಸ್ತ್ರವನ್ನು ಮೀರಿದ ಸಾಮಾಜಿಕತೆ. ಆತ ವೈದಿಕವನ್ನು ವಿರೋಧಿಸುವುದು ಅದನ್ನೊಂದು ಜಡತತ್ವವಾಗಿಯೇ. ಹಾಗಾಗಿ ಆತನ ವಿರೋಧಕ್ಕೆ ಒಂದು ನೈತಿಕ ನೆಲೆಗಟ್ಟಿದೆ. ಸೋಗಲಾಡಿತನವನ್ನು ವಿರೋಧಿಸುವ ಆತನಲ್ಲಿ ಸಮುದಾಯವನ್ನು ಕುರಿತ ಕುರುಡು ವಿರೋಧವಿದೆ ಎನ್ನಲಾಗದು. ಇಂತಹ ಕನಕನನ್ನು ವರ್ತಮಾನದ ನೆಲೆಯಲ್ಲಿ ವಿವರಿಸಿಕೊಳ್ಳುವಾಗ ಕೇವಲ ಜಡಸ್ವರೂಪಿಯಾದ ಬ್ರಾಹ್ಮಣ-ಶೂದ್ರ ಎಂಬ ವಿಂಗಡಣೆ ಉಪಯುಕ್ತವಲ್ಲ. ಅಲ್ಲಿ ಬೆವರು ಅನ್ನುವುದು ಬಹಳ ಮುಖ್ಯವಾದ ಸಂಗತಿಯಾಗಬೇಕು. ಆತನ 'ರಾಮಧಾನ್ಯಚರಿತೆ'ಯನ್ನು ವಿವರಿಸಿಕೊಳ್ಳುವಲ್ಲಿ ನಮಗೆ ಈ ಎಚ್ಚರ ಇರಬೇಕು. ಯಾಕೆಂದರೆ ನಾವು ಬದುಕುತ್ತಿರುವ ಈ ವರ್ತಮಾನ ಶೂದ್ರ ವರ್ಗದಲ್ಲಿಯೇ ಒಳಶ್ರೇಣೀಕರಣ - ಒಳಸಂಘರ್ಷ - ಒಳಅಸಹನೆಗಳನ್ನು ಬೆಳೆಸಿದ ಅಸಹನೆಗಳ ಸಂಕೀರ್ಣ ಸಂದರ್ಭ. ಕನಕನ ರಾಮಧಾನ್ಯ ಚರಿತೆಯಲ್ಲಿರುವುದು ಕೇವಲ ಬ್ರಾಹ್ಮಣ-ಶೂದ್ರ ಸಂಘರ್ಷವಲ್ಲ. ಅಲ್ಲಿ ಶೂದ್ರತ್ವದ ಜೊತೆಗೆ ಬೆವರೂ ಸೇರಿಕೊಂಡು, ದುಡಿದು ಬದುಕುವವರು ತಿನ್ನುವ ಅನ್ನವೆಂಬ ನೈತಿಕ ಆಯಾಮವೂ ಇದೆ ಎಂಬುದನ್ನು ಮರೆಯಲಾಗದು.

ಆದರೆ ಕನಕನ 'ಕಥಾವಸ್ತು' ಮತ್ತು 'ದಾಸಕೂಟ'ಗಳು ಆತನನ್ನು ಅನೇಕ ಬಾರಿ ಸವರ್ಣೀಯ

# ಕೋಳಿ ಸಂಸಾರ-ಸಾರ



ಊರಿದ್ದಲ್ಲಿ ಓಣಿ
ಓಣಿಯಲ್ಲಿ ಕೋಳಿ
ಕದ್ದು ತಿನ್ನುವ ಮ್ಯಾಲಿನವರಿಗೆ
ಜವಾರಿ ತತ್ತಿ ಸಾರ
ಅಜ್ಜಿ- ಅವ್ವನ ಗೂಡುಗಳಲ್ಲಿ
ತಾಯಿ ಕೋಳಿಯ ಸಂಸಾರ
ಪ್ರೀತಿ ಭರಪೂರ

ಅಂದು
ಕಾವು ಕೊಡುವ ತಾಯಿ
ಹೊಟ್ಟೆಯೊಳಗೆ ಮರಿಗಳು
ತಿಪ್ಪೆ ಕೆದಕಿದರೆ
ಕಾಡಿ ತಿನ್ನುವ ಬಳಗ;
ಹದ್ದಿನ ನೆರಳು
ಹಾವಿನ ಸದ್ದಿಗೆ
ರೆಕ್ಕೆಪುಕ್ಕಗಳ ಹರಕು ಗುಡಿಸಲಿನ ಕೋಟೆ.

ಓಣಿ ದಾಟಿದರೂ
ಸೀಮೆ ಇರಲಿಲ್ಲ
ಕೂಡಿ ಆಡುವ ದರಕಾರ;
ಕೇಕೆ ಹಾಕುವ ಹುಂಜನ
ಹಂಗು ಬೇಕಾಗಿಲ್ಲ.

ಈಗ ನಮ್ಮಜ್ಜಿ ಇಲ್ಲ
ಅವ್ವನಿಗೂ ಶಕ್ತಿಯಿಲ್ಲ
ಗೂಡುಗಳ ಗುರುತೂ ಇಲ್ಲ
ಕೋಳಿ ಸಂಸಾರ ವಿರಳ.
ಹಾಗಂತ ಕೋಳಿಗಳಿಗೆ ಬರ
ಎಂದು ಭಾವಿಸಬೇಕಾಗಿಲ್ಲ:
ದಿನಕ್ಕೆ ಎರಡು ತತ್ತಿ ಇಡುವ
ಕಾವು ಕೊಡದೆ ಮರಿಯಾಗುವ
ತಿಪ್ಪೆ ಕೆದಕುವ ತಾಪತ್ರಯವೇ ಇಲ್ಲ
ಅಲ್ಲೇ ಉಚ್ಚೆ ಅಲ್ಲೇ ಎಲ್ಲ
ಅಲ್ಲಿಯೇ ತಿನ್ನುವ
ಫಾರ್ಮ್‌ಹೌಸ ಕೋಳಿಗಳದೇ ದರಬಾರ

ಆದರೆ,
ಕೋಳಿ ಯಾವುದಾದರೂ
ಉದ್ದಕ್ಕೂ ಸಾರ ಭರಪೂರ !

**ಡಾ|| ಕೆ. ಎನ್. ದೊಡ್ಡಮನಿ**
ನಂ. ೧೧೧, ಯಶವಂತ ಅಪಾರ್ಟ್‌ಮೆಂಟ್, ಸರ್ವೋದಯ ಮಾರ್ಗ
ಹಿಂದವಾಡಿ, ಬೆಳಗಾವಿ - ೫೯೦ ೦೧೧

ಸಂವೇದನೆಯ ಕವಿಯಾಗಿಯೇ ನಿಲ್ಲಿಸಿಬಿಡುತ್ತವೆ. ಆತ ಒಪ್ಪಿಕೊಳ್ಳುವ ಪುರಾಣ, ಕೀರ್ತಿಸುವ ಕೇಶವ/ಕೃಷ್ಣ ಇವೆಲ್ಲವೂ ಮತ್ತೆ ಮತ್ತೆ ಬಹುದೊಡ್ಡ ಸಮುದಾಯವನ್ನು ಕರ್ಮ ಸಿದ್ಧಾಂತದಲ್ಲಿ ಬಂಧಿಸಿಡಲು ವೈದಿಕರಿಗೆ ಒದಗಿಬಂದ ಮೂಲಗಳೇ ಆಗಿವೆ. ವಾಸ್ತವಿಕವಾಗಿ ''ವೈದಿಕ ಚೌಕಟ್ಟಿನಲ್ಲಿ ಬರೆಯುವುದು ಎಂದರೇನೇ ಸಂಪ್ರದಾಯ ಶರಣರಾಗುವುದು ಎಂಬ ಪರಿಸ್ಥಿತಿ''ಯ ಇಕ್ಕಟ್ಟು ಕನಕನಿಗಿದೆ. ಕನಕ ಈ ನಡುವೆಯೂ ಭಾಗವತ ಪ್ರಚಾರಕನಿಗಿಂತ, ಅದರೊಳಗಿನ ವಿಮರ್ಶಕನಾಗಿಯೂ ಮೈ ಪಡೆದುಕೊಳ್ಳುತ್ತಾನೆ. ಕೀರ್ತನೆಗಿಂತಲೂ ಅಧಿಕವಾಗಿ ಈ ತೀಕ್ಷ್ಣತೆ ವ್ಯಕ್ತವಾಗುವುದು ಆತನ ಕಾವ್ಯಗಳಲ್ಲಿ. 'ಹರಿಭಕ್ತಿಸಾರ'ದಂತಹ ಸ್ತುತಿಕಾವ್ಯವೂ ಈ ದಿಸೆಯಲ್ಲಿ ತನ್ನ ಎಚ್ಚರದ ಕೂಗನ್ನು ಅಲ್ಲಲ್ಲಿ ಮೊಳಗಿಸುತ್ತದೆ. 'ನಳಚರಿತೆ'ಯಂತೂ ಸೂಕ್ಷ್ಮವಾಗಿ ಬೇರೆ ಬೇರೆ ಸಾಮಾಜಿಕ ಸ್ತರದ ಬಹುಚರಿತೆಯನ್ನೇ ಧ್ವನಿಸಿಬಿಡುವ ಮೂಲಕ ನಾಡಿನ ಸಾಂಸ್ಕೃತಿಕ ಚರಿತ್ರೆಯಾಗಿಯೇ ಮೈದಳೆಯುತ್ತದೆ. 'ಮೋಹನತರಂಗಿಣಿ'ಯಂತಹ ಕೃತಿ ಸಮಕಾಲೀನ ಇತಿಹಾಸದ ಅನೇಕ ಸಂಗತಿಗಳಿಗೆ ಮುಖವಾಣಿಯಾಗುತ್ತದೆ. ಆದರೆ ಅದೇ ಸಂದರ್ಭದಲ್ಲಿ ಕನಕನ ಸಾಹಿತ್ಯದಲ್ಲಿನ ಚಾರಿತ್ರಿಕತೆಯಲ್ಲಿ ಸಮುದಾಯ ದ್ವೇಷವನ್ನು ಉದ್ದೀಪಿಸುವ ಕಿಲುಬಿಲ್ಲ ಎನ್ನುವುದನ್ನು ಗಮನಿಸಬೇಕು. ಯಾಕೆಂದರೆ ಕನಕನ ಕಾವ್ಯದಲ್ಲಿರುವ ಚರಿತ್ರೆಯ ಎಳೆಗಳಲ್ಲಿ ಅಂಚಿನ/ಪರಿಧಿಯ ಧ್ವನಿಗಳಿವೆ. ಅಲ್ಲಿ ರಾಜಚರಿತೆಯ ಸೋಗಿನೊಳಗೆ ದಲಿತ, ಮಹಿಳಾ, ದಮನಿತ ಚರಿತೆಯ ಎಳೆಗಳನ್ನು ಬಚ್ಚಿಡುವ ಕುಸುರಿಯಿದೆ. ಬದಲಾಗಿ ದ್ವೇಷವನ್ನೇ ದೇಶಪ್ರೇಮವೆಂಬಂತೆ ಬಿಕರಿ ಮಾಡಲು ನಿಂತಿರುವ ಸಾಂಸ್ಕೃತಿಕ ರಾಷ್ಟ್ರೀಯವಾದದ ಅಸಹನೆಯ ರಾಜಕಾರಣಕ್ಕೆ ಒದಗಿಬರುವ ಸರಕು ಅಲ್ಲಿಲ್ಲ, ಹಾಗಾಗಿ ಕನಕನ ಕೃತಿಗಳನ್ನಿರಿಸಿಕೊಂಡು ಮಧ್ಯಯುಗೀನ ಇಸ್ಲಾಂ ದಾಳಿಯ ಕಥೆಯನ್ನು ಬೆಳೆಸಲಾಗದು.

-೫-

ಮಾತು ಮುಗಿಸುವ ಮುನ್ನ ನಾನು ಪ್ರಸ್ತಾಪಿಸಲೇ ಬೇಕಾದ ಸಂಗತಿ ಕನಕನ ಕೃತಿಗಳ ಅಪಹರಣದ ಕುರಿತಾದ ಹುಯ್ಯಲಿನದು. ಕನಕನ ಕೃತಿಗಳ ಪ್ರಕ್ಷಿಪ್ತದ ಬಗೆಗಿನ ತಕರಾರುಗಳದು. ಇಲ್ಲಿ ನನಗಿರುವ ಪ್ರಶ್ನೆ ಕನಕನ ಕೃತಿಗಳಷ್ಟೇ ಅಪಹರಣವಾಗಿರುವುದೆ ? ಕನಕನ ಕೃತಿಗಳಿಗಿಂತ ಅಧಿಕವಾಗಿ ಆತನ ಬಗೆಗಿನ ಪ್ರಕ್ಷಿಪ್ತಗಳೇ ನಮಗೆ ಮುಖ್ಯವಲ್ಲವೇ ? ಕನಕನನ್ನು ಭಕ್ತಕವಿಯಾಗಿಯೇ ನಿಲ್ಲಿಸಿ ಅದರಾಚೆಗಿನ ಅವನ ಕಾವ್ಯಸತ್ವವನ್ನು ಅನುಬಂಧವಾಗಿ ಮಾತ್ರ ಬಳಸಿಕೊಂಡು ಬಂದ ಕುರಿತು ನಮಗೆ ನಿಜಕ್ಕೂ ಅಸಮಾಧಾನ ಇರಬೇಕಲ್ಲವೇ ? ಅವನ ಕೃತಿಗಳ ಅಪಹರಣದ ಬಗೆಗೆ ಮಾತನಾಡುವ ವೇಳೆ ಕನಕನು ಆರಾಧಿಸಿದ ವಿಠಲ-ಬೀರಪ್ಪನ ಕತೆ ಏನಾಗಿರಬಹುದು ? ಯಾಕೆ ನಮಗೆ ಕೃತಿಗಳ ಅಪಹರಣವಷ್ಟೇ ಮುಖ್ಯವಾಗಬೇಕು ? ನಾವು ಕಳೆದುಕೊಂಡ ದೈವಗಳು ನಮಗೆ ಯಾಕೆ ಮುಖ್ಯವಾಗುತ್ತಿಲ್ಲ? ಕನಕ ಸೇರಿದ ಸಮುದಾಯವನ್ನೂ ಒಳಗೊಂಡು ತಳಮೂಲದ ಸಮುದಾಯಗಳ ದೈವಗಳನ್ನು ಅಪಹರಿಸಿರುವ ಚರಿತ್ರೆಯ ನಿಡುಗಥೆಯೇ ಈ ನಾಡಿಗಿದೆ. ಹಾಗಾಗಿಯೇ ನಮಗೆ ನಮ್ಮದಲ್ಲದ ನೆಲೆಗಳು ಮುಖ್ಯವಾಗಿ ನಾವು ಅಲ್ಲಿನ ಹುಂಡಿ ತುಂಬಿಸುತ್ತಾ, ಕೃತಿಚೌರ್ಯದ ಮಾತಾಡುತ್ತಿದ್ದೇವೆ ಅನಿಸುತ್ತಿದೆ. ಹಾಗೆಯೇ ಇನ್ನೊಂದು ಸಂಗತಿ ಕರ್ನಾಟಕ ಸಂಗೀತದ ವಾಗ್ಗೇಯಕಾರರಲ್ಲಿ ಕನಕನನ್ನು ಎಲ್ಲಿಡಲಾಗಿದೆ ಎಂಬುದು. ಅಲ್ಲಿಯೂ ಕನಕನ ಬಗೆಗಿನ ನಿಲುವು ಉದಾರವಾದುದೇ ಅಂದರೆ ಹಾಗೆನಿಸುವುದಿಲ್ಲ, ಕರ್ನಾಟಕ ಸಂಗೀತದ ವಾಗ್ಗೇಯಕಾರರಲ್ಲಿ ಕನಕನ ಹೆಸರೇನಾದರೂ ಸೇರಿಕೊಂಡಿದ್ದರೆ, ಅದಕ್ಕೆ ಆತನ ವೈಷ್ಣವಭಕ್ತಿಯೇ ಮಾನದಂಡವಾಗಿರಲೂಬಹುದು. ಯಾಕೆಂದರೆ ಈ ವಾಗ್ಗೇಯಕಾರರ ಯಾದಿಯಿಂದ ವೈಷ್ಣವೇತರರನ್ನು ಹೇಗೆ ಹೊರಗಿಡಲಾಗಿದೆ ಎಂಬುದನ್ನು ಗಮನಿಸಿದರೆ ಇದು ಸ್ಪಷ್ಟವಾದೀತು. ಇಂತಹ ವಾಸ್ತವಗಳ ನಡುವೆಯೂ ವ್ಯಾಸರಾಯರು ಕನಕನಿಗೆ ಮೊದಲ ತೀರ್ಥ ಕೊಡುತ್ತಿದ್ದರು ಎನ್ನುವ ಕಥೆ ಹೇಳಿಕೊಂಡೇ ಬದುಕುತ್ತಿದ್ದೇವೆ. ಇದರ ಬದಲಿಗೆ ದಾಸ ಕನಕನನ್ನು ಭೇದಿಸಿ ಬರಿಯ ಅಸಲು ಕನಕನನ್ನು ಹುಡುಕಿಕೊಳ್ಳುವ ನಮಗೆ, ಅವರ ತೀರ್ಥಕ್ಕಿಂತ ನಮ್ಮ ಪ್ರತಿನಿಧಿಯಾದ ಕನಕನನ್ನು, ಸಾಂಸ್ಕೃತಿಕ ಪ್ರತಿರೋಧದ ಮಾದರಿಯಾದ ಕನಕನನ್ನು ಎಲ್ಲಿರಿಸಲಾಗಿದೆ ? ಹೇಗೆ ಇರಿಸಿದ್ದಾರೆ ? ಯಾಕೆ ಮತ್ತೆ ಮತ್ತೆ ನಾವು ಕಿಂಡಿಯ ಹೊರಗಿರಿಸಲಾದ ಕನಕನನ್ನು ನೋಡಿ ಹುಂಡಿ ತುಂಬಿಸಿ ಬರಬೇಕು ? ಎಂಬ ಪ್ರಶ್ನೆಗಳು ಮುಖ್ಯವಾಗುತ್ತವೆ. ಇಲ್ಲವಾದರೆ ಚರಿತ್ರೆಯನ್ನು ಮರೆತು ಸಮುದಾಯವನ್ನು ದಿಕ್ಕು ತಪ್ಪಿಸಲು ನಾವೂ ಕೈಜೋಡಿಸುತ್ತೇವೆ ಎಂದಷ್ಟೇ ಹೇಳಬಹುದು.

*(ಇದು ದಿನಾಂಕ ೧೮-೧-೨೦೧೩ರಂದು ಮಂಗಳೂರಿನ ಕೊಂಕಣಿ ಅಕಾಡೆಮಿಯ ಸಹಯೋಗದೊಂದಿಗೆ ರಾಷ್ಟ್ರೀಯ ಸಂತಕವಿ ಕನಕದಾಸ ಸಂಶೋಧನಾ ಕೇಂದ್ರವು ಆಯೋಜಿಸಿದ ''ಕನಕ : ವರ್ತಮಾನದ ನಿರೂಪಣೆಗಳು'' ಕುರಿತ ಗೋಷ್ಠಿಯಲ್ಲಿ ಮಾಡಿದ ಭಾಷಣದ ಲೇಖನ ರೂಪ)*

**ಜಯಪ್ರಕಾಶ್ ಶೆಟ್ಟಿ ಎಚ್.**
ಸಹಪ್ರಾಧ್ಯಾಪಕ, 'ತೆನೆ', ಸರ್ವಪ್ರಕಾಶನಗರ, ಅಂಕದಕಟ್ಟೆ
ಕೋಟೇಶ್ವರ, ಕುಂದಾಪುರ

**ಡಾ|| ರಾಜೇಂದ್ರ ಬುರಡಿಕಟ್ಟಿ**




# ಕದನಶೀಲ ದೇಶಭಕ್ತಿಯ ಸಮರ್ಥ ದಾಖಲೀಕರಣ




ಲೇಖಕರು : **ಸುರೇಶ ಭಟ್ ಬಾಕ್ರಬೈಲು**
ಪ್ರಕಾಶಕರು : **ಲಂಕೇಶ ಪ್ರಕಾಶನ**
ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ
ಬಸವನಗುಡಿ, ಬೆಂಗಳೂರು - ೫೬೦ ೦೦೪
ಪುಟಗಳು : ೧೬೭ ಬೆಲೆ : ರೂ. ೧೦೦.೦೦

**'ಭ**ಯೋತ್ಪಾದನೆ' – ಈ ಪದ ಕೇಳಿದರೇನೇ ಇವತ್ತು ಭಾರತ ಮಾತ್ರವಲ್ಲ ಇಡೀ ಜಗತ್ತು ಬೆಚ್ಚಿಬೀಳುತ್ತದೆ. ಈ ಮಟ್ಟದ ಆತಂಕವನ್ನು ಸೃಷ್ಟಿಸಿರುವ ಈ ಭಯೋತ್ಪಾದನೆಗೆ ಒಂದು ದೀರ್ಘಕಾಲದ ಇತಿಹಾಸವಿದೆಯಾದರೂ ಅದು ವಿಶ್ವವ್ಯಾಪಿಯಾಗಿ ಪರಿಚಯವಾದದ್ದು ೨೦೦೧ರ ಸೆಪ್ಟೆಂಬರ್ ೧೧ರಂದು ಅಮೇರಿಕ ದೇಶದ ನ್ಯೂಯಾರ್ಕ್‌ನ ಪ್ರತಿಷ್ಠೆಯ ಸಂಕೇತದಂತಿದ್ದ ಅಲ್ಲಿನ ಅವಳಿ ಗೋಪುರಗಳು ನೆಲಕ್ಕುರುಳಿದಾಗಲೇ. ಬಿನ್ ಲಾಡೆನ್ ನೇತೃತ್ವದ ಆಲ್‌ಖೈದಾ ಸಂಘಟನೆಯ ಈ ದಾಳಿ ಭಯೋತ್ಪಾದನೆಯ ಒಂದು ಉಗ್ರರೂಪವನ್ನು ಜಗತ್ತಿಗೆ ಪರಿಚಯಿಸಿತು. ತನಗಾಗುವ ಸನ್ಮಾನ ಇಡೀ ಜಗತ್ತಿಗೆ ಆಗುವ ಸನ್ಮಾನ ಮತ್ತು ತನಗಾಗುವ ಅವಮಾನ ಇಡೀ ಜಗತ್ತಿಗಾಗುವ ಅವಮಾನ ಎಂದು ಜಗತ್ತು ಭಾವಿಸಬೇಕು ಎಂದು ಯಾವಾಗಲೂ ಬಯಸುವ ಅಮೇರಿಕ ತನ್ನ ಪ್ರತಿಷ್ಠೆಗೆ ತೀವ್ರತರಹದ ಧಕ್ಕೆಯನ್ನುಂಟುಮಾಡಿದ ಈ ಪ್ರಕರಣದಲ್ಲೂ ಅದು ಇಡೀ ಜಗತ್ತಿನ ಪ್ರತಿಷ್ಠೆಗೆ ಆದ ಧಕ್ಕೆ ಎಂದು ಜಗತ್ತು ಭಾವಿಸುವಂತೆ ಮಾಡುವಲ್ಲಿ ಗೆದ್ದಿತು. ಒಂದು ವೇಳೆ ಬಿನ್ ಲಾಡೆನ್‌ನ ದಾಳಿ ಅಮೇರಿಕ ಹೊರತು ಭಾರತವೋ ಅಥವಾ ಇನ್ಯಾವುದೋ ತೃತೀಯ ಜಗತ್ತಿನ ರಾಷ್ಟ್ರಗಳ ಮೇಲೆ ನಡೆದಿದ್ದರೆ ಆಗಲೂ ಜಗತ್ತು ಹೀಗೆ ಭಾವಿಸಲು ಸಾಧ್ಯವಾಗುತ್ತಿತ್ತೇ ಎಂಬುದು ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ. ಇದು ಏನೇ ಇರಲಿ, ಈ ಘಟನೆಯಿಂದಾಗಿ ಭಯೋತ್ಪಾದನೆ ಎಂಬುದು ಆಧುನಿಕ ಜಗತ್ತಿನ ಒಂದು ದೊಡ್ಡ ಸವಾಲಾಗಿ ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಚರ್ಚೆಯಾಗತೊಡಗಿತು. ಇಡೀ ಭೂಮಿಯಿಂದಲೇ ಅದನ್ನು ಹೊರದಬ್ಬಬೇಕೆಂದು ಎಲ್ಲ ಮುಖ್ಯರಾಷ್ಟ್ರಗಳೂ ಕಂಕಣಬದ್ಧರಾಗಿ ಹೋರಾಡತೊಡಗಿದವು. ಆದರೆ ಅಮೇರಿಕ ನೇತೃತ್ವದ ಭಯೋತ್ಪಾದನಾ ವಿರುದ್ಧದ ಈ ಜಾಗತಿಕ ಹೋರಾಟ ಉಂಟುಮಾಡಿದ ಒಂದು ದೊಡ್ಡ ಮತ್ತು ಅಷ್ಟೇ ಕೆಟ್ಟ ಪರಿಣಾಮವನ್ನು ಕೂಡ ನಾವು ಅಲಕ್ಷಿಸಲಾಗದು. ಅದೆಂದರೆ, ಇಡೀ ಪ್ರಪಂಚದಾದ್ಯಂತ ಒಂದು ಜನಸಮುದಾಯವನ್ನು 'ಭಯೋತ್ಪಾದಕ ಜನಸಮುದಾಯ'ವೆಂದು ಜನ ಭಾವಿಸುವಂತೆ ಮಾಡಿದ್ದು ಮತ್ತು ಆ ಜನಸಮುದಾಯವಲ್ಲದೆ ಬೇರೆ ಯಾವ ಜನಸಮುದಾಯವೂ ಭಯೋತ್ಪಾದನೆಯನ್ನು ಮಾಡಲಾರದು ಎಂದು ಭಾವಿಸುವಂತಾದದ್ದು.

ಈ ಜಾಗತಿಕ ವಿದ್ಯಮಾನದ ಪರಿಣಾಮ ಭಾರತದ ಮೇಲೆ ತನ್ನದೇ ಆದ ರೀತಿಯ ಪ್ರಭಾವ ಬೀರಿದೆ. ಅಮೇರಿಕದ ಅವಳಿ ಗೋಪುರಗಳು ಉರುಳುವ ಒಂಬತ್ತು ವರ್ಷಗಳ ಮೊದಲೇ ಭಾರತದಲ್ಲಿ ನಡೆದ ಬಾಬ್ರಿಮಸೀದಿ ಧ್ವಂಸ ಪ್ರಕರಣದ ನಂತರ ಈ ದೇಶದ ಒಂದು ಮುಖ್ಯ ಅಲ್ಪಸಂಖ್ಯಾತ ಜನಸಮುದಾಯವನ್ನು 'ಭಯೋತ್ಪಾದಕ ಜನಸಮುದಾಯ'ವೆಂದೂ, ಇನ್ನೊಂದು ಮುಖ್ಯ ಅಲ್ಪಸಂಖ್ಯಾತ ಸಮುದಾಯವನ್ನು 'ಮತಾಂತರ ಮಾಡುವ ಜನಸಮುದಾಯ'ವೆಂದೂ ಗುರುತಿಸುವ ಪರಿಪಾಠ ಬೆಳೆಯಿತು. ದೇಶದ ಸ್ವತಂತ್ರ ಹೋರಾಟದಲ್ಲಿ ಇಲ್ಲಿನ ಹಿಂದುಗಳಷ್ಟೇ ಮುಸ್ಲಿಮರೂ ಜೀವದ ಹಂಗು ತೊರೆದು

ಒಂದೆರಡು ವರ್ಷಗಳ ಹಿಂದೆ 'ಕೇಸರಿ ಭಯೋತ್ಪಾದನೆ' ಎಂಬ ಪದಬಳಕೆಯನ್ನು ಕೇಂದ್ರ ಸಚಿವ ಪಿ. ಚಿದಂಬರಂ ಮಾಡಿದಾಗ ಅದನ್ನು ತಮಗಾದ ದೊಡ್ಡ ಅವಮಾನ ಎಂದು ಭಾವಿಸಿ ವಿರೋಧ ವ್ಯಕ್ತಪಡಿಸಿದ್ದ ಹಿಂದೂಪರ ಸಂಘಟನೆಗಳು ನಂತರದ ದಿನಗಳಲ್ಲಿ ಅದನ್ನು ಗಟ್ಟಿದನಿಯಲ್ಲಿ ವಿರೋಧಿಸುವ ನೈತಿಕತೆಯನ್ನು ಕಳೆದುಕೊಂಡದ್ದನ್ನು ಇಡೀ ರಾಷ್ಟ್ರವೇ ಕಂಡಿತು. ಹೀಗೆ ಈ ಬಗೆಯ 'ಕೇಸರಿ ಭಯೋತ್ಪಾದನೆ'ಯನ್ನು ಇಡೀ ರಾಷ್ಟ್ರಕ್ಕೆ ಕಾಣುವಂತೆ ಅದನ್ನು ಮೊಟ್ಟ ಮೊದಲಿಗೆ ಬಯಲಿಗೆಳೆದ ಧೀಮಂತ ಪೊಲೀಸ್ ಅಧಿಕಾರಿ ಹೇಮಂತ್ ಕರ್ಕರೆ ಅವರಿಗೆ ಅರ್ಪಿತವಾಗಿರುವ ಈ ಕೃತಿ ಭಯೋತ್ಪಾದನೆ ಬಗ್ಗೆ ಹೊಸ ಲೋಕವೊಂದನ್ನು ತೆರೆದಿಡುವ ಮೂಲಕ ಈ ಬಗ್ಗೆ ನಮಗಿರುವ ಸಂಕುಚಿತ ಮನೋಭಾವನೆಯನ್ನು ಖಂಡಿತಾ ಒಡಿಸುತ್ತದೆ. ಒಟ್ಟಿನಲ್ಲಿ ಭಾರತದಲ್ಲಿ ಮಾತ್ರವಲ್ಲ, ಇಡೀ ಪ್ರಪಂಚದಲ್ಲಿಯೇ ಅದು ಕೇಸರಿಯೋ ಹಸಿರೋ ಯಾವುದೇ ಬಗೆಯ ಭಯೋತ್ಪಾದನೆ ಇರಬಾರದು; ಎಲ್ಲರೂ ನೆಮ್ಮದಿಯಿಂದ ಬದುಕುವ ಭಯಮುಕ್ತ ವಿಶ್ವವೊಂದು ನಿರ್ಮಾಣವಾಗಬೇಕು ಎಂದು ಬಯಸುವ ಎಲ್ಲರೂ ಒಮ್ಮೆಯಾದರೂ ಓದಲೇಬೇಕಾದ ಪುಸ್ತಕವಿದು. ಇಂತಹ ಕೃತಿಗಳು ಈಗಾಗಲೇ ಇಂಗ್ಲಿಷ್‌ನಲ್ಲಿ ಸಾಕಷ್ಟು ಬಂದಿದ್ದರೂ ಕನ್ನಡದ ಓದುಗರಿಗೆ ಇದೊಂದು ಹೊಸ ಅನುಭವವಾಗಿದ್ದು, ಇದನ್ನು ಆಗುಮಾಡಿದ ಲೇಖಕರು ಮತ್ತು ಲಂಕೇಶ ಪ್ರಕಾಶನ ಇಬ್ಬರೂ ಕನ್ನಡಿಗರ ಅಭಿನಂದನೆಗೆ ಅರ್ಹರು.

ಹೋರಾಡಿದ್ದು ನಿಜವಿದ್ದರೂ, ರಾಷ್ಟ್ರದ ಪರಮೋಚ್ಚ ಕಾನೂನಾದ ಸಂವಿಧಾನ ಈ ದೇಶದ ಹಿಂದುಗಳು, ಮುಸ್ಲಿಮರು ಮತ್ತು ಕ್ರೈಸ್ತರು ಸೇರಿದಂತೆ ಎಲ್ಲ ಜನಸಮುದಾಯಗಳಿಗೂ ರಾಷ್ಟ್ರೀಯ ಜೀವನದಲ್ಲಿ ಸಮಾನ ಹಕ್ಕುಬಾಧ್ಯತೆಗಳನ್ನು ನೀಡಿದಾಗ್ಯೂ ಎರಡು ಸಮುದಾಯಗಳನ್ನು ಮಾತ್ರ ಹೀಗೆ ಖಳನಾಯಕ ಸ್ಥಾನಕ್ಕೆ ದಬ್ಬುವ ಹುನ್ನಾರ ವ್ಯವಸ್ಥಿತವಾಗಿ ನಡೆಯಿತು.

ವಾಸ್ತವವಾಗಿ ಭಯೋತ್ಪಾದಕರು, ಕಳ್ಳರು, ವಂಚಕರು, ದೇಶದ್ರೋಹಿಗಳು ಯಾವುದೋ ಒಂದು ನಿರ್ದಿಷ್ಟ ಜಾತಿ-ಜನಾಂಗ ಅಥವಾ ಧರ್ಮಕ್ಕೆ ಸೇರಿದವರಾಗಿರಲು ಸಾಧ್ಯವಿಲ್ಲವಾದರೂ ಹೀಗೆ ಭಯೋತ್ಪಾದನೆಯನ್ನು ಒಂದು ಜನಸಮುದಾಯದ ತಲೆಗೆ ಕಟ್ಟಲಾಯಿತು. ಅಮೇರಿಕದ ಘಟನೆಯ ನಂತರ ಇಡೀ ದೇಶದಲ್ಲಿ ಎಲ್ಲಿಯಾದರೂ ಒಂದು ಬಾಂಬು ಸಿಡಿದರೆ ಅದರ ಹಿಂದೆ ಯಾವನೋ ಅಥವಾ ಯಾವುದೋ ಒಬ್ಬ ಮುಸ್ಲಿಂ ವ್ಯಕ್ತಿ ಅಥವಾ ಸಂಘಟನೆ ಇರುತ್ತಾನೆ/ಇರುತ್ತದೆ ಎಂದು ಭಾವಿಸುವಂತಹ ಸ್ಥಿತಿಯನ್ನು ನಿರ್ಮಾಣ ಮಾಡಲಾಯಿತು. ಇದು ಯಾವ ಮಟ್ಟಕ್ಕೆ ಹೋಯಿತೆಂದರೆ ಎಲ್ಲಿಯಾದರೂ ಒಂದು ಬಾಂಬು ಸಿಡಿದರೆ, ಭಯೋತ್ಪಾದನಾ ಚಟುವಟಿಕೆ ನಡೆದರೆ ಅದರ ಜವಾಬ್ದಾರಿಯನ್ನು ಯಾವ ಮುಸ್ಲಿಂ ಸಂಘಟನೆ ವಹಿಸಿಕೊಳ್ಳಬಹುದೆಂದು ನಮ್ಮ ಮಾಧ್ಯಮಗಳು ಕಣ್ಣು-ಬಾಯಿ ಬಿಟ್ಟು ಕಾತುರದಿಂದ ಕಾಯುವಂತಹ ಸ್ಥಿತಿ ನಿರ್ಮಾಣವಾಯಿತು. ಅಷ್ಟೇ ಅಲ್ಲ ಪೊಲೀಸರು ಮುಸ್ಲಿಂ ಸಂಘಟನೆಗಳ ಆಚೆಗೂ ಈ ಕೃತ್ಯ ಮಾಡಿದವರು ಇರಬಹುದಾ ಎಂದು ಕನಿಷ್ಠಮಟ್ಟದ ಸಂಶಯವನ್ನೂ ತಾಳದಂತಾಯಿತು.

ದೇಶದ ಹಲವಾರು ಕಡೆ ಅದರಲ್ಲೂ ಮುಸ್ಲಿಂ ಜನರೇ ವಾಸಿಸುವ ಪ್ರದೇಶದಲ್ಲಿಯೇ ಬಾಂಬು ಸಿಡಿದು ಅನೇಕ ಜನ ಮುಸ್ಲಿಮರೇ ಸಾವನ್ನಪ್ಪಿದಾಗಲೂ ಈ ಆಲೋಚನಾ ಕ್ರಮ ಬದಲಾಗಲಿಲ್ಲ. ಆದರೆ ಮುಸ್ಲಿಮರು ಮುಸ್ಲಿಮರನ್ನೇ ಕೊಲ್ಲುವ ಕೆಲಸವನ್ನು ಏಕೆ ಮಾಡುತ್ತಾರೆ? ಎಂಬ ಪ್ರಜ್ಞಾವಂತರ ಪ್ರಶ್ನೆಗೆ, ಇದರ ಹಿಂದೆ ಮುಸ್ಲಿಮರಲ್ಲದ ಇನ್ಯಾರದ್ದೋ ಕೈವಾಡವಿರಬಹುದೇ ಎಂಬ ಸಂಶಯಕ್ಕೆ ಒಂದು ನಿಖರ ಎಂಬಂತಹ ಉತ್ತರ ಸಿಕ್ಕಿದ್ದು ೨೦೦೮ರ ಮಾಲೆಗಾಂವ್ ಸ್ಫೋಟಕ್ಕೆ ಸಂಬಂಧಿಸಿದಂತೆ ತಲೆಮರೆಸಿಕೊಂಡು ನಂತರ ಪೊಲೀಸರ ಕೈಗೆ ಸಿಕ್ಕ ಸ್ವಾಮೀ ಅಸೀಮಾನಂದ ಎಂಬ ಹಿಂದುತ್ವವಾದಿ ಸ್ವಾಮಿಯೊಬ್ಬ ೨೦೧೦ರ ಡಿಸೆಂಬರ್, ೧೬ರಂದು ದೆಹಲಿ ನ್ಯಾಯಾಲಯದ ನ್ಯಾಯಾಧೀಶರೆದುರು ತಪ್ಪೊಪ್ಪಿಗೆ ಹೇಳಿಕೆ ನೀಡಿದಾಗ. ಅವನ ಹೇಳಿಕೆ ಇಡೀ ದೇಶವೇ ಬೆಚ್ಚಿಬೀಳುವಂತಹ ಅನೇಕ ಸಂಗತಿಗಳನ್ನು ಹೊರಹಾಕಿತು. ಭಯೋತ್ಪಾದನೆಯ ಇನ್ನೊಂದು ಮುಖ ಬಯಲಿಗೆ ಬಂತು. ಮುಂದೆ ಈತ ತನ್ನ ಹೇಳಿಕೆಯನ್ನು ಮರಳಿಪಡೆದರೂ ಅದು ಇಡೀ ದೇಶ ಭಯೋತ್ಪಾದನೆ ಕುರಿತು ಇಟ್ಟುಕೊಂಡಿದ್ದ ಪೂರ್ವಗ್ರಹವನ್ನು ಒಡೆದುಹಾಕಿತು. ಆತನ ಹೇಳಿಕೆ ಭಾರತದಲ್ಲಿ ನಡೆದ ಅನೇಕ ಭಯೋತ್ಪಾದನಾ ಚಟುವಟಿಕೆಗಳಲ್ಲಿ ಹಿಂದುತ್ವವಾದಿ ಸಂಘಟನೆಗಳ ಪಾತ್ರ ಇರುವುದನ್ನು ದಾಖಲಿಸಿತು. ಮಾಲೆಗಾಂವ್ ಸ್ಫೋಟ, ಸಂಜೋತಾ ಎಕ್ಸ್‌ಪ್ರೆಸ್ ಸ್ಫೋಟ, ಹೈದರಾಬಾದ್ ಮಸೀದಿ ಸ್ಫೋಟ ಮುಂತಾದ ಹತ್ತಾರು ಭಯೋತ್ಪಾದನಾ ಚಟುವಟಿಕೆಗಳನ್ನು ನಡೆಸಿದ್ದು ಇಲ್ಲಿನ ಬಹುಸಂಖ್ಯಾತ ರಾಷ್ಟ್ರಭಕ್ತ ಸಂಘಟನೆಗಳ ಕಾರ್ಯಕರ್ತರು ಎಂಬುದನ್ನು ಮುಂದಿನ ಅನೇಕ ತನಿಖೆಗಳು ಹೊರಗೆಡವಿದವು.

ಸುರೇಶ ಬಾಕ್ರಬೈಲು ಅವರ ಇತ್ತೀಚಿನ ಪುಸ್ತಕ 'ಕೇಸರಿ ಭಯೋತ್ಪಾದನೆ' ಅದರ ಹೆಸರೇ ಹೇಳುವಂತೆ ದೇಶದಲ್ಲಿ ನಡೆದ/ ನಡೆಯುತ್ತಿರುವ ಹಿಂದುತ್ವವಾದಿ ಸಂಘಟನೆಗಳ ಭಯೋತ್ಪಾದನೆ ಕುರಿತು ಮಾಹಿತಿ ನೀಡುವ ಪುಸ್ತಕ. ಈ ಕೃತಿಯ ಬಗ್ಗೆ ಆರಂಭದಲ್ಲಿಯೇ ಹೇಳಿಬಿಡಬೇಕಾದ ಒಂದು ಅಂಶವೆಂದರೆ ಇದು ದೇಶದಲ್ಲಿ ಇರುವ 'ಹಸಿರು ಭಯೋತ್ಪಾದನೆ' (ಅದನ್ನು ಹಾಗೆ ಕರೆಯಬಹುದಾದರೆ) ಬಗೆಗೆ ವಿವರಗಳನ್ನು ಒಳಗೊಂಡಿಲ್ಲ ಎಂಬುದು. ಅದು ಅದರ ವ್ಯಾಪ್ತಿಯೇ ಅಲ್ಲ ಎಂಬುದನ್ನು ಕೃತಿಯ ಹೆಸರೇ ಸೂಚಿಸುವುದರಿಂದ ಇದೊಂದು ಟೀಕಾರ್ಹ ಅಂಶವಾಗಲಾರದು. ಹಾಗಿದ್ದೂ ಇದು ಮಹತ್ವದ್ದು. ಏಕೆಂದರೆ ಜನತೆ ಅಷ್ಟಾಗಿ ಅರಿಯದ, ಇಡೀ ದೇಶಕ್ಕೆ ಅತಿದೊಡ್ಡ ಶತ್ರು ಎಂದು ಬಿಂಬಿಸಲಾಗುತ್ತಿರುವ ಇಸ್ಲಾಂ ಅಥವಾ ಮುಸ್ಲಿಂ ಭಯೋತ್ಪಾದನೆಯಷ್ಟೇ ಅಥವಾ ಅದಕ್ಕಿಂತ ಒಂದು ತೂಕ ಹೆಚ್ಚಾಗಿಯೇ ಇರುವ, ಹಿಂದುತ್ವವಾದಿ ಭಯೋತ್ಪಾದನೆಯ ಚಿತ್ರಣವನ್ನು ಈ ಕೃತಿ ನೀಡುತ್ತದೆ.

ಒಟ್ಟು ಹತ್ತು ಅಧ್ಯಾಯಗಳನ್ನೊಳಗೊಂಡಿರುವ ಈ ಪುಸ್ತಕದ ವ್ಯಾಪ್ತಿಯು ಹಿಂದುತ್ವದ ರಾಜಕೀಯ ಸಿದ್ಧಾಂತದ ಉಗಮದ ಹಂತದಿಂದ ಹಿಡಿದು ತೀರಾ ಇತ್ತೀಚೆಗೆ ಬೆಳಕಿಗೆ ಬಂದಿರುವ ಹಿಂದು ಸಂಘಟನೆಗಳ ಕೈವಾಡದಿಂದ ನಡೆದಿರುವವನ್ನೆಲ್ಲಾದ ಅನೇಕ ಭಯೋತ್ಪಾದನಾ ಚಟುವಟಿಕೆಗಳ ಸೂಕ್ಷ್ಮ ವಿಶ್ಲೇಷಣೆಯವರೆಗೂ ಹರಡಿದೆ. ಆರಂಭಿಕ ಅಧ್ಯಾಯದಲ್ಲಿ ಹಿಂದುತ್ವದ ಉಗಮ, ಅದರ ಸೈದ್ಧಾಂತಿಕ ಬುನಾದಿ, ಹಿಂದುತ್ವವಾದಿ ಸಂಘಟನೆಗಳ ಉದ್ದೇಶಿತ ಗುರಿಗಳನ್ನು ವಿಮರ್ಶಿಸಿರುವ ಲೇಖಕರು ಭಾರತದಲ್ಲಿ ಈ 'ಹಿಂದುತ್ವ' ಎಂಬುದು ಧರ್ಮಕ್ಕೆ ಸಂಬಂಧವಿಲ್ಲದ, ಕೇವಲ ರಾಜಕೀಯಕ್ಕೆ ಮಾತ್ರ ಸಂಬಂಧಿಸಿದ ಪರಿಭಾಷೆ ಎಂಬುದನ್ನು ಹಿಂದುತ್ವ ಪ್ರತಿಪಾದಕರ ಹೇಳಿಕೆಗಳ ಆಧಾರದಿಂದಲೇ ಚರ್ಚಿಸಿದ್ದಾರೆ.

ಹಿಂದುತ್ವದ ಮೇಲೆ 'ಫ್ಯಾಸಿಸಂ' ಮತ್ತು 'ನಾಜಿಸಂ'ಗಳ ಪ್ರಭಾವವನ್ನು ಚರ್ಚೆಗೆ ಎತ್ತಿಕೊಂಡಿರುವ ಲೇಖಕರು ಆಧುನಿಕ ಜಗತ್ತಿನ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನದ ಕುಖ್ಯಾತ ನಾಯಕರೆಂದು ಗುರುತಿಸಲ್ಪಟ್ಟಿರುವ ಇಟಲಿಯ ಮುಸಲೋನಿ ಮತ್ತು ಜರ್ಮನಿಯ ಹಿಟ್ಲರ್ ನಮ್ಮ ದೇಶದಲ್ಲಿ ಹಿಂದುತ್ವ ಪ್ರತಿಪಾದಕ ಸಂಘಟನೆಗಳನ್ನು ಆರಂಭಿಸಿದ ನಾಯಕರಿಗೆ ಎಷ್ಟೊಂದು ಆದರ್ಶವಾಗಿದ್ದರು ಎಂಬುದನ್ನು ಈ ನಾಯಕರ ವಿದೇಶಿ ಭೇಟಿ, ಅವರ ಸಂಭಾಷಣೆ ಮತ್ತು ಅಲ್ಲಿಂದ ಬಂದು ಇಲ್ಲಿ ಅವರು ಮಾಡಿದ ಬರಹ ಮತ್ತು ಭಾಷಣಗಳ ಆಧಾರದಲ್ಲಿಯೇ ವಿಶ್ಲೇಷಿಸಿದ್ದಾರೆ.

'ಹಿಂದುತ್ವ' ಎಂಬ ಪದವನ್ನು ಪ್ರಪ್ರಥಮವಾಗಿ ಬಳಸಿದ 'ವೀರ' ಸಾವರ್ಕರ್ ಬಗ್ಗೆ ಮೀಸಲಾಗಿರುವ ಒಂದು ಅಧ್ಯಾಯದಲ್ಲಿ ಸಾವರ್ಕರ್ ಬಗ್ಗೆ ಬರೆಯುವಾಗ ಯಾವುದೇ ರೀತಿಯ ಪೂರ್ವಗ್ರಹಕ್ಕೆ ಒಳಗಾಗದೆ ಅವರ ವ್ಯಕ್ತಿತ್ವವನ್ನು ವಿಮರ್ಶಿಸಲಾಗಿದೆ. ಭಾರತದಲ್ಲಿ ಜನಾಂಗೀಯ ಭೇದಕ್ಕೆ ಬೀಜ ನೆಟ್ಟ ಅವರ ಕೊಡುಗೆಯನ್ನು ವಿವರಿಸಿಯೂ ಅವರು ತಮ್ಮ ಆರಂಭಿಕ ಜೀವನದಲ್ಲಿ ಹೇಗೆ ಒಬ್ಬ ಜಾತ್ಯತೀತ ನಿಲುವಿನ ವ್ಯಕ್ತಿಯಾಗಿದ್ದರು ಮತ್ತು ಹಿಂದುಗಳು, ಮುಸ್ಲಿಮರು ಒಂದಾಗಿ ಬದುಕಬೇಕು ಎಂಬ ತಾತ್ವಿಕತೆಗೆ ಬದ್ಧರಾಗಿದ್ದರು ಎಂಬುದನ್ನು ಹೇಳಲು ಮರೆತಿಲ್ಲ. ಹೀಗೆ ಆರಂಭದಲ್ಲಿ ಬ್ರಿಟಿಷರ ಪ್ರಬಲ ವಿರೋಧಿಯಾಗಿದ್ದ ಅವರು ಕಾಲಾನಂತರದಲ್ಲಿ ಹೇಗೆ ಬ್ರಿಟಿಷರ ಆಪ್ತರೂ, ಕೋಮುದ್ವೇಷದ ಹರಿಕಾರರೂ ಆಗಿ ಹಿಂದೂ-ಮುಸ್ಲಿಮರ ಐಕ್ಯತೆಗಾಗಿ ಶ್ರಮಿಸುತ್ತಿದ್ದ ಗಾಂಧೀಜಿಯ ನಿಲುವನ್ನು ವಿರೋಧಿಸತೊಡಗಿದರು ಎಂಬುದನ್ನು ಕೃತಿ ವಿವರಿಸುವುದು ಅನನ್ಯವಾಗಿದೆ.

ಸಂಘ ಪರಿವಾರದ ಮತ್ತೊಬ್ಬ ಆಚಾರ್ಯರಾದ ಗೋಳ್ವಾಲ್ಕರ್ ಅವರನ್ನು 'ದ್ವೇಷದ ಗುರು' ಎಂದೇ ಕರೆದಿರುವ ಕೃತಿ ಅವರು ತಮ್ಮ 'ವಿ ಆರ್ ಅವರ್ ನೇಷನ್‌ಹುಡ್' ಮತ್ತು 'ಬಂಚ್ ಆಫ್ ಥಾಟ್ಸ್' ಕೃತಿಗಳಲ್ಲಿ ವ್ಯಕ್ತಪಡಿಸುವ ವಿಚಾರಗಳು ಹೇಗೆ ಭಾರತದ ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿವೆ ಎಂಬುದನ್ನು ತರ್ಕಬದ್ಧವಾಗಿ ವಿಶ್ಲೇಷಿಸಿದೆ. ದೇಶದ 'ಸಂಸ್ಕೃತಿ ರಕ್ಷಣೆ'ಯನ್ನು ಮಾಡುತ್ತೇವೆ ಎನ್ನುವ ಹಿಂದುತ್ವ ಸಂಘಟನೆಗಳು ಹೇಗೆ ಸಂವಿಧಾನಬಾಹಿರ ಕೃತ್ಯಗಳನ್ನು ಮಾಡುತ್ತಿವೆ ಮತ್ತು ಹಾಗಿದ್ದೂ ಅವನ್ನು ಪೋಷಿಸುತ್ತಿರುವಲ್ಲಿ ಇರುವ ರಾಜಕೀಯ-ಧಾರ್ಮಿಕ ಹಿತಾಸಕ್ತಿಗಳೇನು ಎಂಬುದನ್ನು ಇದು ತೆರೆದಿಡುತ್ತದೆ. ಗಾಂಧೀಜಿಯ ಹತ್ಯೆಯನ್ನು ಸ್ವತಂತ್ರ ಭಾರತ ಕಂಡ ಮೊದಲನೇ ಅತಿದೊಡ್ಡ ಭಯೋತ್ಪಾದನ ಚಟುವಟಿಕೆ ಎಂದು ಕರೆದಿರುವ ಲೇಖಕರು ಈ ಹತ್ಯೆಯ ಸುತ್ತಮುತ್ತ ನಡೆದಿರುವ ವಿದ್ಯಮಾನಗಳನ್ನು ಸಾಕಷ್ಟು ಸೂಕ್ಷ್ಮವಾಗಿ ಶೋಧಿಸಿ ಈ ಹತ್ಯೆಗೂ ನಮ್ಮ 'ರಾಷ್ಟ್ರಭಕ್ತ' ಸಂಘಟನೆಗಳಿಗೂ ಇರುವ ನಂಟನ್ನು ಬಿಚ್ಚಿಟ್ಟಿದ್ದಾರೆ.

ಒಂದೆರಡು ವರ್ಷಗಳ ಹಿಂದೆ 'ಕೇಸರಿ ಭಯೋತ್ಪಾದನೆ' ಎಂಬ ಪದಬಳಕೆಯನ್ನು ಕೇಂದ್ರ ಸಚಿವ ಪಿ. ಚಿದಂಬರಂ ಮಾಡಿದಾಗ ಅದನ್ನು ತಮಗಾದ ದೊಡ್ಡ ಅವಮಾನ ಎಂದು ಭಾವಿಸಿ ವಿರೋಧ ವ್ಯಕ್ತಪಡಿಸಿದ್ದ ಹಿಂದೂಪರ ಸಂಘಟನೆಗಳು ನಂತರದ ದಿನಗಳಲ್ಲಿ ಅದನ್ನು ಗಟ್ಟಿದನಿಯಲ್ಲಿ ವಿರೋಧಿಸುವ ನೈತಿಕತೆಯನ್ನು ಕಳೆದುಕೊಂಡದ್ದನ್ನು ಇಡೀ ರಾಷ್ಟ್ರವೇ ಕಂಡಿತು. ಹೀಗೆ ಈ ಬಗೆಯ 'ಕೇಸರಿ ಭಯೋತ್ಪಾದನೆ'ಯನ್ನು ಇಡೀ ರಾಷ್ಟ್ರಕ್ಕೆ ಕಾಣುವಂತೆ ಅದನ್ನು ಮೊಟ್ಟ ಮೊದಲಿಗೆ ಬಯಲಿಗೆಳೆದ ಧೀಮಂತ ಪೊಲೀಸ್ ಅಧಿಕಾರಿ ಹೇಮಂತ್ ಕರ್ಕರೆ ಅವರಿಗೆ ಅರ್ಪಿತವಾಗಿರುವ ಈ ಕೃತಿ ಭಯೋತ್ಪಾದನೆ ಬಗ್ಗೆ ಹೊಸ ಲೋಕವೊಂದನ್ನು ತೆರೆದಿಡುವ ಮೂಲಕ ಈ ಬಗ್ಗೆ ನಮಗಿರುವ ಸಂಕುಚಿತ ಮನೋಭಾವನೆಯನ್ನು ಖಂಡಿತಾ ಒಡಿಸುತ್ತದೆ. ಒಟ್ಟಿನಲ್ಲಿ ಭಾರತದಲ್ಲಿ ಮಾತ್ರವಲ್ಲ, ಇಡೀ ಪ್ರಪಂಚದಲ್ಲಿಯೇ ಅದು ಕೇಸರಿಯೋ ಹಸಿರೋ ಯಾವುದೇ ಬಗೆಯ ಭಯೋತ್ಪಾದನೆ ಇರಬಾರದು; ಎಲ್ಲರೂ ನೆಮ್ಮದಿಯಿಂದ ಬದುಕುವ ಭಯಮುಕ್ತ ವಿಶ್ವವೊಂದು ನಿರ್ಮಾಣವಾಗಬೇಕು ಎಂದು ಬಯಸುವ ಎಲ್ಲರೂ ಒಮ್ಮೆಯಾದರೂ ಓದಲೇಬೇಕಾದ ಪುಸ್ತಕವಿದು. ಇಂತಹ ಕೃತಿಗಳು ಈಗಾಗಲೇ ಇಂಗ್ಲಿಷ್‌ನಲ್ಲಿ ಸಾಕಷ್ಟು ಬಂದಿದ್ದರೂ ಕನ್ನಡದ ಓದುಗರಿಗೆ ಇದೊಂದು ಹೊಸ ಅನುಭವವಾಗಿದ್ದು, ಇದನ್ನು ಆಗುಮಾಡಿದ ಲೇಖಕರು ಮತ್ತು ಲಂಕೇಶ ಪ್ರಕಾಶನ ಇಬ್ಬರೂ ಕನ್ನಡಿಗರ ಅಭಿನಂದನೆಗೆ ಅರ್ಹರು.

**ಡಾ॥ ರಾಜೇಂದ್ರ ಬುರಡಿಕಟ್ಟಿ**
'ಪರ್ಣಕುಟಿ', ಸಾಲೇಕೊಪ್ಪ, ಸರು ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ - ೫೭೭ ೪೨೨

## ಅಭಿವೃದ್ಧಿಗೊಂದು ಹೊಸ ಬ್ಯಾಂಕ್ ಸ್ಥಾಪನೆ ಸ್ವಾಗತಾರ್ಹ




**ಅಂ**ತರರಾಷ್ಟ್ರೀಯ ಹಣಕಾಸಿನ ಕ್ಷೇತ್ರದಲ್ಲಿ ಸುಮಾರು ಎಪ್ಪತ್ತು ವರ್ಷಗಳಿಂದ ಪಾರುಪತ್ಯ ನಡೆಸುತ್ತ ಬಂದಿರುವ ಎರಡು ಸಂಸ್ಥೆಗಳು – ಅಂತರರಾಷ್ಟ್ರೀಯ ವಿತ್ತೀಯ ನಿಧಿ (ಐಎಂಎಫ್) ಮತ್ತು ವಿಶ್ವಬ್ಯಾಂಕ್ (ವರ್ಲ್ಡ್ ಬ್ಯಾಂಕ್). ಈ ಎರಡು ಸಂಸ್ಥೆಗಳೂ ಅಸ್ತಿತ್ವಕ್ಕೆ ಬಂದದ್ದು ಎರಡನೇ ಮಹಾಯುದ್ಧ ಮುಗಿದ ಮೇಲೆ. ಎರಡೂ ಮಹಾಯುದ್ಧಗಳಿಂದ ಆರ್ಥಿಕವಾಗಿ ಲಾಭಗಳಿಸಿ ಶ್ರೀಮಂತವಾದ ಅಮೆರಿಕದ್ದೇ ಆಧಿಪತ್ಯ ಎರಡರಲ್ಲೂ. ಇವುಗಳಿಂದ ಪ್ರಯೋಜನ ಪಡೆದುಕೊಂಡಿರುವ ದೇಶಗಳೂ ಇವೆ, ಹಾಳಾದ ದೇಶಗಳೂ ಇವೆ. ಎರಡನೇ ಪರಿವಾರವೇ ಹೆಚ್ಚು. ಅಭಿವೃದ್ಧಿಶೀಲ ದೇಶಗಳನ್ನು ಸಾಲದ ಮಡುವಿನಲ್ಲಿ ನೂಕಿದ್ದು ಅದರ ಸಾಧನೆ ಎಂದರೆ ಉತ್ಪ್ರೇಕ್ಷೆ ಏನಲ್ಲ. ಐಎಂಎಫ್ ಮತ್ತು ವರ್ಲ್ಡ್ ಬ್ಯಾಂಕಿನ ಸಲಹೆ ಸೂಚನೆಗಳನ್ನು ಜಾರಿಗೆ ತಂದು ದಿವಾಳಿಯಾದ ದೇಶಗಳ ಪಟ್ಟಿಯನ್ನು ಇಲ್ಲಿ ಕೊಡುವುದು ಅನಗತ್ಯ. ಇವುಗಳಿಂದ ಮುಕ್ತಿಯೇ ಇಲ್ಲವೇನೋ ಎನಿಸಿದ್ದಾಗ ಪರ್ಯಾಯ ಮಾರ್ಗ ತೋರಿಸಿದ್ದು ದಕ್ಷಿಣ ಅಮೆರಿಕದ ದೇಶಗಳು; ಅವು ಸ್ಥಾಪನೆ ಮಾಡಿದ 'ಬ್ಯಾಂಕ್ ಆಫ್ ದಿ ಸೌತ್'. ವೆನಿಜುವೇಲದ ಉಪಕ್ರಮದಿಂದ ಪರಸ್ಪರ ಸಹಕಾರದ ಆಧಾರದ ಮೇಲೆ ಅಸ್ತಿತ್ವಕ್ಕೆ ಬಂದಂಥ ಬ್ಯಾಂಕು ಈ ಭಾಗದ ಅನೇಕ ದೇಶಗಳನ್ನು ಐಎಂಎಫ್ ಮತ್ತು ವರ್ಲ್ಡ್ ಬ್ಯಾಂಕಿನಿಂದ ಋಣಮುಕ್ತಗೊಳಿಸಿತು. ಅಂತಾರಾಷ್ಟ್ರೀಯ ಹಣಕಾಸಿನ ಮಾರುಕಟ್ಟೆಯಲ್ಲಿ ಪಾಶ್ಚಾತ್ಯ ದೇಶಗಳಿಗೆ ಮೊದಲ ಪ್ರಹಾರ ನೀಡಿದ್ದು ಈ ಸೌತ್ ಬ್ಯಾಂಕ್.

ಇದೀಗ ಅದೇ ಹಾದಿಯಲ್ಲಿ ಇನ್ನೊಂದು ಪ್ರಯತ್ನ ನಡೆಯತೊಡಗಿದೆ. ಇದುವರೆಗೆ ಮಾತಿನ ಮಂಟಪವೇನೋ ಎನಿಸಿದ್ದ ಐದು ರಾಷ್ಟ್ರಗಳನ್ನೊಳಗೊಂಡ – ಬ್ರೆಜಿಲ್, ರಷ್ಯಾ, ಇಂಡಿಯಾ, ಚೀಣಾ, ದಕ್ಷಿಣ ಆಫ್ರಿಕ – ದೇಶಗಳು ಪ್ರಾಯೋಗಿಕವಾಗಿ ಒಂದು ಹೆಜ್ಜೆ ಮುಂದಿರಿಸಲು ಯೋಜಿಸಿವೆ. ಅಭಿವೃದ್ಧಿಯ ಹಾದಿಯಲ್ಲಿ ದಾಪುಗಾಲಿರಿಸಿರುವ ಈ ರಾಷ್ಟ್ರಗಳು ಭಿನ್ನ ಧೋರಣೆಗಳನ್ನು ಹೊಂದಿದ್ದಾಗ್ಯೂ 'ಹೊಸ ಅಭಿವೃದ್ಧಿ ಬ್ಯಾಂಕ್' ಒಂದನ್ನು ಸ್ಥಾಪಿಸಲು ತೀರ್ಮಾನಿಸಿರುವುದು ಸ್ವಾಗತಾರ್ಹ. ದಕ್ಷಿಣ ಆಫ್ರಿಕದ ದರ್ಬಾನ್ ನಗರದಲ್ಲಿ ಸಮಾವೇಶಗೊಂಡಿದ್ದ ಈ ರಾಷ್ಟ್ರಗಳ ಅಧಿಪತಿಗಳ ಐದನೇ ಶೃಂಗಸಭೆ ಅಂಗೀಕರಿಸಿರುವ ತೀರ್ಮಾನ ಇದು. ಈಗಾಗಲೇ ಈ ತೀರ್ಮಾನ ಅಂತರರಾಷ್ಟ್ರೀಯ ವಿತ್ತೀಯ ಮಾರುಕಟ್ಟೆಯಲ್ಲಿ ವ್ಯವಹರಿಸುತ್ತಿರುವ ಪಾಶ್ಚಾತ್ಯ ದೇಶಗಳಿಗೆ, ಮುಖ್ಯವಾಗಿ ಅಮೆರಿಕಾಗೆ ನಡುಕ ಹುಟ್ಟಿಸಿದೆ. ತಮ್ಮ ಗುತ್ತೇದಾರಿಗೆ ಇನ್ನೊಂದು ಹೊಡೆತ ಬೀಳಬಹುದೆಂದು ಆತಂಕ ಉಂಟಾಗಿದೆ. ಅದಕ್ಕಾಗಿಯೇ ಈ ದೇಶಗಳು ಈಗಾಗಲೇ 'ಹೊಸ ಅಭಿವೃದ್ಧಿ ಬ್ಯಾಂಕ್' ಸ್ಥಾಪನೆಯನ್ನು ಅಲ್ಲಗಳೆಯಲು ನೋಡುತ್ತಿವೆ. ಈ ಬ್ಯಾಂಕ್ ಸ್ಥಾಪನೆಯ ಯೋಜನೆ ಕಾರ್ಯಗತವಾಗದು, ಅದೊಂದು ಕನಸಿನ ಕಲ್ಪನೆಯಾಗಿಯೇ ಉಳಿಯುವುದು ಎಂದು ಅಲ್ಲಿನ ಮಾಧ್ಯಮಗಳು ಹೇಳತೊಡಗಿವೆ. ಅದೇನೇ ಇರಲಿ, ಈ ಬ್ಯಾಂಕಿನ ಸ್ಥಾಪನೆ ಕಾರ್ಯಗತವಾದಾಗ ಅದು ಐಎಂಎಫ್‌ಗೆ, ವರ್ಲ್ಡ್ ಬ್ಯಾಂಕ್‌ಗೆ ಭಾರಿ ಹೊಡೆತವಾಗುವುದಂತೂ ನಿಜ. ಬ್ಯಾಂಕ್ ಸ್ಥಾಪನೆಯ ವಿವರಗಳನ್ನು ತಯಾರಿಸಲು ಈಗಾಗಲೇ ಕ್ರಮ ಕೈಗೊಳ್ಳಲಾಗಿದೆ. ಬ್ಯಾಂಕಿನ ಮೂಲ ಉದ್ದೇಶಗಳಲ್ಲಿ ಒಂದು ಭಾಗವಹಿಸುವ ದೇಶಗಳ ಅಗತ್ಯಗಳಿಗೆ ನೆರವಾಗುವುದಷ್ಟೇ ಅಲ್ಲದೆ ಅಭಿವೃದ್ಧಿಶೀಲ ದೇಶಗಳಿಗೂ ಸಹಾಯ ಒದಗಿಸುವುದಾಗಿದೆ. ಉದ್ದೇಶಿತ ಈ ಬ್ಯಾಂಕ್ ಆದಷ್ಟು ಶೀಘ್ರವಾಗಿ ಸ್ಥಾಪನೆಗೊಳ್ಳಲಿ.

**ಸೀಯಾರ್ಕೆ**

## ಉತ್ತರ ಕೊರಿಯ : ಯುದ್ಧದ ತೂಗುಕತ್ತಿ

**ಕೊ**ರಿಯದಲ್ಲಿ ಇನ್ನೊಂದು ಯುದ್ಧ ಸಂಭವಿಸಲಿದೆಯೇ ? ಯುದ್ಧವಾದರೆ ಅದು ನ್ಯೂಕ್ಲಿಯರ್ ಯುದ್ಧವಾದೀತೆ ? ಪರಮಾಣು ಅಸ್ತ್ರ ಹೊಂದಿರುವ ಉತ್ತರ ಕೊರಿಯ ಈ ಮಾರಕಾಸ್ತ್ರ ಪ್ರಯೋಗಿಸುವುದೆ ? ಅಮೆರಿಕ ಉತ್ತರ ಕೊರಿಯಾದ ಮೇಲೆ ದಾಳಿ ನಡೆಸುವುದೆ ? ಹೀಗೆ ಹಲವಾರು ಪ್ರಶ್ನೆಗಳು ಕೆಲ ದಿನಗಳಿಂದ ಕಾಡುತ್ತಿವೆ ಅಂತರರಾಷ್ಟ್ರೀಯ ವಲಯದಲ್ಲಿ. ಇತ್ತೀಚೆಗೆ ಉತ್ತರ ಕೊರಿಯ ನ್ಯೂಕ್ಲಿಯರ್ ಸಿಡಿತಲೆ ಒಯ್ಯಬಲ್ಲ ದೂರಗಾಮಿ ಕ್ಷಿಪಣಿ ಪ್ರಯೋಗ ಯಶಸ್ವಿಯಾಗಿ ನಡೆಸಿದ್ದೇ ಈ ಎಲ್ಲ ಊಹಾಪೋಹಗಳಿಗೆ ಆಧಾರ. ಇದರ ಮೇಲೆ ಅಮೆರಿಕ ಉತ್ತರ ಕೊರಿಯಾಗೆ ನೀಡಿರುವ ಎಚ್ಚರಿಕೆ ಹಾಗೂ ಬೆದರಿಕೆಗಳೂ ಇವೆ. ಅಮೆರಿಕದ ಬೆದರಿಕೆಗೆ ಸವಾಲಾಗಿ ಉತ್ತರ ಕೊರಿಯ ಯಾವತ್ತಿನಂತೆ ತನ್ನ ಶಕ್ತಿ ಪ್ರದರ್ಶನ ಮಾಡಿದೆ. ಈ ಭೂಭಾಗದಲ್ಲಿ ಅತಿದೊಡ್ಡ ಸೈನ್ಯ ಹೊಂದಿರುವ ದೇಶ ಎಂದರೆ ಉತ್ತರ ಕೊರಿಯ. ಸರಿಸುಮಾರು ಏಳು ದಶಕಗಳಿಂದ ಅಮೆರಿಕಾಗೆ ಸವಾಲಾಗಿ, ಕಂಟಕವಾಗಿ ನಿಂತಿರುವ ದೇಶ ಎಂದರೆ ಉತ್ತರ ಕೊರಿಯ. ಎಲ್ಲ ಬೆದರಿಕೆಗಳಿಗೂ ಮೈಯೊಡ್ಡಿ ನಿಂತಿದೆ ಏಶಿಯಾದ ಈ ಪುಟ್ಟ ದೇಶ.

ಎರಡನೇ ಮಹಾಯುದ್ಧದ ನಂತರ ಪ್ರಾರಂಭವಾದ ಅಮೆರಿಕ-ಸೋವಿಯತ್ ರಷ್ಯಾ ನಡುವಣ ಶೀತಲ ಸಮರಕ್ಕೆ ಬಲಿಯಾದ ಮೊದಲ ದೇಶ ಏಶಿಯಾ ಖಂಡದ ಪೂರ್ವಕ್ಕಿರುವ ಕೊರಿಯ. ಜಪಾನಿನ ಆಕ್ರಮಣಕ್ಕೆ ತುತ್ತಾಗಿದ್ದ ಈ ಪರ್ಯಾಯ ದ್ವೀಪ, ಯುದ್ಧದಲ್ಲಿ ಜಪಾನ್ ಶರಣಾಗತವಾದಾಗ ಇಬ್ಭಾಗವಾಯಿತು. ಉತ್ತರದ ಭಾಗ ಸೋವಿಯತ್ ಸೇನೆಯ ವಶವಾದರೆ, ದಕ್ಷಿಣ ಭಾಗ ಅಮೆರಿಕ ಸೇನೆಯ ಕೈಸೇರಿತು. ಆಗ ಇಬ್ಭಾಗವಾದ ಈ ದೇಶ ಮತ್ತೆ ಒಂದಾಗಲೇ ಇಲ್ಲ. ಮೊದಲ ಪ್ರಾದೇಶಿಕ ಯುದ್ಧಕ್ಕೆ ನಾಂದಿಯಾದ ದೇಶ ಕೊರಿಯ. ವಿಶ್ವಸಂಸ್ಥೆಯ 'ನೇತೃತ್ವ'ದಲ್ಲಿ ನಡೆದ ಮೊದಲ ಯುದ್ಧ ಅದು. ಉತ್ತರ ಕೊರಿಯ ಮತ್ತು ದಕ್ಷಿಣ ಕೊರಿಯಗಳ ಮಧ್ಯೆ ೧೯೫೦ರಲ್ಲಿ ಯುದ್ಧ ಪ್ರಾರಂಭವಾಯಿತು. ವಿಶ್ವಸಂಸ್ಥೆಯ ಭದ್ರತಾಮಂಡಳಿಯ ಸಭೆಯಲ್ಲಿ ಅಮೆರಿಕ ಉತ್ತರ ಕೊರಿಯವನ್ನು ದುರಾಕ್ರಮಣಕಾರಿ ಎಂದು ಹೆಸರಿಸುವ ನಿರ್ಣಯಕ್ಕೆ ಅಂಗೀಕಾರ ಪಡೆಯುವುದರಲ್ಲಿ ಸಫಲಗೊಂಡಿತು. ಆ ಸಭೆಯಲ್ಲಿ ವೀಟೋ ಹಕ್ಕು ಹೊಂದಿರುವ ಸೋವಿಯತ್ ಒಕ್ಕೂಟ ಭಾಗವಹಿಸಿರಲಿಲ್ಲ. ಹಾಗಾಗಿ ಅಮೆರಿಕದ ನೇತೃತ್ವದಲ್ಲಿ ವಿಶ್ವಸಂಸ್ಥೆಯ ಹೆಸರಿನಲ್ಲಿ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಪರೋಕ್ಷವಾಗಿ ಸೋವಿಯೆತ್ ರಷ್ಯಾ ಉತ್ತರ ಕೊರಿಯಾಗೆ ಬೆಂಬಲ ನೀಡಿತು, ಸಾಕಷ್ಟು ಶಸ್ತ್ರಾಸ್ತ್ರಗಳನ್ನು ಒದಗಿಸಿತು. ಆಗ ತಾನೆ ಉದಯಿಸಿದ್ದ ಕಮ್ಯೂನಿಸ್ಟ್ ಚೀಣಾ ನೇರವಾಗಿ ತನ್ನ ಸೈನಿಕರನ್ನು ಕಳಿಸಿಕೊಟ್ಟಿತು ಉತ್ತರ ಕೊರಿಯಾಗೆ. ಈ ಯುದ್ಧ ಅಂತ್ಯಗೊಳ್ಳದೆ ಯುದ್ಧ ಸ್ತಂಭನ ಒಪ್ಪಂದವಾಗಿ, ಉತ್ತರ-ದಕ್ಷಿಣ ಕೊರಿಯಗಳ ವಿಭಜನೆ ಖಾಯಂ ಆಯಿತು. ಆಗಿನಿಂದ ಈ ಎರಡೂ ಭ್ರಾತೃದೇಶಗಳು ದಾಯಾದಿ ಮಾತ್ಸರ್ಯದಿಂದ ಯುದ್ಧದ ಭೀತಿಯಿಂದಲೇ, ಉದ್ರಿಕ್ತತೆಯ ವಾತಾವರಣದಲ್ಲಿಯೇ ಸಾಗುತ್ತಿವೆ.

ಈಗ ಏರ್ಪಟ್ಟಿರುವ ಪರಿಸ್ಥಿತಿಯೂ ಅಂಥದ್ದೆ. ಅಮೆರಿಕ ಯಾವತ್ತೂ ಉತ್ತರ ಕೊರಿಯದ ಮೇಲೆ ಕಿಡಿಕಾರುತ್ತಿದೆ. ಪ್ರಾಯಶಃ ಉತ್ತರ ಕೊರಿಯ ನ್ಯೂಕ್ಲಿಯರ್ ಅಸ್ತ್ರಬಲ ಹೊಂದಿರುವುದರಿಂದ ಉಳಿದುಕೊಂಡಿದೆಯೇನೋ ಎಂಬ ಅನುಮಾನವೂ ಇದೆ. ಈ ಕತ್ತಿಮಸೆತ ಎಂದು ಸ್ಫೋಟಗೊಳ್ಳುವುದೋ. ಅಮೆರಿಕಾಗೆ ಬಹುದೊಡ್ಡ ತಲೆನೋವು ಸದ್ಯದಲ್ಲಿ ಉತ್ತರ ಕೊರಿಯ, ಸಿರಿಯಾ, ಇರಾನ್. ಈ ಮೂರೂ ಜಗತ್ತಿನ ಕಾವು ನೆಲೆಗಳಾಗಿಯೇ ಇವೆ. ಅಮೆರಿಕ ಯಾವಾಗ ಬೇಕಾದರೂ ಈ ದೇಶಗಳ ಮೇಲೆ ನುಗ್ಗಲು ಸಿದ್ಧ. ಅದು ಸಾಧ್ಯವೇ ?

## ಲುಮುಂಬಾ ಕೊಲೆಗಾರರು ಯಾರು ?

**ಪ್ಯಾ**ಟ್ರಿಸ್ ಲುಮುಂಬಾ ಚಿತ್ರಹಿಂಸೆಗೊಳಗಾಗಿ ಸತ್ತದ್ದು ಐವತ್ತು ವರ್ಷಗಳಿಗೂ ಹಿಂದೆ. ಅರವತ್ತರ ದಶಕದಲ್ಲಿ ಲುಮುಂಬಾ ಅಪಾರ ಖನಿಜ ಸಂಪತ್ತಿನಿಂದ ಕೂಡಿರುವ, ಮುಖ್ಯವಾಗಿ ತಾಮ್ರ ನಿಕ್ಷೇಪ ಹೊಂದಿರುವ ಆಫ್ರಿಕಾದ ಕಾಂಗೋ ದೇಶದ ಅಧ್ಯಕ್ಷರಾಗಿದ್ದರು. ಬೆಲ್ಜಿಯನ್ ಸಾಮ್ರಾಜ್ಯಶಾಹಿಗಳ ವಶದಲ್ಲಿದ್ದ ದೇಶ ಸ್ವಾತಂತ್ರ್ಯ ಪಡೆದುಕೊಂಡ ಮೇಲೆ ರಾಷ್ಟ್ರೀಯವಾದಿಯಾಗಿದ್ದ ಲುಮುಂಬಾ ದೇಶದ ನೈಸರ್ಗಿಕ ಸಂಪತ್ತನ್ನು ಲೂಟಿಮಾಡುತ್ತಿದ್ದ ವಿದೇಶೀ ಕಂಪೆನಿಗಳನ್ನು ರಾಷ್ಟ್ರೀಕರಣ ಮಾಡಿದರು. ಅಂದಿನ ಸೋವಿಯೆತ್ ರಷ್ಯಾದೊಂದಿಗೆ ಸಂಬಂಧ ಬೆಳೆಸಿದರು. ಇದರಿಂದ ರೊಚ್ಚಿಗೆದ್ದ ಅಮೆರಿಕ ಮತ್ತು ಬ್ರಿಟನ್‌ಗಳು ಲುಮುಂಬಾರನ್ನು ಅಧಿಕಾರದಿಂದ ಇಳಿಸಲು ಕಾರಸ್ಥಾನ ಹೂಡಿದರು. ಕ್ಷಿಪ್ರಕ್ರಾಂತಿ ನಡೆಸಿ ಮಿಲಿಟರಿ ಅಧಿಕಾರ ವಹಿಸಿಕೊಂಡಿತು. ಅಂತರ್ಯುದ್ಧ ಪ್ರಾರಂಭವಾಯಿತು. ಲುಮುಂಬಾಗೆ ವಿಶ್ವಸಂಸ್ಥೆಯ ಪ್ರತಿನಿಧಿಯಾಗಿದ್ದ ಭಾರತದ ರಾಜೇಶ್ವರ ದಯಾಳ್ ಆಶ್ರಯ ನೀಡಿದ್ದರು. ಲುಮುಂಬಾರನ್ನು ಬಂಧಿಸಿ, ಹಿಂಸಿಸಿ ಕೊಲೆ ಮಾಡಲಾಯಿತು. ಅಂದಿನ ದಿನಗಳಲ್ಲಿ ಈ ರೀತಿ ಕೊಲೆಗೀಡಾದ ರಾಷ್ಟ್ರೀಯವಾದಿ ನಾಯಕರು ಹಲವರು. ತಾಮ್ರ ನಿಕ್ಷೇಪ ಸೋವಿಯೆತ್ ರಷ್ಯಾ ವಶವಾಗುವುದೆಂಬ ಭೀತಿಯೇ ಲುಮುಂಬಾ ಕೊಲೆಗೆ ಕಾರಣ. ರಷ್ಯಾದ ಮಿತ್ರರಾಗಿದ್ದ ಲುಮುಂಬಾ ಹೆಸರಿನಲ್ಲಿ ಮಾಸ್ಕೋದಲ್ಲಿ ವಿಶ್ವವಿದ್ಯಾನಿಲಯವೊಂದನ್ನು ಸ್ಥಾಪಿಸಲಾಯಿತು. ಇದು ಪ್ರಧಾನವಾಗಿ ಅಭಿವೃದ್ಧಿಶೀಲ ದೇಶಗಳ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ ನೀಡುತ್ತಿತ್ತು.



ಲುಮುಂಬಾ ಕೊಲೆಗೆ ಹಿಂದಿದ್ದ ಕೈಗಳು - ಪಾಶ್ಚಾತ್ಯ ಸಾಮ್ರಾಜ್ಯಶಾಹಿ ದೇಶಗಳು ಎನ್ನುವುದು ನಿಜವಾಗಿದ್ದರೂ ಯಾರು ಎನ್ನುವುದು ಇದುವರೆಗೆ ತಿಳಿದುಬಂದಿಲ್ಲ. ಗೂಢಚರ್ಯೆ ಸಂಸ್ಥೆಗಳು ನಡೆಸುವ ಕೊಲೆಗಳು ಬಯಲಿಗೆ ಬರುವುದೇ ಇಲ್ಲ. ಇತ್ತೀಚೆಗೆ ಬ್ರಿಟನ್ನಿನ ಎಂ-೧೬ ಎಂಬ ಗೂಢಚರ್ಯೆ ಸಂಸ್ಥೆಯ ಅಧಿಕಾರಿ ಡ್ಯಾಫ್ನೆ ಪಾರ್ಕ್ ಎಂಬಾಕೆ ಲುಮುಂಬಾ ಕೊಲೆಯನ್ನು ರೂಪಿಸಿದ್ದು ತಾನು ಎಂದು ಹೇಳಿಕೊಂಡಿದ್ದಾಳೆ. ಕಾಂಗೋದ ಖನಿಜಸಂಪತ್ತನ್ನು ಪಾಶ್ಚಾತ್ಯರ ವಶದಲ್ಲೇ ಇರಿಸಿಕೊಳ್ಳಲು ಈ ಸಂಚನ್ನು ಕಾರ್ಯಗತ ಮಾಡಬೇಕಾಯಿತು ಎಂದು ಹೇಳಿಕೊಂಡಿದ್ದಾಳೆ. ಕಾಂಗೋದ ಖನಿಜ ಸಂಪತ್ತು ಸುಮಾರು ೫೪ ಟ್ರಿಲಿಯನ್ ಡಾಲರುಗಳೆಂದು ಅಂದಾಜು ಮಾಡಲಾಗಿದೆ. ಕೋಬಾಲ್ಟ್, ವಜ್ರ, ತಾಮ್ರ ಮೊದಲಾದುವು ಇಲ್ಲಿ ಹೇರಳವಾಗಿ ಲಭ್ಯ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ದಂಡಯಾತ್ರೆ

ಯಾತ್ರೆ
ಹೊರಟಿದೆ.
ಜಾತ್ರೆಯೊಳು ಹುಟ್ಟು; ಗುಟ್ಟು
ಕಾಡಿನೊಳಗೆ ಬಿಟ್ಟು.

ನಿನ್ನೆ ಹೊರಟಿದ್ದು
ನಾಳೆ ಕಾಣಬೇಕು; ಇಂದು
ಏಗಬೇಕು.

ಮೈಲಿಗಲ್ಲುಗಳಿಲ್ಲ
ಅಡಿಯಿಟ್ಟರೆ ಅಳತೆ
ಇಂಚಿಟ್ಟರೂ ಘನತೆ.
ಹಾದ ಹೆಜ್ಜೆಗಳಿಗೆಲ್ಲ
ಗುರುತುಗಳಿಲ್ಲ
ಪಡಿಮೂಡಿದ ಮೂರು, ಮತ್ತೊಂದು
ಪಾದ ಕಮಲಗಳೆಲ್ಲ.



ಅಗಸೆ ದಾಟಿದ್ದು
ಆಗಸದ ಕಡೆಗೆ
ಉಟ್ಟಿದ್ದರಲ್ಲೇ ಊರಾಚೆಗೂ
ನಡಿಗೆ.

ಸುತ್ತ ನೆರೆದವರೆ
ಸಂತರಾಗಿ
ಸಂತರೇ ಸುತ್ತ
ನೆರೆಯುತ್ತ ಹೋಗಿ
ಗುಟ್ಟೊಂದು ರಟ್ಟಾಗಿ,
ಮತ್ತೆ ಗುಟ್ಟಾಗಿ
ಬೆಳೆ ಬೆಳೆದು ಒಟ್ಟಾಗಿ
ಹೆಜ್ಜೆ - ಹೆಜ್ಜೆಗೂ ಬೆಚ್ಚಿ
ಕಾಲುದಾರಿಯೆ ಹೆಚ್ಚಿ
ಊರು-ಕೇರಿಯ ದಾಟಿ
ನೆತ್ತಿ ಸೂರ್ಯನ ನುಂಗಿ
ಹೊದ್ದ ಅಂಗಿಯ ಹರಿದು

ಹೊಸತು ಅಂಗಿಯನುಡಲು
ಜಾತ್ರೆಯೊಳಗೆ ಯಾತ್ರೆ
ಹೊರಟಿದೆ.

ದಂಡವಲ್ಲವೀ ಯಾತ್ರೆ
'ದಂಡಯಾತ್ರೆ'.

**ಮೃತ್ಯುಂಜಯ ಎಂ. ಸಾಲೀಮಠ**
ನಂ. ೨೮೯, ೩ನೇ 'ಎ' ಅಡ್ಡರಸ್ತೆ, ೩ನೇ ಬ್ಲಾಕ್, ೩ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಖಾಸಗಿ ವಲಯ ಮತ್ತು ಮೀಸಲಾತಿ

**ಡಾ|| ಎಚ್. ಎಸ್. ಅನುಪಮಾ**




ಇತ್ತೀಚೆಗೆ ರತನ್ ಟಾಟಾ ಹುಬ್ಬಳ್ಳಿಯ ಬಿ.ವಿ.ಬಿ. ಇಂಜಿನಿಯರಿಂಗ್ ಕಾಲೇಜಿಗೆ ಬಂದಿದ್ದರು. ಅಭಿವೃದ್ಧಿ ಕುರಿತು ವಿಚಾರ ಸಂಕಿರಣದಲ್ಲಿ ಮಾತನಾಡುತ್ತ ಖಾಸಗಿ ವಲಯದಲ್ಲಿ ಜಾತಿ ಆಧಾರಿತ ಮೀಸಲಾತಿ ಕೊಡುವುದು ಸಾಧ್ಯವಿಲ್ಲ, ಪ್ರಾಕೃತಿಕ ಹಾಗೂ ಮಾನವ ಸಂಪನ್ಮೂಲವಿದ್ದೂ ಭಾರತವು ಅಭಿವೃದ್ಧಿಯಲ್ಲಿ ಹಿಂದುಳಿದಿರುವುದಕ್ಕೆ, ಉಳಿದ ದೇಶಗಳ ಜೊತೆ ಸ್ಪರ್ಧಿಸಲಾಗದೆ ಇರುವುದಕ್ಕೆ ಮೀಸಲಾತಿ ನೀತಿಯೂ ಕಾರಣ ಎಂದರು. ಅವರೊಡನೆ ವೇದಿಕೆ ಹಂಚಿಕೊಂಡ ಇನ್ನಿತರ ಉದ್ಯಮಿಗಳೂ ಆರ್ಥಿಕ ಆಧಾರದ ಮೇಲೆ ಮೀಸಲಾತಿ ಕೊಡಬಹುದೇ ಹೊರತು ಜಾತಿ ಆಧಾರದ ಮೇಲಲ್ಲ ಎಂದರು.

ಇವತ್ತು ಮೀಸಲಾತಿಯು ಕಣ್ಣೊರೆಸುವ ರಾಜಕಾರಣದ ಒಂದು ಭಾಗ ಮಾತ್ರವಾಗಿ, ಮತ್ತೆ ಕೆಲವರಿಗೆ ಉಳಿವಿನ ರಾಜಕಾರಣದ ದಾರಿಯಾಗಿ, ತಲುಪಬೇಕಾದವರನ್ನು ಎಷ್ಟರಮಟ್ಟಿಗೆ ತಲುಪಿದೆ ಎಂಬ ವಿಮರ್ಶೆ ಅಗತ್ಯವಾಗಿರುವ ಹೊತ್ತಿನಲ್ಲೇ ರತನ್ ಟಾಟಾರಂತಹ ನವರತ್ನ ಕಂಪನಿಗಳ ಮಾಲೀಕರು ಮೀಸಲಾತಿ ನೀತಿ ಅಭಿವೃದ್ಧಿಗೆ ಮಾರಕ ಎನ್ನುತ್ತಿದ್ದಾರೆ. ಅದೇ ವೇಳೆ ಆಶಿಶ್ ನಂದಿ ದಲಿತ, ಒಬಿಸಿ ಸಮುದಾಯಗಳು ಈ ದೇಶದ ಅತಿ ಭ್ರಷ್ಟ ಸಮುದಾಯಗಳೆಂದು ಉದಾಹರಣೆ ಸಮೇತ ಸಮಾಜಶಾಸ್ತ್ರೀಯ ವ್ಯಾಖ್ಯೆ ನೀಡುತ್ತಾರೆ. ಅರವಿಂದ್ ಕೇಜ್ರಿವಾಲ್ ತಮ್ಮ ಭ್ರಷ್ಟಾಚಾರ ವಿರೋಧಿ ಚಳುವಳಿಯಲ್ಲಿ ರಾಜಕಾರಣ ಹಾಗೂ ಸಾರ್ವಜನಿಕ ಇಲಾಖೆ-ಯೋಜನೆಗಳ ಭ್ರಷ್ಟತೆಯನ್ನು ಮುಖ್ಯ ಗುರಿಯಾಗಿಸುವರೇ ಹೊರತು ಖಾಸಗಿ ವಲಯದ ಸಾವಿರಾರು ಕೋಟಿ ಭ್ರಷ್ಟ ವ್ಯವಹಾರವನ್ನು ಮುಟ್ಟುವುದೇ ಇಲ್ಲ. ರಾಜಕಾರಣಿಗಳ ಲಕ್ಷ ಕೋಟಿ ರೂಪಾಯಿಗಳ ಹಗರಣದ ನೇಪಥ್ಯದಲ್ಲಿರುವ ಕಾರ್ಪೊರೇಟ್ ಜನರ ಹೆಸರು ಬಹಿರಂಗಗೊಳ್ಳುವುದಿಲ್ಲ. 'ಅತಿಗಣ್ಯ' ಉದ್ಯಮಿಗಳ ಹೆಸರು ತನಿಖೆಯ ನಡುವೆ ಅಲ್ಲಿಲ್ಲಿ ಕೇಳಿಬಂದರೂ ಮಾಧ್ಯಮಗಳು, ಜನರು ಅವರನ್ನು ಮರೆತೇ ಬಿಡುತ್ತಾರೆ.

ಟಾಟಾ, ನಂದಿ, ಕೇಜ್ರಿವಾಲ್ – ಹಾಗೆ ನೋಡಿದರೆ ಈ ಮೂವರ ವರ್ತನೆ, ಮಾತು, ನೆಲೆ ಬೇರೆ ಬೇರೆ ಎಂದು ಕಾಣಿಸಿದರೂ ಈ ಮೂವರ ಒಟ್ಟು ಅಭಿಪ್ರಾಯ ಮೀಸಲಾತಿ ವಿರೋಧವೇ ಆಗಿದೆ. ವರ್ತಮಾನ ಸಮಾಜ ಎದುರಿಸುತ್ತಿರುವ ಅನಭಿವೃದ್ಧಿ, ಉದ್ದಿಮೆಯ ಅನುತ್ಪಾದಕತೆಗೆ ಸಮಾಜ ಕಲ್ಯಾಣ ನೀತಿಯೇ ಕಾರಣವೆನ್ನುವ ಮೂಲಕ ಮೀಸಲಾತಿ ಮೇಲಿನ ಅಸಹನೆ ಹೊರಬರುತ್ತದೆ. ಸತ್ಯಂ ರಾಜು ಕೋಟ್ಯಂತರ ವ್ಯವಹಾರ ನಡೆಸುವ ಖೊಟ್ಟಿ ಕಂಪನಿಯ ಒಡೆಯನಾಗಿ ಜೈಲು ಸೇರಿರುವುದು ವಂಚನೆಯೆನಿಸುವುದಿಲ್ಲ. ಈ ದೇಶದ ಅರೆಪಾಲು ಆಸ್ತಿ ಐದು ಬಂಡವಾಳಶಾಹಿ ಕುಟುಂಬಗಳ ಪಾಲಾಗಿರುವುದು ವಂಚನೆ ಎನಿಸುವುದಿಲ್ಲ. ಪೈಲಟ್‌ಗಳಿಗೆ ಸಂಬಳ ಕೊಡುವ ವಿಷಯ ಬಂದರೆ ಪಾಪರ್ ಚೀಟಿ ಎತ್ತಿ ತೋರಿಸಿ, ಐಷಾರಾಮಿ ಜೀವನ ನಡೆಸುತ್ತ ತಿಮ್ಮಪ್ಪನಿಗೆ ಕೆಜಿಗಟ್ಟಲೆ ಚಿನ್ನ ದಾನ ಮಾಡುವ ಮದ್ಯೋದ್ಯಮಿ ವಂಚಕನೆನಿಸುವುದಿಲ್ಲ. ಮೂರು ಕಾಸಿನ ರಾಜಧನಕ್ಕೆ ಈ ನೆಲದ ಖನಿಜ, ತೈಲವನ್ನು ಬರಿದುಮಾಡುತ್ತಿರುವ ಗಣಿಕಳ್ಳರು ವಂಚಕರೆನಿಸುವುದಿಲ್ಲ. ಬೊಕ್ಕಸಕ್ಕೆ ಬರಬೇಕಿದ್ದ ಲಕ್ಷಾಂತರ ಕೋಟಿ ಹಣವನ್ನು ಉದ್ಯಮಿಗಳಿಂದ ಕಿಕ್‌ಬ್ಯಾಕ್ ಪಡೆದು ಗುಳುಂ ಮಾಡುವ ಗಣ್ಯ ದಲ್ಲಾಳಿಗಳು ಅಭಿವೃದ್ಧಿಗೆ ಮಾರಕವೆನಿಸುವುದಿಲ್ಲ. ಸರ್ಕಾರಿ ಕಚೇರಿಗಳಲ್ಲಿ ಮೀಸಲಾತಿ ಮೇಲೆ ಬಂದಿರುವ ದಲಿತ, ಒಬಿಸಿ ನೌಕರರು ಮಾತ್ರ ಅತಿ ಭ್ರಷ್ಟರಾಗಿ, ಅಭಿವೃದ್ಧಿಗೆ ಮಾರಕವಾಗಿ ಕಾಣಿಸುತ್ತಾರೆ!

### ಖಾಸಗಿ ವಲಯದ ಮೀಸಲಾತಿ

ಯು.ಜಿ.ಸಿ. ಅಧ್ಯಕ್ಷರಾಗಿದ್ದ ಸುಖ್‌ದೇವ್ ಥೋರಟ್ ಒಂದು ಸ್ಟಿಂಗ್ ಆಪರೇಷನ್ ನಡೆಸಿದ್ದರು. ಒಂದೇ ಅನುಭವ, ವಿದ್ಯಾರ್ಹತೆಯುಳ್ಳ ಸರ್ಟಿಫಿಕೇಟ್‌ಗಳನ್ನು ಹಲವಾರು ಹೆಸರುಗಳಲ್ಲಿ ಸೃಷ್ಟಿಸಿ, ಖಾಸಗಿ ಸಾಫ್ಟ್‌ವೇರ್ ಕಂಪನಿಯೊಂದರ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿದರು. ಇಂಟರ್‌ವ್ಯೂಗೆ ಕರೆಯಲ್ಪಟ್ಟ ಹೆಸರುಗಳಲ್ಲಿ ೯೦% ಮೇಲ್ಜಾತಿ ಸರ್‌ನೇಮ್‌ಗಳುಳ್ಳ ಹೆಸರುಗಳೇ ಇದ್ದವು. ಇದು ತೋರಿಸುವ ಸತ್ಯವಿಷ್ಟೆ: ಅನುಭವ, ವಿದ್ಯೆಯ ಜೊತೆಗೆ ಜಾತಿಯೂ ಅರ್ಹತೆಯ ಲಿಸ್ಟಿನಲ್ಲಿ ಸೇರಿಕೊಂಡಿದೆ. ಖಾಸಗಿ ವಲಯದಲ್ಲಿ ಮೀಸಲಾತಿ ಎಂಬ ಪ್ರಶ್ನೆ ಹುಟ್ಟಿದ ದಿನದಿಂದ ಕಾರ್ಪೊರೇಟ್ ಜಗತ್ತು ಬೆಚ್ಚಿಬಿದ್ದು ಜಾತಿ ಆಧಾರದ ಮೇಲೆ ಉದ್ಯೋಗ ಕೊಡಲು ಸಾಧ್ಯವಿಲ್ಲ, ಸಾಮರ್ಥ್ಯದ ಮೇಲಷ್ಟೆ ಕೊಡಬಹುದು ಎಂಬ ವಾದವನ್ನು ಮುಂದಿಡುತ್ತ ಬಂದಿದೆ. ಅದು ಹುಡುಕುವ ಸಾಮರ್ಥ್ಯದ ನೆಲೆಯಲ್ಲಿ ಜಾತಿಯೂ ಇದೆಯೆನ್ನುವುದು ಗುಟ್ಟೇನಲ್ಲ.

ಮೀಸಲಾತಿಯೆಂದರೆ ಬಡತನ ನಿರ್ಮೂಲನಾ ಕಾರ್ಯಕ್ರಮವಲ್ಲ, ನೀತಿನಿಯಮಾವಳಿ ವಿಷಯವಲ್ಲ, ರಾಜಕೀಯ ಪಕ್ಷದ ಅಜೆಂಡಾ ಅಲ್ಲ, ಅದು ದಾನವಲ್ಲ. ಮೀಸಲಾತಿಯೆಂದರೆ ಪ್ರಾತಿನಿಧ್ಯ, ಸಮಾಜದ ಸಾಂವಿಧಾನಿಕ ಹೊಣೆ. ಅದನ್ನು ವ್ಯಕ್ತಿಯೊಬ್ಬನ ವೈಯಕ್ತಿಕ ಅರ್ಹತೆ ಆಧಾರದ ಮೇಲೆ ಕೊಡಲಾಗಿದ್ದರೂ ಅದನ್ನು ಕೊಟ್ಟಿರುವುದು ಆತ ಅವಕಾಶವಂಚಿತ ಸಮುದಾಯದಿಂದ ಬಂದಿರುವನೆಂಬ ಕಾರಣಕ್ಕೆ. ಆಡಳಿತದಲ್ಲಿ, ಸಮಾಜ ಬದುಕಿನಲ್ಲಿ ಇದುವರೆಗೆ ಪ್ರಾತಿನಿಧ್ಯ ಸಿಗದ ಸಮುದಾಯ ಪ್ರಾತಿನಿಧ್ಯ ಹೊಂದಲಿ ಎಂಬ ಕಾರಣಕ್ಕೆ. ಇದನ್ನು ಮೆರಿಟ್‌ವಾದಿಗಳೂ, ಮೀಸಲಾತಿವಾದಿಗಳೂ ಅರ್ಥಮಾಡಿಕೊಳ್ಳಬೇಕು.

## ಮೌನ ಕವಿತೆ

ಮೌನಕ್ಕೆ ಶರಣಾಗಿರುವೆ
ಮೌನವನ್ನೇ ಧರಿಸಿರುವೆ
ಮೂಡಿ ಎನ್ನುವರು ಅವರು
ನನಗೆ ಬೇಸರವಿಲ್ಲ
ಅವ ಸುಳ್ಳಾಡಿಲ್ಲ
ನನ್ನ- ನಿನ್ನ ಬಾಂಧವ್ಯಕ್ಕೆ
ಮಾತಿನ ಹಂಗು ಬೇಕೇ ?
ನೋಡು ! ಮಾತುಕಟ್ಟುವ ಹಠವಿಲ್ಲ
ಕವಿತೆಗೆ
ನನಗೂ ಅಷ್ಟೇ..!

**ಸ್ಮಿತಾ ಅಮೃತರಾಜ್ ಸಂಪಾಜೆ**
'ಹಸಿರು', ಅಂಚೆ ಬಾಲಂಬಿ, ಚೆಂಬು ಗ್ರಾಮ
ಮಡಿಕೇರಿ ತಾ।।, ಕೊಡಗು

ಸ್ವಾತಂತ್ರ್ಯಪೂರ್ವ ಕಾಲದಿಂದ ಇದ್ದ ಟಾಟಾ, ಬಿರ್ಲಾ, ಸಾರಾಭಾಯಿಯಂಥ ಸ್ವದೇಶೀ ಉದ್ಯಮಪತಿಗಳು ಒಂದು ಕಾಲದಲ್ಲಿ ಸ್ವಾತಂತ್ರ್ಯ ಹೋರಾಟದ ಕಾವಿಗೋ ಅಥವಾ ಕೊನೆಗೊಳ್ಳುತ್ತಿರುವ ವಸಾಹತುಶಾಹಿ ಆಡಳಿತದ ನಂತರ ತಮ್ಮ ನೆಲೆ ಭದ್ರಪಡಿಸಿ ಕೊಳ್ಳುವುದಕ್ಕೋ ಅಂತೂ ಗಾಂಧಿ ಮತ್ತಿತರ ಸಮಾಜ ಸುಧಾರಣಾಕಾರರೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದರು. ಅಂಥವರ ಧನಸಹಾಯದಿಂದಲೇ ಸಬರಮತಿ ಆಶ್ರಮವೂ, ಹಲವು ಸಮಾಜಕಲ್ಯಾಣ ಕಾರ್ಯಕ್ರಮಗಳೂ ನಡೆಯುತ್ತಿದ್ದವು. ಆದರೆ ರಾಷ್ಟ್ರೀಯ ಹೋರಾಟ ಉತ್ತುಂಗದಲ್ಲಿದ್ದಾಗಲೂ ಈ ಉದ್ಯಮಪತಿಗಳು ತಮ್ಮದೇ ದೇಶಬಂಧುಗಳಾದ ದಲಿತ, ಹಿಂದುಳಿದವರಿಗೆ ವಿಶೇಷ ರಿಯಾಯ್ತಿಯನ್ನೇನೂ ಕೊಟ್ಟಿರಲಿಲ್ಲ. ಮುಂಬಯಿಯ ಹತ್ತಿಗಿರಣಿಗಳನ್ನೇ ನೆನಪಿಸಿಕೊಳ್ಳುವುದಾದರೆ ನೂಲುವ ಕೆಲಸವನ್ನು ಮಾತ್ರ ದಲಿತರಿಗೆ ಕೊಡಲಾಗುತ್ತಿತ್ತು. ಹೆಚ್ಚು ದೈಹಿಕ ಶ್ರಮ, ಕಡಿಮೆ ಸಂಬಳ, ಹೆಚ್ಚು ಅಪಾಯವನ್ನೊಳಗೊಂಡ ಕೆಲಸವನ್ನಷ್ಟೇ ತಮಗೆ ಕೊಡಲಾಗಿದೆಯೆಂದು ಪ್ರತಿಭಟಿಸಿ ಆಗ ಮುಷ್ಕರವೂ ನಡೆದಿತ್ತು.

ಈ ಜಾತಿಪ್ರಜ್ಞೆ ಅರಮನೆ, ಗುರುಮನೆ, ಉದ್ದಿಮೆಗಳಲ್ಲಿ ಲಾಗಾಯ್ತಿನಿಂದ ಚಾಲ್ತಿಯಲ್ಲಿದೆ. ಅದು ಜಾತ್ಯತೀತ, ಪ್ರಜಾಪ್ರಭುತ್ವವಾದಿ, ಕಲ್ಯಾಣ ರಾಜ್ಯ ಭಾರತದಲ್ಲಿಯೂ ಮುಂದುವರಿದಿದೆ. ಖಾಸಗಿ ಕಂಪನಿಗಳು ಕಡಿಮೆ ಸಂಬಳದ ಕ್ಲಾಸ್ ೪, ಕ್ಲಾಸ್ ೩ ಕೆಲಸಗಳಿಗೆ ಯಾವ ಸಾಮರ್ಥ್ಯ, ಜಾತಿ ಮಾನದಂಡವಿಲ್ಲದೆ ಸಾವಿರಾರು ಜನರನ್ನು ನೇಮಿಸಿಕೊಂಡಾರು. ಆದರೆ ಆಯಕಟ್ಟಿನ, ನಿರ್ಧಾರ ತೆಗೆದುಕೊಳ್ಳುವ ಸ್ಥಳಗಳಲ್ಲಿ ತಂತಮ್ಮ ಜಾತಿಬಾಂಧವರನ್ನೋ, ನೆಂಟರಿಷ್ಟರನ್ನೋ ನೇಮಿಸಿಕೊಂಡು ವಿಶ್ವಾಸವಿಡುವುದು ಎಂದಿನಿಂದ ನಡೆದುಬಂದಿದೆ. ಅಂತಃಪುರದ ಕೋರ್‌ಗ್ರೂಪ್‌ನಲ್ಲಿ 'ಅನ್ಯ'ರಿರುವುದು ಅಷ್ಟೇನೂ ಸುರಕ್ಷಿತವಲ್ಲ ಎಂದೇ ಭಾವಿಸಲಾಗುತ್ತದೆ.

ಟಾಟಾ ಮತ್ತು ಅವರಂಥವರ ಒಡೆತನದ ಖಾಸಗಿ ಕಂಪನಿಗಳು ಬೇರೆಬೇರೆ ಬ್ರ್ಯಾಂಡ್‌ನೇಮುಗಳಲ್ಲಿ ತಾವು ತಯಾರಿಸುವ ಉತ್ಪನ್ನಗಳಿಗೆ ಬಹುವಾಗಿ ಅವಲಂಬಿಸಿರುವುದು ಈ ದೇಶದ ಕೆಳ, ಮಧ್ಯಮ ವರ್ಗದ ಜನರನ್ನೇ ಹೊರತು ಶಾಪಿಂಗ್‌ಗೆಂದು ಸಿಂಗಾಪುರಕ್ಕೆ ಹೋಗುವ, ಶೂಸು ತರಲು ಸ್ವಿಟ್ಜರ್ಲೆಂಡಿಗೆ ಹೋಗುವ ತಮ್ಮ ತುಟ್ಟಿ ರೂಪದರ್ಶಿಗಳನ್ನಲ್ಲ. ಅವರು ತಯಾರಿಸುವ ಸೋಪು, ಪೆನ್ನು, ಬಟ್ಟೆ, ತಿನಿಸು, ಟೀ, ಮೊಬೈಲು, ಫ್ರಿಜ್ ಇತ್ಯಾದಿ ಸಕಲ ವಸ್ತುಗಳನ್ನು ಖರೀದಿಸುವವರು ಇದೇ ಗ್ರಾಹಕರು. ಅವರು ಗ್ರಾಹಕರಾಗಿ ಸರ್ವಮಾನ್ಯರು, ಆದರೆ ಉದ್ಯೋಗ ಪಡೆಯಲು ಮಾತ್ರ ಅನರ್ಹರು !

ಅಮೆರಿಕದ ಎಷ್ಟೋ ಕಂಪನಿಗಳು ಕಾನೂನು ರೀತ್ಯಾ ಕಡ್ಡಾಯವಲ್ಲದಿದ್ದರೂ 'ಅಫರ್ಮೇಟಿವ್ ಆ್ಯಕ್ಷನ್' ಅನುಸರಿಸುತ್ತವೆ. ಸಮಾಜದ ಎಲ್ಲ ಜನವರ್ಗಗಳೂ ತಮ್ಮ ಉದ್ಯೋಗದಲ್ಲಿರುವುದು ಕಂಪನಿಯ ವಾತಾವರಣಕ್ಕೆ ಶೋಭೆ ಎಂದು ಆ ಕಂಪನಿಗಳು ಭಾವಿಸಿವೆ. ಖಚಿತ ಪ್ರೋತ್ಸಾಹ ಕಾರ್ಯಕ್ರಮವಾಗಿ ಮೀಸಲಾತಿಯನ್ನು ಸ್ವಯಂಸ್ಫೂರ್ತಿಯಿಂದ ಜಾರಿಯಲ್ಲಿಟ್ಟಿವೆ. ಮಿಕ್ಕೆಲ್ಲ ವಿಷಯಗಳಿಗೆ ಅಮೆರಿಕದ ಕಂಪನಿಗಳನ್ನು ತಮ್ಮ ರೋಲ್-ಮಾಡೆಲ್‌ಗಳಂತೆ ಪರಿಗಣಿಸುವ ಭಾರತೀಯ ಕಂಪನಿಗಳು, ಈ ವಿಷಯ ಕುರಿತು ಮೌನ ವಹಿಸುತ್ತವೆ. ಈ ದೇಶದ ಯಾವನೇ ಒಬ್ಬ ಬಿಲಿಯನಾಧಿಪತಿ ಇಂಥ ಉದಾರತೆ ತೋರಿದ ಉದಾಹರಣೆಯಿಲ್ಲ. ಸಾವಿರಾರು ಕೋಟಿ ರೂಪಾಯಿಗಳ ಆಸ್ತಿ ಸಂಗ್ರಹಿಸುವುದು ಬಡವಾತಿಬಡವರ ಈ ದೇಶದಲ್ಲಿ ತಪ್ಪು ಎಂದು ಅಂಥವರ ಆತ್ಮಸಾಕ್ಷಿಯಾಗಲೀ, ಘನ ಪರಂಪರೆಯಾಗಲೀ, ಅವರ ಆಧುನಿಕ ಆಧ್ಯಾತ್ಮಿಕ ಗುರುಗಳಾಗಲೀ ತಕರಾರು ಎತ್ತುವುದಿಲ್ಲ. ಖಾಸಗಿ ಉದ್ದಿಮೆಗಳು ಪ್ರಾಯಶ್ಚಿತ್ತ ರೂಪವೋ ಎಂಬಂತೆ ಅಷ್ಟಿಷ್ಟು ಹಣವನ್ನು ಅಮೃತಶಿಲೆಯ 'ಮಂದಿರ'ಗಳಿಗಾಗಿ, ಕ್ರಿಕೆಟ್‌ಗಾಗಿ, ಫೈವ್‌ಸ್ಟಾರ್ ಆಸ್ಪತ್ರೆಗಾಗಿ, ಒಂದಷ್ಟು ಎನ್‌ಜಿಒಗಳ ಸಾಕುತಂದೆಯಾಗಿ ಖರ್ಚುಮಾಡಿ ಸಮಾಜಸೇವೆಯೆಂಬ ಲಿಪ್ ಸರ್ವೀಸ್ ನೀಡಿ ಮುಗಿಸಿಬಿಡುತ್ತವೆ.

ಖಾಸಗಿ ಕಂಪನಿಗಳು ಮೀಸಲಾತಿ ವಿರೋಧಿಸಲು ಇರುವ ಈ ಮಾನಸಿಕ ತೊಡಕಿನ ಜೊತೆಗೆ ಇನ್ನಿತರ ಆಡಳಿತಾತ್ಮಕ-ರಾಚನಿಕ ಕಾರಣಗಳೂ ಇವೆ. ಖಾಸಗಿ ವ್ಯವಸ್ಥೆಯಲ್ಲಿ ಉದ್ಯೋಗ ಕೊಡುವುದಾಗಲೀ, ಕೈಬಿಡುವುದಾಗಲೀ ಯಾವ ನಿಯಮ ನಿಬಂಧನೆಗಳಿಗೊಳಪಡದೇ ಸಂಪೂರ್ಣ ಯಜಮಾನನ ಅಂಕೆಯಲ್ಲಿರುತ್ತದೆ. ಆ ಕಂಪನಿಗಳು ಲಾಭ, ನಷ್ಟ, ಅಗತ್ಯ, ಅನಿವಾರ್ಯಗಳಿಗೆ ತಕ್ಕಂತೆ ತಾತ್ಕಾಲಿಕ ನೇಮಕ, ಟರ್ಮಿನೇಷನ್ ಮಾಡುತ್ತವೆ. ರೋಸ್ಟರ್ ಅನುಸರಿಸಿ ನೇಮಕ ಮಾಡಬೇಕೆಂದಲ್ಲಿ ನೇಮಕದಲ್ಲಿ ನಿಯಮಿತತೆ ಇರಬೇಕಾಗುತ್ತದೆ. ಖಾಸಗಿ ಉದ್ಯೋಗಿಗಳಿಗೆ ವೇತನವೂ ಏಕರೂಪವಾಗಿರುವುದಿಲ್ಲ, ವೇತನ ತಾರತಮ್ಯ ಏಕೆನ್ನುವುದಕ್ಕೆ ಯಾವ ವಿವರಣೆಯೂ ಇರುವುದಿಲ್ಲ. ಎಷ್ಟೋ ಸಲ ಒಬ್ಬ ಪಡೆವ ವೇತನ ಮತ್ತೊಬ್ಬನಿಗೆ ತಿಳಿದಿರುವುದಿಲ್ಲ. ಉದ್ಯೋಗ ನೀಡಿಕೆ, ವೇತನ ವಿಷಯದಲ್ಲಿ ಸ್ಪಷ್ಟ ಹಾಗೂ ಪಾರದರ್ಶಕ ನೀತಿ ರೋಸ್ಟರ್ ಅಳವಡಿಸಿಕೊಳ್ಳಲು ಅತಿ ಅಗತ್ಯ. ಖಾಸಗಿ ಕಂಪನಿಗಳಿಗೆ ಇದು ಅತಿ ದುಬಾರಿ ಹಾಗೂ ಕಷ್ಟದ ಪ್ರಕ್ರಿಯೆಯಾಗಿ ಕಾಣಿಸುವುದರಿಂದ ಅವರು ರಾಚನಿಕ ಸ್ವರೂಪದ ಆಡಳಿತ ಬದಲಾವಣೆಗೆ ಒಪ್ಪುವುದಿಲ್ಲ.

ಟಾಟಾಗಳು ಮರೆತ ಮತ್ತೊಂದು ವಿಷಯವಿದೆ. ಮೀಸಲಾತಿ ಕೇವಲ ಜಾತಿವಾರು ದುರ್ಬಲರಿಗೆ ಕೊಡುವ ಪರಿಹಾರ ಯೋಜನೆಯಲ್ಲ, ಅದು ಗ್ರಾಮೀಣ ಪ್ರದೇಶ, ಪ್ರಾಂತ್ಯ, ಲಿಂಗ, ಜಾತಿ, ಭಾಷೆ, ಧರ್ಮ, ಆರ್ಥಿಕ ಸ್ಥಿತಿ, ಅಸಹಾಯಕರು, ಅಂಗವಿಕಲರು ಎಂಬಿತ್ಯಾದಿ ಹಲವು ಜನವರ್ಗಗಳ ಅಬಲತೆಗೆ, ಅಸಾಮರ್ಥ್ಯದ ಬೌದ್ಧಿಕೇತರ ಕಾರಣಗಳಿಗೆ ಪರಿಹಾರ ಸೂಚಿಸಲು ಬಳಕೆಯಾಗುವ ಒಂದು ಯೋಜನಾ ರೂಪ. ಮೀಸಲಾತಿ ಎಂದಕೂಡಲೇ ತಳಸಮುದಾಯಗಳು ಪಡೆಯುವ ಶಿಕ್ಷಣ, ಉದ್ಯೋಗ ಮೀಸಲಾತಿಯೇ ಮೊದಲು ನೆನಪಾಗುವ ಈ ದೇಶದಲ್ಲಿ ಕ್ರಿಯಾಶೀಲ ದುಡಿಮೆಯಲ್ಲಿ ತೊಡಗಿದ ಪ್ರತಿಯೊಬ್ಬನೂ ಒಂದಲ್ಲ ಒಂದು ಮೀಸಲಾತಿಯ ಫಲಾನುಭವಿಯೇ. ಹಾಗೆ ನೋಡಿದರೆ ಎಸ್.ಇ.ಝಡ್., ಏಕಗವಾಕ್ಷಿ ವ್ಯವಸ್ಥೆ, ಉದ್ಯಮ ಮೇಳ, ಐಟಿ ಮೇಳ, ಟ್ಯಾಕ್ಸ್ ಹಾಲಿಡೇಗಳಂಥ ರಿಯಾಯ್ತಿ ಕ್ರಮಗಳು ಬಲಾಢ್ಯರಿಗೆ ನೀಡುವ ಮೀಸಲಾತಿ. ಇದನ್ನು ಖಾಸಗಿ ಉದ್ಯಮದವರು ನೆನಪಿಡಬೇಕು.

ಮೀಸಲಾತಿಯೆಂದರೆ ಬಡತನ ನಿರ್ಮೂಲನಾ ಕಾರ್ಯಕ್ರಮವಲ್ಲ, ನೀತಿನಿಯಮಾವಳಿ ವಿಷಯವಲ್ಲ, ರಾಜಕೀಯ ಪಕ್ಷದ ಅಜೆಂಡಾ ಅಲ್ಲ, ಅದು ದಾನವಲ್ಲ. ಮೀಸಲಾತಿಯೆಂದರೆ ಪ್ರಾತಿನಿಧ್ಯ, ಸಮಾಜದ ಸಾಂವಿಧಾನಿಕ ಹೊಣೆ. ಅದನ್ನು ವ್ಯಕ್ತಿಯೊಬ್ಬನ ವೈಯಕ್ತಿಕ ಅರ್ಹತೆ ಆಧಾರದ ಮೇಲೆ ಕೊಡಲಾಗಿದ್ದರೂ ಅದನ್ನು ಕೊಟ್ಟಿರುವುದು ಆತ ಅವಕಾಶವಂಚಿತ ಸಮುದಾಯದಿಂದ ಬಂದಿರುವನೆಂಬ ಕಾರಣಕ್ಕೆ. ಆಡಳಿತದಲ್ಲಿ, ಸಮಾಜ ಬದುಕಿನಲ್ಲಿ ಇದುವರೆಗೆ ಪ್ರಾತಿನಿಧ್ಯ ಸಿಗದ ಸಮುದಾಯ ಪ್ರಾತಿನಿಧ್ಯ ಹೊಂದಲಿ ಎಂಬ ಕಾರಣಕ್ಕೆ. ಇದನ್ನು ಮೆರಿಟ್‌ವಾದಿಗಳೂ, ಮೀಸಲಾತಿವಾದಿಗಳೂ ಅರ್ಥಮಾಡಿಕೊಳ್ಳಬೇಕು.

* * *

ಹೆಚ್ಚುಕಮ್ಮಿ ಟಾಟಾ ಇಲ್ಲಿ ಹೀಗೆ ಹೇಳುವ ಹೊತ್ತಿಗೆ ಅಲ್ಲಿ ಆಶಿಶ್ ನಂದಿ ಜೈಪುರ ಸಾಹಿತ್ಯ ಸಮ್ಮೇಳನದಲ್ಲಿ, ''ಎಸ್ಸಿ, ಎಸ್ಟಿ ಮತ್ತು ಒಬಿಸಿಗಳು ಇಂದು ಈ ದೇಶದ ಅತ್ಯಂತ ಭ್ರಷ್ಟ ಸಮುದಾಯಗಳು. ಇವರು ಮೇಲ್ಜಾತಿ ವರ್ಗಗಳ ಅನುಕರಣೆಯಲ್ಲಿ ನಿಪುಣತೆ ಸಾಧಿಸಿದ್ದಾರೆ. ಭ್ರಷ್ಟಾಚಾರ ಪ್ರಜಾಪ್ರಭುತ್ವಕ್ಕೆ ದಾರಿ ಮಾಡಿಕೊಟ್ಟಿದೆ. ಇದರ ಅನುಕರಣೆಯನ್ನು ದಲಿತರು ಕ್ರಿಯೇಟಿವ್ ಆಗಿ ಮಾಡುತ್ತಿದ್ದಾರೆ'' ಎಂಬ ಹೇಳಿಕೆ ನೀಡಿ ಮೀಸಲಾತಿ ವಿರೋಧಿ ವಾದಕ್ಕೆ ಇನ್ನೊಂದು ಬೌದ್ಧಿಕ ನೆವ ಸಿಕ್ಕಿಸಿದರು. ಅವರ ಈ ಮೊದಲ ನಿಲುವುಗಳು ಎಷ್ಟೇ ಪ್ರಗತಿಪರವೂ, ಮೀಸಲಾತಿ ಪರವೂ ಆಗಿರಬಹುದು.

ಆದರೆ ಭ್ರಷ್ಟತೆಗೆ ವರ್ಗಚಹರೆಯ ಬದಲು ಜಾತಿಚಹರೆ ಅಂಟಿಸಿದ್ದು ಸರಿಯಲ್ಲ. ಅಷ್ಟಕ್ಕೇ ನಿಲ್ಲದೆ ತನ್ನ ಹೇಳಿಕೆಗೆ ತಾನು ಬದ್ಧ ಎಂದ ಅವರ ಬೆಂಬಲಕ್ಕೆ ದೇಶದ ಪ್ರಮುಖ ಮೀಡಿಯಾ, ಚಿಂತಕರು ನಿಂತಿದ್ದು; ಅವರ ಸ್ನೇಹಿತರು ದಲಿತರು ಪವಿತ್ರ ಗೋವಿನಂತೆ ಪರಿಗಣಿಸಲ್ಪಟ್ಟಿದ್ದಾರೆ ಎಂದು ಹೇಳಿಕೆ ನೀಡಿದ್ದು – ಇವೆಲ್ಲವೂ ವಿಷಯವನ್ನು ಇನ್ನಷ್ಟು ಜಟಿಲಗೊಳಿಸಿದವು.

ಮೀಸಲಾತಿಯಿಂದ ಬಂದ ದಲಿತ, ಒಬಿಸಿ ನೌಕರರು ಪರಿಶುದ್ಧರು ಎಂದು ಸಾಧಿಸಬೇಕಿಲ್ಲ. ಭ್ರಷ್ಟರಾದರೂ ದಲಿತ ಎಂಬ ಕಾರಣಕ್ಕೆ ಅಧಿಕಾರಿಗಳಿಗೆ ವಿನಾಯ್ತಿ ಸಿಗಬೇಕೆಂದು ಯಾರೂ ಕೇಳುತ್ತಿಲ್ಲ. ಅಂಥವರ ವಿರುದ್ಧ ಉಳಿದವರೊಡನೆ ದಲಿತರೂ ದನಿಯೆತ್ತಬೇಕು. ಭ್ರಷ್ಟ ಸ್ವಜಾತಿ ಅಧಿಕಾರಿಗಳಿಂದ ಶೋಷಿತ ಸಮುದಾಯ ಕಳಚಿಕೊಳ್ಳಬೇಕು. ಆದರೆ ಭ್ರಷ್ಟಾಚಾರವನ್ನು ವಿರೋಧಿಸುವ ಭರದಲ್ಲಿ ಮೀಸಲಾತಿ ಪಡೆದು ಮೇಲೆ ಬಂದ ದಲಿತ, ಒಬಿಸಿ ಅಧಿಕಾರಿಗಳು ಹೆಚ್ಚು ಭ್ರಷ್ಟರು ಎಂದು ಹೇಳಿದರೆ ಮೀಸಲಾತಿ ನೀತಿಯೇ ಅಪಾಯಕಾರಿ, ಸಮಾಜ ಕಂಟಕ ಎಂದು ಹೇಳಿದಂತಾಗುತ್ತದೆ. ಅಷ್ಟೇ ಅಲ್ಲ ಭ್ರಷ್ಟರಲ್ಲದ, ಆದರೆ ನಿಜವಾಗಿ ಮೀಸಲಾತಿಯಂಥ ಕ್ರಮ ಅತ್ಯವಶ್ಯವಾಗಿರುವ ಕೋಟ್ಯಂತರ ಜನರ ಅವಕಾಶವನ್ನು ವಂಚಿಸಿದಂತಾಗುತ್ತದೆ.

ಈ ದೇಶದ ನೆಲ, ಜಲ, ಸಂಪತ್ತು ಪ್ರತಿಯೊಬ್ಬನಿಗೂ ಸೇರಿದ್ದು. ಆದರೆ ಅದನ್ನು ತನ್ನದಾಗಿ ಬಳಸಿಕೊಳ್ಳಲಾಗದವನಿಗೆ ಕೊಡಬೇಕಾದ ಪಾಲನ್ನು ತೃಣಮಾತ್ರ ಸಂದಾಯ ಮಾಡುವ ಕಾರ್ಯಕ್ರಮ ಮೀಸಲಾತಿ. ಅದರಿಂದ ವ್ಯಕ್ತಿಯೊಬ್ಬ ಮೇಲ್ಚಲನೆ ಪಡೆಯುತ್ತಾನಲ್ಲದೆ ಅವನ ಸಮುದಾಯ ಮೇಲ್ಚಲನೆ ಪಡೆಯುವುದಿಲ್ಲ. ಮೀಸಲಾತಿಯಾಗಲೀ, ಉದ್ಯೋಗವಾಗಲೀ ಯಾರದೇ ಆಸ್ತಿಯಲ್ಲ, ಅದು ಅರ್ಹತೆಯಿರುವವರು ಪಡೆಯಬೇಕಾದದ್ದು. ಮೀಸಲಾತಿ ಕೇವಲ ಸರ್ಕಾರ ಮತ್ತು ಶೋಷಿತರ ನಡುವಿನ ಅಂಡರ್‌ಸ್ಟ್ಯಾಂಡಿಂಗ್ ಅಲ್ಲ. ಅದರಲ್ಲಿ ಸಮಾಜದ ಎಲ್ಲ ಸಮುದಾಯಗಳೂ ಸಹ ಭಾಗಿಗಳಾಗಬೇಕಾದ ಅಗತ್ಯವಿದೆ.

ಎಂದೇ ಸಾಮಾಜಿಕ ಕಾಳಜಿಯುಳ್ಳ ಪ್ರತಿಯೊಬ್ಬರೂ ಮೀಸಲಾತಿ ಕುರಿತು ಅಂಕಿಅಂಶಗಳೊಂದಿಗೆ ವಸ್ತುನಿಷ್ಠವಾಗಿ ಯೋಚಿಸುವುದು ಅತ್ಯಂತ ಅವಶ್ಯವಿದೆ. ಜಾಗತೀಕರಣ ಹಾಗೂ ಯಾಂತ್ರೀಕರಣದ ಫಲವಾಗಿ ಸಾರ್ವಜನಿಕ ವಲಯದ ಉದ್ಯೋಗಾವಕಾಶ ದಿನದಿಂದ ದಿನಕ್ಕೆ ಕುಸಿಯುತ್ತಿರುವಾಗ ಮೂಗಿಗೆ ತುಪ್ಪ ಸವರಿದಷ್ಟೇ ಪ್ರಯೋಜನಕಾರಿಯಾದ ಈ ನೀತಿಯಿಂದ ದಲಿತರು ಪಡೆದುಕೊಳ್ಳುತ್ತಿರುವುದೆಷ್ಟು, ಕಳೆದುಕೊಳ್ಳುತ್ತಿರುವುದು ಏನು ಎಂಬ ಚರ್ಚೆ ಆಗಬೇಕಿದೆ. ಇನ್ನೂ ಸಂಘಟಿತರಾಗದ, ಶಿಕ್ಷಣ-ಮೀಸಲಾತಿ- ಪ್ರಾತಿನಿಧ್ಯ ಈ ಎಲ್ಲದರ ಅರಿವೇ ಇಲ್ಲದೆ ದಲಿತರಲ್ಲಿ ದಲಿತರಾದ ಕೋಟ್ಯಂತರ ಅಲೆಮಾರಿ ಸಮುದಾಯಗಳಿಗೆ ಮೀಸಲಾತಿ ತಲುಪಿಸುವುದು ಹೇಗೆಂದು ಯೋಚಿಸಬೇಕಿದೆ. ಅಸ್ಮಿತೆಯ ರಾಜಕಾರಣ ಸಮುದಾಯ – ಚಳುವಳಿಗಳನ್ನು ಇನ್ನಷ್ಟು ಒಡೆಯುತ್ತಿರುವಾಗ ಸಮುದಾಯಕ್ಕೆ ಮುಳುವಾಗದಂತೆ ಒಳಮೀಸಲಾತಿಯ ಬೇಡಿಕೆ, ಹೋರಾಟಗಳನ್ನು ಕಟ್ಟಬೇಕಾಗಿದೆ. ಮೀಸಲಾತಿಯ ಮೇಲೇ ಅವಲಂಬಿತರಾಗದೆ ಸ್ವಾವಲಂಬನೆಯ, ಆತ್ಮಗೌರವದ ಬದುಕಿಗೆ ಹೊಸ ದಾರಿಗಳನ್ನು ಅರಸುವುದೂ ಇಂದಿನ ಅವಶ್ಯಕತೆಯಾಗಿದೆ. ಇದು ವ್ಯಕ್ತಿಯ, ಸಮುದಾಯದ ನೈತಿಕತೆಯನ್ನಷ್ಟೇ ಅಲ್ಲ, ಸಮಾಜದ ನೈತಿಕತೆಯ ದಿಕ್ಕನ್ನೂ ನಿರ್ಧರಿಸಬಲ್ಲುದಾಗಿದೆ.

ಇದೇ ಹೊತ್ತಿಗೆ ಕೆಲವು ಪ್ರಶ್ನೆಗಳೇಳುತ್ತವೆ :

* ದಲಿತರು ಉದ್ಯಮಪತಿಗಳಾಗಬೇಕು ಹಾಗೂ ಉದ್ಯೋಗದಾತರಾಗಬೇಕು ಎಂದು ಪ್ರತಿಪಾದಿಸುವ ಚಿಂತಕರು ದಲಿತ ಬಂಡವಾಳಶಾಹಿಗಳನ್ನು ಬೆಂಬಲಿಸುತ್ತಾರೆ. ಅವರು ತಮ್ಮ ಉದ್ದಿಮೆಗಳಲ್ಲಿ ಕೇವಲ ದಲಿತರಿಗಷ್ಟೇ ಉದ್ಯೋಗ ನೀಡಿದ್ದಾರೆಯೇ ? ಮೀಸಲಾತಿ ಕುರಿತು ಅವರ ನಿಲುವುಗಳೇನು ?
* ಎಲ್ಲಿಯವರೆಗೆ ಮೀಸಲಾತಿಯನ್ನು ನೆಚ್ಚಿ ಸಮಾಜ ಕಲ್ಯಾಣ ಸಾಧಿಸಬಹುದು ? ಅದರಾಚೆಗೂ ಸಮುದಾಯ ಯೋಚಿಸುವಂತೆ ಮಾಡಲು ಯಾವ ಕಾರ್ಯಕ್ರಮ ಹಾಕಿಕೊಳ್ಳಲಾಗಿದೆ ? ಪ್ರಸ್ತುತ ಚಾಲ್ತಿಯಲ್ಲಿರುವ ಚೌಕಟ್ಟಿನಾಚೆ ಸಮಾಜ ಕಲ್ಯಾಣ ಕಾರ್ಯಕ್ರಮ ಕುರಿತು ಯೋಚಿಸಲು ಸಾಧ್ಯವೆ ?
* ಶಿಕ್ಷಣ ಹಕ್ಕು ಎನ್ನುವ ಕಾಲದಲ್ಲೂ ಉನ್ನತ ಶಿಕ್ಷಣ ಪಡೆಯಲು ಶೋಷಿತರ ಮಕ್ಕಳಿಗೆ ಪೂರಕ ಶಿಕ್ಷಣ ವ್ಯವಸ್ಥೆ ಇದೆಯೆ ?
* ಅಲೆಮಾರಿಗಳ ಬದುಕು, ಹಕ್ಕಿಗಾಗಿ ಹೋರಾಟ ರೂಪಿಸುವಲ್ಲಿ, ಸಮುದಾಯ ಕೇಂದ್ರಿತ ಮೀಸಲಾತಿ ನೀತಿ ರೂಪಿಸುವಂತೆ ಮಾಡುವಲ್ಲಿ ಕೈಜೋಡಿಸಬೇಕಾದದ್ದು ದಲಿತರನ್ನೊಳಗೊಂಡಂತೆ ಎಲ್ಲರ ನೈತಿಕ ಹೊಣೆಯಲ್ಲವೆ ?

✶ ✶ ✶

ಇತಿಹಾಸವೆಂದರೆ ಆಳುವ ವರ್ಗ ಪುರೋಹಿತಶಾಹಿ ಹಾಗೂ ವ್ಯಾಪಾರೀ ವರ್ಗದೊಂದಿಗೆ ಅಧಿಕಾರಕ್ಕಾಗಿ ನಡೆಸಿದ ನಿರಂತರ ಸೆಣಸಾಟ. ಬಂಡವಾಳ ಉಳ್ಳವರು ತಮ್ಮ ಹಿತಾಸಕ್ತಿಗಾಗಿ ಯುದ್ಧಗಳಿಗೆ ಕಾರಣರಾದ, ಸಾಮ್ರಾಜ್ಯಗಳನ್ನು ನಾಶಮಾಡಿದ, ರಾಜರನ್ನು ದಿವಾಳಿಯೆಬ್ಬಿಸಿದ



ಉದಾಹರಣೆಗಳು ಇತಿಹಾಸದುದ್ದಕ್ಕೂ ಸಿಗುತ್ತವೆ. ರಾಜಪ್ರಭುತ್ವ ಅಳಿದು ಸಮಾನತೆಯ ಆಶಯ ದಟ್ಟವಾಗಿರುವ ಈ ಕಾಲದಲ್ಲೂ ಬಂಡವಾಳಶಾಹಿ ಮನಃಸ್ಥಿತಿ ಹಾಗೇ ಮುಂದುವರಿದಿದೆ. ವ್ಯಾಪಾರೀ ಹಿತಾಸಕ್ತಿ ಬಂಡವಾಳವನ್ನು ಕ್ರೋಡೀಕರಣ ಮಾಡಿಕೊಳ್ಳುವತ್ತ, ಸಂಪನ್ಮೂಲ ಸಂಗ್ರಹಿಸುವತ್ತ, ಮಾರುಕಟ್ಟೆ ವಿಸ್ತರಿಸುವತ್ತ ತನ್ನ ದೃಷ್ಟಿ ನೆಟ್ಟಿರುತ್ತದೆಯೇ ಹೊರತು ಸಾಮಾಜಿಕ ನ್ಯಾಯ ಮತ್ತು ಸಮಾನತೆ ಎಂದೆಂದೂ ಅದರ ಆದ್ಯತೆಯಾಗಿರುವುದಿಲ್ಲ. ಅಸಮಾನತೆ, ತಾರತಮ್ಯದ ನೆಲೆಗಟ್ಟಿನ ಮೇಲೆ ಬಂಡವಾಳವಾದ ನಿಂತಿರುವುದು. ಸಮಾನತೆಯ ಎಲ್ಲ ಆಶಯಗಳನ್ನು, ಪ್ರಯತ್ನಗಳನ್ನು ಅದು ವಿವಿಧ ರೂಪ, ಕ್ರಮಗಳಲ್ಲಿ ನಾಶಮಾಡಲು ಯತ್ನಿಸುತ್ತದೆ. ಮೀಸಲಾತಿ ವಿರೋಧವನ್ನೂ ಜ್ಞಾನವನ್ನು ಕೊಂಡುಕೊಳ್ಳುವ, ತನ್ಮೂಲಕ ತನ್ನ ಬಂಡವಾಳ ಹೆಚ್ಚಿಸಿಕೊಳ್ಳುವ ಅದರ ಪ್ರಯತ್ನದ ಒಂದು ಭಾಗವಾಗಿಯೇ ಗ್ರಹಿಸಬೇಕಾಗುತ್ತದೆ.

ಅಂಬೇಡ್ಕರ್ ಜೊತೆಗೆ ಮಾರ್ಕ್ಸ್, ಗಾಂಧಿ, ಲೋಹಿಯಾ ನೆನಪಾಗುತ್ತಿದ್ದಾರೆ. ದೇವನೂರು ಒಮ್ಮೆ ನಮಗೆಂತಹ ಕರೆನ್ಸಿ ಬೇಕಾಗಿದೆ ಎಂದು ಕೇಳಿದ್ದರು. ಈ ಎಲ್ಲ ವಾದ, ಲೋಹಗಳ ಕರಗಿಸಿ ಮಾಡಿದ ಮಿಶ್ರಲೋಹದ ಒಂದು ನಾಣ್ಯ ಚಲಾವಣೆಗೆ ಬರುವುದು ಅವಶ್ಯವಾಗಿದೆಯೆಂದೂ, ಅದನ್ನು ಮಾಡಬಲ್ಲ ಆಚಾರಿ ಯಾರೆಂಬುದೇ ಇವತ್ತಿನ ಪ್ರಶ್ನೆಯೆಂದೂ ಹೇಳಿದ್ದರು. ಸಮಸಮಾಜದ ಕನಸಿನ ಮಾರ್ಕ್ಸ್‌ವಾದಿ ನೆಲವನ್ನು ಉತ್ತು, ರಂಟೆ ಹೊಡೆದು ಹದಗೊಳಿಸಬೇಕಾದವರು ಗಾಂಧಿ ಮತ್ತು ಕೆಲಮಟ್ಟಿಗೆ ಲೋಹಿಯಾ. ಬೀಜವಾಗಿ ಬಿತ್ತಲ್ಪಡಬೇಕಾದವರು ಅಂಬೇಡ್ಕರ್. ಎಂದೇ ಈ ಬಿತ್ತುವ, ಉತ್ತುವ ಕೆಲಸಗಳು ಉತ್ತಮ ಬೀಜದೊಂದಿಗೆ ಸೇರಿ ಸಹಬಾಳ್ವೆಯ ಮಳೆ ಸುರಿದಾಗ ಭೂಮಿ ಹಸಿರಾದೀತು, ಹಸಿದ ಜೀವಗಳೂ ನೆಮ್ಮದಿ ಪಡೆದಾವು.

**ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕಾವಲಕ್ಕಿ ಅಂಚೆ
ಹೊನ್ನಾವರ ತಾಲೂಕು, ಉತ್ತರ ಕನ್ನಡ ಜಿಲ್ಲೆ - ೫೮೧ ೩೩೧



# ಕಣ್ತೆರೆಸಿದ ಗುರು ಎಂ.ಜೆ.ಎಸ್.

ವಿದ್ವಾನ್ ಎಂ. ಜೆ. ಶ್ರೀನಿವಾಸ ಅಯ್ಯಂಗಾರ್ ಎನ್ನುವ ಹೆಸರು ಕೇವಲ ಒಂದು ಹೆಸರಲ್ಲ, ಬದುಕಿಗೆ ಬಹುಮುಖ್ಯವಾದ ಮೌಲ್ಯಗಳ ಒಂದು ಸಂಗಮ. ಯಾವೊಂದು ಮೌಲ್ಯವನ್ನೂ ಎಂದೂ ಎಲ್ಲಿಯೂ ಮಾತನಾಡದೆ ಅವುಗಳನ್ನು ಸ್ವತಃ ತಾವೇ ಬದುಕಿ ತೋರಿಸಿಕೊಟ್ಟವರು ಎಂ.ಜೆ.ಎಸ್. ಹಾಗೆ ಬದುಕುವಾಗಲೂ, ನೋಡಿ ನಾನು ಹೀಗೆ ಬದುಕುತ್ತಿದ್ದೇನೆ ಎಂದು ಬೀಗಿದವರೂ ಅಲ್ಲ. ಬದುಕಿನ ಸಹಜ ಲಯವೇ ಅದು ಎನ್ನುವಂತೆ ತುಂಬ ಸ್ವಾಭಾವಿಕವಾಗಿ ಇರುವ ಧೀಮಂತ ವ್ಯಕ್ತಿ.

ಎಂ.ಜೆ.ಎಸ್. ಮೊದಲು ಪ್ರಾರಂಭಿಸಿದ್ದು ಹಾಡುಗಾರಿಕೆಯನ್ನು. ಲಯ ಬಾಲ್ಯದಿಂದಲೇ ಇವರ ಉಸಿರಿನಲ್ಲಿ ಸೇರಿಹೋಗಿತ್ತು. ಇವರ ತಂದೆ ತಾವು ನುಡಿಸುವಾಗ ಸೈಕಲ್ಲಿನ ಬೆಲ್ಲನ್ನು ಎಳೆಯ ಶ್ರೀನಿವಾಸನ ಕೈಲಿ ಕೊಟ್ಟು, ''ಇದನ್ನು ನಾನು ನುಡಿಸುವುದಕ್ಕೆ ಸರಿಯಾಗಿ ಬಾರಿಸುತ್ತಿರು'' ಎಂದು ಹೇಳುತ್ತಿದ್ದರಂತೆ. ಆದರೆ ಟಾನ್ಸಿಲ್ಸ್‌ನ ತೊಂದರೆಯಿಂದಾಗಿ ಹಾಡಿಕೆ ಕಷ್ಟವಾದಾಗ ಎಂ.ಜೆ.ಎಸ್. ಅವರು ವೀಣೆಯತ್ತ ಹೊರಳಿದರು. ಇದು ಸಂಗೀತಲೋಕಕ್ಕೆ ಒದಗಿದ ಭಾಗ್ಯವೆಂದೇ ಹೇಳಬಹುದು. ಏಕೆಂದರೆ ಅವರಿಂದು ವೀಣಾವಾದನದಲ್ಲಿ ಒಂದು ವಿಶಿಷ್ಟ ಶೈಲಿ ಮತ್ತು ಒಂದು ಗಟ್ಟಿ ಪರಂಪರೆಯನ್ನೇ ಸೃಷ್ಟಿಸಿದ್ದಾರೆ.

ಆದರೆ ವೀಣೆಯ ಕಲಿಕೆಗಾಗಿ ಅವರು ನಡೆದದ್ದು ಮಾತ್ರ ಹೂವಿನ ಹಾದಿಯಲ್ಲ. ವೈಣಿಕ ಪ್ರವೀಣ ವೆಂಕಟಗಿರಿಯಪ್ಪನವರ ಬಳಿ ಕಲಿಯುವುದಕ್ಕಾಗಿ ಮೈಸೂರಿಗೆ ಬಂದ ಎಂ.ಜೆ.ಎಸ್. ಸವೆಸಿದ ಹಾದಿ ಬಹು ದುರ್ಗಮ. ಗುರುಗಳ ಮನೆಯ ಬಳಿಯೇ ಒಂದು ಕೋಣೆ ಮಾಡಿಕೊಂಡು, ಪರಕಾಲ ಮಠದಲ್ಲಿ ಊಟ ಮಾಡಿಕೊಂಡು ಗುರುಗಳ ಬಳಿ ಪಾಠ ಕಲಿಯುತ್ತಿದ್ದರು. ಒಂದೆಡೆಯಿಂದ ಇನ್ನೊಂದೆಡೆಗೆ ನಡಿಗೆಯಲ್ಲೇ ಸಾಗಬೇಕಿತ್ತು. ಆದರೇನಂತೆ, ನಡೆಯುತ್ತಿದ್ದ ಹೊತ್ತೆಲ್ಲಾ ಅಂದಂದು ಕಲಿತ ಪಾಠದ ಮನನಕ್ಕಾಗಿ, ಕಛೇರಿಯಲ್ಲಿ ಕೇಳಿದ್ದ ಅಪರೂಪದ ಸಂಚಾರಗಳನ್ನು ಮತ್ತು ಮುಕ್ತಾಯಗಳನ್ನು ಮತ್ತೆಮತ್ತೆ ಹೇಳಿಕೊಂಡು ನೆನಪಿಟ್ಟುಕೊಳ್ಳುವುದಕ್ಕಾಗಿ ಮತ್ತು ಸ್ವತಃ ತಾವೇ ಹೊಸ ಸಂಚಾರಗಳನ್ನು ಕಲ್ಪಿಸಿಕೊಳ್ಳುವುದಕ್ಕೆ ಮೀಸಲಾಗಿತ್ತು. ಹೀಗೆ ಸಂಗೀತದ ಜೊತೆ ಬದುಕನ್ನೂ ಕಲಿತರು. ಈ ಹೊತ್ತು ಕಲಿಸಿದ ಕಷ್ಟ ಸಹಿಷ್ಣುತೆ, ತಾಳ್ಮೆ, ಸಮಾಧಾನ, ಶ್ರಮಜೀವನ, ಸಂಯಮ, ನೆನಪಿಟ್ಟುಕೊಳ್ಳುವಿಕೆ, ಧನಾತ್ಮಕ ಚಿಂತನೆ ಮುಂತಾದ ಮೌಲ್ಯಗಳು ಇವರ ಬದುಕನ್ನೇ ರೂಪಿಸಿ ಇವರ ವ್ಯಕ್ತಿತ್ವಕ್ಕೆ ಮೆರಗು ನೀಡಿದ ಮೌಲ್ಯಗಳಾದವು. ವೆಂಕಟಗಿರಿಯಪ್ಪನವರ ಬಳಿ ಕಲಿಯುವಾಗ ವೀಣಾ ದೊರೆಸ್ವಾಮಿ ಅಯ್ಯಂಗಾರರು ಮತ್ತು ಆರ್. ಎನ್. ದೊರೆಸ್ವಾಮಿಯವರು ಇವರ ಸಹಪಾಠಿಗಳಾಗಿದ್ದರು.

ಮೈಸೂರು ವೀಣಾ ಶೈಲಿಯನ್ನು ವೆಂಕಟಗಿರಿಯಪ್ಪನವರ ಗರಡಿಯಲ್ಲಿ ಮೈಗೂಡಿಸಿಕೊಂಡ ಎಂ.ಜೆ.ಎಸ್. ಅಷ್ಟಕ್ಕೇ ನಿಲ್ಲದೆ ಮತ್ತಷ್ಟು ಅಂಶಗಳನ್ನು ಅದಕ್ಕೆ ಹದವಾಗಿ ಬೆರೆಸಿಕೊಂಡು ತಮ್ಮದೇ ಆದ 'ಎಂ.ಜೆ.ಎಸ್. ಶೈಲಿ'ಯನ್ನು ರೂಪಿಸಿಕೊಂಡು ಶೇಷಣ್ಣನವರ ಪರಂಪರೆಯನ್ನು ಮತ್ತಷ್ಟು ಬೆಳೆಸಿದರು. ವಾದ್ಯದ ತಂತ್ರಗಾರಿಕೆ ಮತ್ತು ವಾದ್ಯದ ಸಾಧ್ಯತೆಗಳತ್ತ ಹೆಚ್ಚು ಗಮನಹರಿಸುತ್ತಿದ್ದ ಮೈಸೂರು ಶೈಲಿಗೆ ಗಾಯನದ ಕೆಲವು ನವುರಾದ ಸೂಕ್ಷ್ಮಗಮಕಗಳನ್ನು ತರುವ ಮೂಲಕ ಎಂ.ಜೆ.ಎಸ್. ಅವರು ವೀಣೆಯಲ್ಲಿ ವಿಭಿನ್ನ ಬಗೆಯ ಪರಿಷ್ಕರಣವನ್ನು ಸಾಧಿಸಿಕೊಂಡರು. ಎಂ.ಜೆ.ಎಸ್. ಶಿಷ್ಯರೊಬ್ಬರು ವೀಣೆ ನುಡಿಸಿದಾಗ ವೀಣೆಯ ಫಿಂಗರಿಂಗ್ ಎಂದರೆ ಹೀಗಿರಬೇಕು ಎಂದು ಪದ್ಮವಿಭೂಷಣ ಟಿ. ಎನ್. ಶೇಷಗೋಪಾಲನ್ ಅವರು ಉದ್ಗರಿಸಿದ್ದರು. ಅರಿಯಾಕುಡಿ, ಅಲತ್ತೂರ್ ಹಾಗೂ ಜಿ.ಎನ್.ಬಿ. ಅವರ ಬಾನಿಯಿಂದ ಪ್ರಭಾವಿತರಾಗಿದ್ದ ಎಂ.ಜೆ.ಎಸ್. ಅವರು ಅವರ ಹಾಡಿಕೆಯ ಸೂಕ್ಷ್ಮಗಳನ್ನೂ ತಮ್ಮ ವಾದನಶೈಲಿಗೆ ಅಳವಡಿಸಿಕೊಂಡಿದ್ದರು. ಕೃತಿಪ್ರಧಾನವಾಗಿರುವ ಕರ್ನಾಟಕ ಸಂಗೀತದಲ್ಲಿ ಯಾವುದೇ ಕೃತಿಯನ್ನಾಗಲಿ ಯಾವ

**ಪ್ರೊ॥ ಶೈಲಜಾ ವೇಣುಗೋಪಾಲ್**

ಗತಿಯಲ್ಲಿ ಎತ್ತಿಕೊಂಡರೆ ಸೊಗಸಾಗಿರುತ್ತದೆ ಎನ್ನುವುದನ್ನು ಅರಿಯಾಕುಡಿ ಮತ್ತು ಜಿ.ಎನ್.ಬಿ. ಅವರಿಂದ ತಾನು ಗ್ರಹಿಸಿಕೊಂಡೆ ಎನ್ನುವುದನ್ನು ಹಲವು ಸಂದರ್ಭಗಳಲ್ಲಿ ಹೇಳಿದ್ದರು. ಮೆಟ್ಟಿಲುಗಳ ಮೇಲೆ ನುಡಿಸಿಕೊಳ್ಳುವುದರ ಮೂಲಕ ವೀಣೆಯಲ್ಲಿ ವೇಗದ ಗಮಕಗಳನ್ನು ಮತ್ತು ನಿರಂತರತೆಗಳನ್ನು ಸಾಧಿಸಿಕೊಂಡ ಮೈಸೂರು ಬಾನಿಗೆ ಅವರು ಒಂದೇ ಮನೆಯಲ್ಲಿ ಎಳೆದುಕೊಂಡು ಸಂಕೀರ್ಣವಾದ ಗಮಕಗಳನ್ನು ಮೂಡಿಸುವುದರ ಮೂಲಕ ಬೇರೊಂದು ಬಗೆಯ ನಿರಂತರತೆಯನ್ನೂ ಹಾಗೂ ಗಾಂಭೀರ್ಯವನ್ನೂ ತಂದುಕೊಟ್ಟರು. ಹಾಗಾಗಿ ಅವರ ಶೈಲಿಯಲ್ಲಿ ಲಾಲಿತ್ಯ ಹಾಗೂ ಘನದ ಹದವಾದ ಪಾಕವನ್ನು ಕಾಣಬಹುದು. ಅವರ ಬದುಕಿನಂತೆಯೇ ಅವರು ವೀಣಾವಾದನದಲ್ಲೂ ಯಾವುದನ್ನೂ ಅತಿಗಳಿಗೆ ಕೊಂಡೊಯ್ಯಲಿಲ್ಲ. ಅವರ ವಾದನ ಶೈಲಿ ಸಮರಸಕ್ಕೊಂದು ಉತ್ತಮ ಉದಾಹರಣೆ.

ಪ್ರದರ್ಶನ ಕಲೆಗಳು ಉಳಿಯುವುದು ಸಾತತ್ಯದಿಂದಲೇ ಎನ್ನುವುದನ್ನು ಮನಗಂಡಿದ್ದ ಎಂ.ಜೆ.ಎಸ್. ಅವರು ಸಂಗೀತ ಕಲಿಸುವುದನ್ನು ಕುರಿತು ತುಂಬ ಗಂಭೀರವಾಗಿ ಆಲೋಚಿಸಿದರು. ವಿದ್ಯಾರ್ಥಿಯ ಮಟ್ಟ ಏನೇ ಇರಲಿ ಕಲಿಸುವ ವಿಷಯದಲ್ಲಿ ಕಾಂಪ್ರಮೈಸ್ ಮಾಡಿಕೊಳ್ಳಬಾರದು, ಆದರೆ ಕಲಿಸುವ ಕ್ರಮದಲ್ಲಿ ಬದಲಾವಣೆಯನ್ನು ಮಾಡಿಕೊಳ್ಳಬೇಕು ಎನ್ನುವುದು ಅವರ ಆಲೋಚನೆಯಾಗಿತ್ತು. ಇಂದು ಶಿಕ್ಷಣತಜ್ಞರು ತುಂಬ ಮುಖ್ಯ ಎಂದು ಹೇಳುವ 'ನಾನ್‌ಕರೆಕ್ಷನಲ್ ಮೆಥಡ್'ಅನ್ನು (ನೀನು ತಪ್ಪು ಮಾಡುತ್ತಿದ್ದೀಯೆ ಎಂದು ಹೇಳದೆಯೇ ತಪ್ಪನ್ನು ತಿದ್ದುವುದು) ಎಂ.ಜೆ.ಎಸ್. ಸದ್ದಿಲ್ಲದೆ ತಮ್ಮ ಕಲಿಸುವಿಕೆಯಲ್ಲಿ ಎಂದೋ ಅಳವಡಿಸಿಕೊಂಡುಬಿಟ್ಟಿದ್ದರು. ಅವರು ವಿದ್ಯಾರ್ಥಿ ನುಡಿಸುವಾಗ, ''ನೀನು ಈ ಜಾಗ ತಪ್ಪು ನುಡಿಸಿದೆ'' ಎಂದು ಹೇಳುತ್ತಲೇ ಇರಲಿಲ್ಲ, ಬದಲಾಗಿ ಆ ಭಾಗವನ್ನು ಎರಡು ಮೂರು ಸಲ ತಾವೂ ನುಡಿಸಿ, ವಿದ್ಯಾರ್ಥಿಯೂ ಅದನ್ನು ನುಡಿಸುವಂತೆ ಮಾಡುತ್ತಿದ್ದರು. ಆಗಲೂ ಬರದಿದ್ದರೆ ಅಂದಿನ ಪಾಠದಲ್ಲೇ ಅದು ಬರಬೇಕೆನ್ನುವ ಹಟದಿಂದ ಅದನ್ನು ಮತ್ತೆ ಮತ್ತೆ ನುಡಿಸುವಂತೆ ಅವರು ಒತ್ತಾಯ ಮಾಡುತ್ತಿರಲಿಲ್ಲ, ಅದು ವಿದ್ಯಾರ್ಥಿಯ ಆತ್ಮಸ್ಥೈರ್ಯವನ್ನು ಕುಗ್ಗಿಸುತ್ತದೆ ಎನ್ನುವ ಕಾರಣಕ್ಕಾಗಿ. ಬದಲಾಗಿ ಆ ಭಾಗವನ್ನು ನುಡಿಸುವ ದಿನಗಳಲ್ಲೆಲ್ಲಾ ಸದ್ದಿಲ್ಲದೆ ಅದರ ಕಡೆ ಗಮನಕೊಟ್ಟು ವಿದ್ಯಾರ್ಥಿಗೆ ಅರಿವಾಗದಂತೆ ಅದನ್ನು ಕಲಿಸಿಬಿಡುತ್ತಿದ್ದರು. ಅವರಿಗೆ ತಾನೇನು ಕಲಿಸಬೇಕು, ಎಷ್ಟು ಕಲಿಸಬೇಕು ಮತ್ತು ಹೇಗೆ ಕಲಿಸಬೇಕು ಎನ್ನುವುದರ ಬಗ್ಗೆ ತುಂಬ ಸ್ಪಷ್ಟತೆ ಇತ್ತು. ಕರ್ನಾಟಕ ಸಂಗೀತದಲ್ಲಿ ಅತ್ಯಂತ ಕ್ಲಿಷ್ಟವಾದುದೆಂದರೆ ಅದರ ಸಂಕೀರ್ಣವಾದ ಮತ್ತು ಅತಿ ಸೂಕ್ಷ್ಮವಾದ ಗಮಕಗಳು. ಒಂದರ್ಥದಲ್ಲಿ ಪ್ರಪಂಚದ ಬೇರೆಲ್ಲಾ ಸಂಗೀತ ಪ್ರಕಾರಗಳು ಹಾಗೂ ಹಿಂದೂಸ್ತಾನಿ ಸಂಗೀತಕ್ಕಿಂತ ಭಿನ್ನವಾದ ಒಂದು ಅಸ್ಮಿತೆಯನ್ನು ಕರ್ನಾಟಕ ಸಂಗೀತಕ್ಕೆ ನೀಡಿರುವುದು ಕೂಡ ಈ ಗಮಕಗಳೇ. ವಿದ್ಯಾರ್ಥಿಗಳಿಗೆ ಈ ಗಮಕಗಳನ್ನು ಕಲಿಸುವುದು ಯಾವೊಬ್ಬ ಗುರುವಿಗೂ ಅತ್ಯಂತ ದೊಡ್ಡ ಸವಾಲು. ಈ ಗಮಕಗಳನ್ನು ಸ್ವತಃ ತಾವೇ ಹಾಡಿಬಿಡುವುದು ಅಥವಾ ನುಡಿಸಿಬಿಡುವುದು ಬೇರೆ. ಏಕೆಂದರೆ ಸಂಗೀತಕ್ಕೆ ಒಲಿದ ಮನಸ್ಸಿಗೆ ಅದನ್ನು ಅನುಕರಣೆಯಿಂದ ಅಪ್ರಜ್ಞಾಪೂರ್ವಕವಾಗಿ ಹಾಗೇ ಹಾಡಿ ಅಥವಾ ನುಡಿಸಿಬಿಡುವುದು ಸಾಧ್ಯ. ಆದರೆ ಅದನ್ನು ಕಲಿಸುವುದಕ್ಕೆ ಮಾತ್ರ ಅಗಾಧವಾದ ಸ್ಪಷ್ಟತೆ ಬೇಕು. ಒಂದು ಗಮಕದೊಳಗೆ ಇನ್ನೊಂದು ಗಮಕ ಹೇಗೆ ಸೇರಿಕೊಂಡಿದೆ ಮತ್ತು ಹಾಗೆ ಸೇರಿಕೊಳ್ಳುವ ಪ್ರಕ್ರಿಯೆಯಲ್ಲಿ ಯಾವ ಗಮಕಕ್ಕೆ ಹೆಚ್ಚು ಘಾತ ಕೊಡಬೇಕು, ಯಾವುದನ್ನು ಹಗುರಗೊಳಿಸಬೇಕು ಮತ್ತು ಯಾವುದನ್ನು ಸಂಚು ಮಾಡಬೇಕು ಎನ್ನುವುದರ ಬಗ್ಗೆ ತುಂಬ ಸ್ಪಷ್ಟವಿರಬೇಕು. ಆಗ ಅದನ್ನು ಬಿಡಿಸಿ ಬಿಡಿಸಿ ಹೇಳಿಕೊಡಬಹುದು. ಇದು ಸಂಗೀತ ಗೊತ್ತಿದ್ದ ಮಾತ್ರಕ್ಕೆ ಸಾಧ್ಯವಾಗುವುದಿಲ್ಲ, ಅದನ್ನು ಹೇಗೆ ಕಲಿಸಬೇಕು ಮತ್ತು ಯಾವ ವಿಧಾನದಲ್ಲಿ ಕಲಿಸಬೇಕು ಎನ್ನುವುದನ್ನು ಕುರಿತು ತುಂಬ ಸ್ಪಷ್ಟತೆ ಇದ್ದಾಗ ಮಾತ್ರ ಸಾಧ್ಯವಾಗುತ್ತದೆ. ಈ ಶಕ್ತಿ ಎಂ.ಜೆ.ಎಸ್. ಅವರಲ್ಲಿ ಅಪರಿಮಿತವಾಗಿತ್ತು. ಅವರು ಬೇಗಡೆ, ಶಹನಾ ಮುಂತಾದ ಕ್ಲಿಷ್ಟವಾದ ರಾಗಗಳ ಗಮಕಗಳನ್ನು ವಿದ್ಯಾರ್ಥಿಗೆ ಕಲಿಸುವುದನ್ನು ನೋಡುವಾಗ ಅದು ನಿಜವಾಗಿಯೂ ವಿಸ್ಮಯವನ್ನುಂಟುಮಾಡುತ್ತಿತ್ತು.

ಎಂ.ಜೆ.ಎಸ್. ಅವರು ಸಂಗೀತವನ್ನು ಕಲಿಸುವಾಗ ಈಗಾಗಲೇ



## ಅಂಧಕಾರದ ಗುಹೆಯಲ್ಲಿ



ಅಮ್ಮನ ಮಡಿಲ ಸ್ಪರ್ಶವಿಲ್ಲ
ಸಿಹಿ ಕನಸು ಕಾಣುವ ಮನಸಿಲ್ಲ
ಮನದಲ್ಲಿ ಮಧುರ ಭಾವನೆಯಿಲ್ಲ
ಕುಳಿತಿರುವೆ ನೀನು
ಅಂಧಕಾರದ ಗುಹೆಯಲಿ !

ಓಡಾಡುವ ಹಂಬಲವಿಲ್ಲ
ಮಾತನಾಡುವ ತವಕವಿಲ್ಲ
ನಗುವ ಅಭ್ಯಾಸ ಗೊತ್ತೇ ಇಲ್ಲ
ಕುಳಿತಿರುವೆ ನೀನು
ಅಂಧಕಾರದ ಗುಹೆಯಲಿ !

ಆಟವಾಡುವ ರೂಢಿಯಿಲ್ಲ
ಮನೆಪಾಠದ ಚಿಂತೆಯಿಲ್ಲ
ಬೈಗುಳದ ಮಜ ತಿಳಿದಿಲ್ಲ
ಕುಳಿತಿರುವೆ ನೀನಲ್ಲಿ
ಅಂಧಕಾರದ ಗುಹೆಯಲಿ !

ಬೆಳಗಿನ ಮಂಜಿಲ್ಲ
ಸೂರ್ಯನ ರಶ್ಮಿಯಿಲ್ಲ
ಹಕ್ಕಿಗಳ ಚಿಲಿಪಿಲಿ ಕಲರವವಿಲ್ಲ
ಕುಳಿತಿರುವೆ ನೀನು
ಅಂಧಕಾರದ ಗುಹೆಯಲಿ !

ಬೆಳಕಿನ ಲೋಕ ಕರೆಯುತ್ತಿದೆ
ಏಕೆ ಯೋಚಿಸುತ್ತಿರುವೆ ?
ಪ್ರೀತಿಯಿಂದ ಎಲ್ಲರೂ ಬಾಳೋಣ
ಬಾ, ನಮ್ಮಲ್ಲಿ ಒಬ್ಬನಾಗು;
ಕತ್ತಲೆಯಿಂದ ಬೆಳಕಿನೆಡೆ ಸಾಗೋಣ.

**ದಿವ್ಯಾ ವಿ. ಗೌಡ**
ಹುಳೇಕೈ, ಗೋಳಗೋಡ ಅಂಚೆ
ಸಿದ್ದಾಪುರ ತಾಲೂಕು - ೫೮೧ ೩೫೫
ಉತ್ತರ ಕನ್ನಡ ಜಿಲ್ಲೆ

ಸಂಗೀತಪಾಠದ ಬಗ್ಗೆ ಇದ್ದ ಸಂಪ್ರದಾಯದೊಳಗೇ ಹಲವಾರು ಸೃಜನಶೀಲ ಕಲಿಕಾ ವಿಧಾನಗಳನ್ನು ಕಂಡುಕೊಂಡಿದ್ದರು. ಸಾಮಾನ್ಯವಾಗಿ ಒಂದು ಹದಿನೈದು ಇಪ್ಪತ್ತು ಕೃತಿಗಳನ್ನು ಕಲಿಸುವವರೆಗೂ ಯಾರೂ ಆಲಾಪನೆಯನ್ನು ಹೇಳಿಕೊಡುವುದಿಲ್ಲ. ಆದರೆ ಎಂ.ಜೆ.ಎಸ್. ಅವರು ಹಾಗೆಲ್ಲಾ ಅಪ್ಪ ಹಾಕಿದ ಆಲದ ಮರಕ್ಕೆ ನೇತುಬಿದ್ದವರೇ ಅಲ್ಲ. ಅವರು ಸ್ವರಜತಿ ಪ್ರಾರಂಭಿಸುವಾಗಲೇ ಅದರ ಆಲಾಪನೆಯನ್ನೂ ಪ್ರಾರಂಭಿಸುತ್ತಿದ್ದರು. ಆ ಹಂತದಲ್ಲಿ ಅವರು ಆಲಾಪನೆಯನ್ನು ನುಡಿಸು ಅಥವಾ ತಾನು ನುಡಿಸಿದ್ದನ್ನು ಹಾಗೇ ಅನುಸರಿಸು ಎಂದು ವಿದ್ಯಾರ್ಥಿಗೆ ಹೇಳುತ್ತಿರಲಿಲ್ಲ, ಬದಲು, ಸ್ವರಜತಿ ಪ್ರಾರಂಭಿಸುವ ಮೊದಲು ಸ್ವತಃ ತಾವೇ ಆಲಾಪನೆಯನ್ನು ನುಡಿಸುತ್ತಿದ್ದರು. ಅದನ್ನು ಎದುರಿಗೇ ಕುಳಿತಿದ್ದ ವಿದ್ಯಾರ್ಥಿಗಳು ಮೈಯೆಲ್ಲಾ ಕಿವಿಯಾಗಿ ಆಲಿಸುತ್ತಿದ್ದರು. ಒಂದರ್ಥದಲ್ಲಿ ಅದು ವಿದ್ಯಾರ್ಥಿಗೆ ಅನಿವಾರ್ಯ ಕೂಡ ಆಗುತ್ತಿತ್ತು. ಏಕೆಂದರೆ ಎಂ.ಜೆ.ಎಸ್. ಅವರು ಎಂದೂ ಗುಂಪಿನಲ್ಲಿ ಪಾಠ ಹೇಳುತ್ತಿರಲಿಲ್ಲ, ಒಬ್ಬೊಬ್ಬ ವಿದ್ಯಾರ್ಥಿಗೂ ಕಡಿಮೆ ಎಂದರೆ ಒಂದೊಂದು ಗಂಟೆಗಳ ಕಾಲ ವೀಣೆಯನ್ನು ಎದುರು ಇಟ್ಟುಕೊಂಡೇ ಪಾಠ ಕಲಿಸುತ್ತಿದ್ದರು. ಹೀಗೆ ಆಲಾಪನೆ ನುಡಿಸಿದ ನಂತರ ಅವರು ಸ್ವರಜತಿಯನ್ನು ಹೇಳಿಕೊಡುವಾಗ ವಿದ್ಯಾರ್ಥಿಯ ಮನಸ್ಸು ಅಪ್ರಜ್ಞಾಪೂರ್ವಕವಾಗಿ ಸ್ವರಜತಿಯಲ್ಲಿ ಬರುವ ಸ್ವರಪುಂಜಗಳನ್ನು ರಾಗವಾಗಿ ಮಾರ್ಪಡಿಸಿಕೊಳ್ಳುತ್ತಿತ್ತು. ಈ ಪ್ರಕ್ರಿಯೆ ವಿದ್ಯಾರ್ಥಿಯ ಗಮನಕ್ಕೇ ಬಂದಿರುತ್ತಿರಲಿಲ್ಲ. ವರ್ಣದ ಪಾಠ ಪ್ರಾರಂಭಿಸಿದಾಗ ಅವರು ಆಲಾಪನೆಯನ್ನು ನುಡಿಸಿ ಅದನ್ನು ಅನುಸರಿಸಿ ನುಡಿಸುವಂತೆ ವಿದ್ಯಾರ್ಥಿಗೆ ಹೇಳುತ್ತಿದ್ದರು. ವಿದ್ಯಾರ್ಥಿಗಳು ಅದನ್ನು ಎಷ್ಟು ಸಲೀಸಾಗಿ ನುಡಿಸಿಬಿಡುತ್ತಿದ್ದರು ಎಂದರೆ, ಪಾಠ ಹೇಳಿಕೊಡುವುದನ್ನು ನೋಡುತ್ತಿದ್ದವರಲ್ಲಿ ಅದು ಬೆರಗು ಹುಟ್ಟಿಸಿಬಿಡುತ್ತಿತ್ತು.

ಯಾವ ರಾಗವನ್ನು ಆಲಾಪನೆ ಮಾಡಿದರೂ ಆಲಾಪನೆಯ ಮೊಟ್ಟಮೊದಲ ಸಂಗತಿಯು ಸಂಶಯಾತೀತವಾಗಿ, ಖಚಿತವಾಗಿ ಆ ರಾಗದ ಅಸ್ಮಿತೆಯನ್ನು ಸ್ಥಾಪಿಸಿಬಿಡಬೇಕು ಎನ್ನುತ್ತಿದ್ದರು. ನುಡಿಸುತ್ತಿರುವ ರಾಗ ಯಾವುದಿರಬಹುದು ಎಂದು ಶ್ರೋತೃಗಳು ಊಹೆಮಾಡುವಂತೆ ಮಾಡಿ ಅವರನ್ನು ಒದ್ದಾಡಿಸುವುದಕ್ಕೆ ಅರ್ಥವಿಲ್ಲ ಎನ್ನುವುದು ಅವರ ಅನಿಸಿಕೆಯಾಗಿತ್ತು. ಸಂಗೀತದ ಮೂಲ ಉದ್ದೇಶ ರಸಾಸ್ವಾದನೆ. ಹಾಗಾಗಿ ಅಲ್ಲಿ ಪತ್ತೇದಾರಿ ಯಾಕೆ ಬೇಕು ಎನ್ನುತ್ತಿದ್ದರು. ಅವರಿಗೆ ಸಂಗೀತದ ವಿನಿಕೆಯಂತೆ ಅದನ್ನು ಕಲಿಸುವಿಕೆ ಕೂಡ ಒಂದು ತಪವಾಗಿತ್ತು. ಹಾಗಾಗಿಯೇ ಬೇರೆಲ್ಲರಿಗಿಂತ ಅತಿಹೆಚ್ಚು ಸಂಖ್ಯೆಯಲ್ಲಿ ಕಛೇರಿ ಕಲಾವಿದರನ್ನು ರೂಪಿಸುವುದಕ್ಕೆ ಎಂ.ಜೆ.ಎಸ್. ಅವರಿಗೆ ಸಾಧ್ಯವಾಗಿದೆ. ಅವರ ಪ್ರಮುಖ ಶಿಷ್ಯರು ಎ. ಎಸ್. ಪದ್ಮಾ, ಎಂ. ಕೆ. ಸರಸ್ವತಿ, ಮೈಸೂರು ಎಸ್. ರಾಜಲಕ್ಷ್ಮಿ, ಎಸ್. ವಿ. ಸಹನಾ ಮುಂತಾದವರು.

ಎಂ.ಜೆ.ಎಸ್. ಅವರ ಬದುಕಿನ ಕ್ರಮ ಎಲ್ಲ ಕಾಲದಲ್ಲೂ ಮೌಲ್ಯಯುತವಾಗಿ, ನೆಮ್ಮದಿಯಿಂದ, ಸಮಾಜಮುಖಿಯಾಗಿ ಬದುಕಬೇಕೆನ್ನುವವರಿಗೆ ಒಂದು



ಅತ್ಯುತ್ತಮ ಮಾದರಿ. ತನಗೆ ಇದು ಬರಬೇಕಿತ್ತು, ಅದು ಬರಬೇಕಿತ್ತು, ತನಗೆ ಇದು ದೊರಕಿಲ್ಲ, ಅದು ದೊರಕಿಲ್ಲ ಎಂದು ಒಂದೇ ಒಂದು ದಿನವೂ ಕೊರಗಿದವರಲ್ಲ. ಅಧಿಕಾರ, ಶ್ರೀಮಂತಿಕೆ, ಅಂತಸ್ತು, ಇವುಗಳತ್ತ ಅಪ್ಪಿತಪ್ಪಿಯೂ ಕಣ್ಣು ಹಾಯಿಸಿದವರಲ್ಲ. ಹಾಗಾಗಿಯೇ ಆತ್ಮಶ್ಲಾಘನೆ ಮತ್ತು ಪರನಿಂದನೆ ಎರಡನ್ನೂ ಅವರು ಎಂದೂ ಮಾಡಲಿಲ್ಲ. ತಮ್ಮ ವೃತ್ತಿಯೇ ವೀಣಾವಾದನವಾದರೂ ಎಂದೂ ಯಾರ ಬಳಿಯೂ ಕಾರ್ಯಕ್ರಮಕ್ಕಾಗಿ ವಶೀಲಿಬಾಜಿಯನ್ನೂ ಮಾಡಲಿಲ್ಲ. ಹಿರಿಯ ಹಾಗೂ ಕಿರಿಯ ಸಮಕಾಲೀನ ಸಂಗೀತ ದಿಗ್ಗಜರೆಲ್ಲರೂ ಇವರ ವಿನಿಕೆಯನ್ನು ಮೆಚ್ಚಿದ್ದಾರೆ. ಇವರು ಸಂಗೀತ ಕಲಾಭಿವರ್ಧಿನಿ ಸಭೆಯಲ್ಲಿ ನುಡಿಸಿದಾಗ ಮೈಸೂರು ವಾಸುದೇವಾಚಾರ್ಯರು ಇವರ ನುಡಿಸಾಣಿಕೆಯನ್ನು ಮುಕ್ತಕಂಠದಿಂದ ಹೊಗಳಿದ್ದರು. ದಸರೆಯಲ್ಲಿ ಮೈಸೂರು ದರ್ಬಾರಿನಲ್ಲಿ ಇವರು ನುಡಿಸಿದಾಗ ಇವರಿಗೆ ಪಕ್ಕವಾದ್ಯ ನುಡಿಸುತ್ತಿದ್ದ ಪದ್ಮಭೂಷಣ, ಸಂಗೀತಕಲಾನಿಧಿ ಉಮಯಾಳಪುರಂ ಶಿವರಾಮನ್ ಅವರು 'ಇದು ಎಂಥಾ ಸೊಗಸಾದ ವೀಣಾವಾದನ' ಎಂದು ಹೊಗಳಿದರು. ದೇಶದ ಎಲ್ಲಾ ಪ್ರಮುಖ ಸಭೆಗಳಲ್ಲಿ ಮತ್ತು ನಗರಗಳಲ್ಲಿ ಕಛೇರಿಗಳನ್ನು ನೀಡಿದ್ದಾರೆ. ಇವರು ಆಕಾಶವಾಣಿಯ 'ಎ ಟಾಪ್' ಕಲಾವಿದರು. ಎಲೆಮರೆಯ ಕಾಯಿಯಂತೆಯೇ ಉಳಿದರೂ ಗೌರವಾದರಗಳು, ಪ್ರಶಸ್ತಿ-ಪುರಸ್ಕಾರಗಳು ಇವರ ಪ್ರತಿಭೆಯನ್ನರಸಿ ತಾವೇ ಇವರ ಬಳಿಗೆ ಬಂದಿವೆ. ಗಾನಕಲಾ ಪರಿಷತ್ತಿನ 'ಗಾನಕಲಾಭೂಷಣ' (೧೯೯೩), ಸಂಗೀತ ನೃತ್ಯ ಅಕಾಡೆಮಿಯ 'ಗಾನಕಲಾತಿಲಕ' (೧೯೯೪), ಕರ್ನಾಟಕ ಸರ್ಕಾರದ 'ರಾಜ್ಯೋತ್ಸವ ಪ್ರಶಸ್ತಿ' (೧೯೯೪), ಚೌಡಯ್ಯ ಸ್ಮಾರಕ 'ಕಲಾಜ್ಯೋತಿ ಪ್ರಶಸ್ತಿ' (೧೯೯೯), ಆದರ್ಶ ಸಂಸ್ಥೆಯ 'ಗಾಯನ ಲಯ ಸಾಮ್ರಾಟ', ಅನನ್ಯ ಅಕಾಡೆಮಿಯ 'ಲೈಫ್ ಟೈಮ್ ಅಚೀವ್‌ಮೆಂಟ್ ಪ್ರಶಸ್ತಿ', 'ಅನನ್ಯ ಕಲಾಕೌಸ್ತುಭ', ೨೦೦೪ರಲ್ಲಿ ಕರ್ನಾಟಕ ಸರ್ಕಾರದ 'ಕನಕ ಪುರಂದರ ಪ್ರಶಸ್ತಿ' (ಇದು ಸಂದಿರುವ ಕರ್ನಾಟಕದ ಮೊಟ್ಟ ಮೊದಲ ವೈಣಿಕರು). ಇವೆಲ್ಲ ಸಂದ ಸಂದರ್ಭದಲ್ಲಿ ಅವರೊಳಗಿನ ವಿನಯ ಅವರ ಮಾತಿನಲ್ಲಿ ಧ್ವನಿತವಾಗಿದೆ : ''ನನಗಿಂತ ಹಿಂದೆ ಸಂಗೀತಕ್ಕಾಗಿ ಬದುಕನ್ನು ಮುಡುಪಾಗಿಟ್ಟಿದ್ದ ಹಲವು ಸಂಗೀತಗಾರರಿದ್ದರು, ಸಂಗೀತವೇ ಬದುಕಾಗಿರುವ ನನ್ನ ಹಲವಾರು ಸಮಕಾಲೀನರೂ ಇದ್ದಾರೆ. ಹಾಗೆಯೇ ಸಂಗೀತವನ್ನೇ ಉಸಿರನ್ನಾಗಿಸಿಕೊಂಡು ಬದುಕುವ ಸಾಧ್ಯತೆ ಇರುವ ಹಲವಾರು ಯುವಪ್ರತಿಭೆಗಳೂ ಇದ್ದಾರೆ. ಹಾಗಾಗಿ ಇಂದು ನನಗೆ ಸಂದಿರುವ ಬಿರುದನ್ನು ನಾನು ಈ ಅಖಂಡ ಸಂಗೀತ ಪರಂಪರೆಗೆ ಸಂದಿರುವ ಬಿರುದು ಎಂದು ಭಾವಿಸುತ್ತೇನೆ.''

ಕೆರೆಯ ನೀರನು ಕೆರೆಗೆ ಚೆಲ್ಲಿ ಎನ್ನುವಂತೆ ತಮಗೆ ಪ್ರಶಸ್ತಿಗಳ ಸಂದರ್ಭದಲ್ಲಿ ದೊರಕಿದ ಯಾವ ಹಣವನ್ನೂ ಅವರು ಬಳಸಿಕೊಳ್ಳದೆ ಅದನ್ನು ಹಲವಾರು ಸಂಗೀತ ಸಭೆಗಳಲ್ಲಿ ದತ್ತಿನಿಧಿಯಾಗಿ ಇಟ್ಟಿದ್ದಾರೆ, ಅಂಧರ ಶಾಲೆಯೊಂದಕ್ಕೆ ವಂತಿಕೆಯನ್ನಾಗಿ ನೀಡಿಬಿಟ್ಟಿದ್ದಾರೆ. ಗಾಂಧೀಜಿಯು ಪ್ರತಿಪಾದಿಸಿದ 'ವಾಲಂಟರಿ ಪಾವರ್ಟಿ' ತತ್ವಕ್ಕೆ ಇವರ ಬದುಕಿಗಿಂತ ಒಳ್ಳೆಯ ನಿದರ್ಶನ ದೊರಕುವುದು ಸಾಧ್ಯವಿಲ್ಲವೆನಿಸುತ್ತದೆ.

''ಸಂಗೀತ ನಿಜವಾಗಿಯೂ ನೀಡಬೇಕಾದ್ದು ನೆಮ್ಮದಿಯನ್ನು. ಆದರೆ ಮೊದಲು ಅದು ನಮ್ಮಲ್ಲಿ ಮೂಡಬೇಕು. ಆಗ ಮಾತ್ರ ಸಂಗೀತ ಅದನ್ನು ನೀಡಬಲ್ಲದು. ಸಂಗೀತ ನನಗೆ ಎಲ್ಲವನ್ನೂ ನೀಡಿದೆ. ಆ ನೆಮ್ಮದಿ ನನಗಿದೆ'' ಎನ್ನುವ ಎಂ.ಜೆ.ಎಸ್. ಅವರ ಮಾತು ಸದಾ ನೆನಪಿನಲ್ಲಿರಬೇಕಾದಂಥದ್ದು.

ಇಂತಹ ಶ್ರೇಷ್ಠ ವೈಣಿಕ, ಮಹಾನ್ ಗುರು ಮತ್ತು ಎಲ್ಲದಕ್ಕಿಂತ ಹೆಚ್ಚಾಗಿ ಒಬ್ಬ ಶ್ರೇಷ್ಠ ಮಾನವ. ಉತ್ಕೃಷ್ಟ ವೀಣಾ ಪರಂಪರೆಯನ್ನು ನಮಗಾಗಿ ಉಳಿಸಿ ೧೩-೦೨-೨೦೧೩ರಂದು ನಮ್ಮನ್ನಗಲಿದ್ದಾರೆ. ಈಗ ನಮಗುಳಿದಿರುವುದು ಅವರ ಸಂಗೀತ ಮಾತ್ರ.

**ಪ್ರೊ|| ಶೈಲಜಾ ವೇಣುಗೋಪಾಲ್**
ಸಿ. ಎಚ್. ೭೩, ೭ನೇ ಮುಖ್ಯ ರಸ್ತೆ
ಸರಸ್ವತಿ ಪುರಂ, ಮೈಸೂರು - ೫೭೦೦೨೩

## ಸಾಮಾಜಿಕ ಸ್ಥಿತಿ

ವಿಮುಖತೆ, ಪ್ರತ್ಯೇಕತೆ
ಸಂಪರ್ಕರಹಿತ ದುಸ್ಥಿತಿ
ಸಮಾಜಕ್ಕೆ ದೈವದ ಪ್ರಕೋಪ
ಗುಣಪಡಿಸಲಾಗದ ವಿವಿಧ
ಕಠಿಣ ರೋಗಗಳಂತೆ ಭೀತಿ ಹುಟ್ಟಿಸಿ
ಪ್ರಜೆಗಳ ಶಾಂತ ಮನಕೆ ಪರಿತಾಪ

**ಶ್ರೀನಿವಾಸ ಕುಂಡಂತಾಯ**
ಇ-೧೦೧, ವಿ.ಡಿ.ಬಿ. ಸೆಲಡಾನ, ಜಕ್ಕೂರು ರಸ್ತೆ
ಶಿವನಹಳ್ಳಿ, ಯಲಹಂಕ, ಬೆಂಗಳೂರು-೫೬೦೦೬೪

**ಯು. ಎನ್. ಸಂಗನಾಳಮಠ**

# ಸ್ಥಿತ್ಯಂತರದ ಹಾದಿಯಲ್ಲಿ ಮಕ್ಕಳ ಸಾಹಿತ್ಯ

**ಬಾ**ಲ್ಯದಲ್ಲಿ ಮುಗ್ದತೆ, ಕಲ್ಪನೆಗಳನ್ನು ಕಲ್ಮಶರಹಿತವಾದ ಮನದಲ್ಲಿರಿಸಿಕೊಂಡು ಎಳೆಯ ಜೀವಗಳು ಶಾಲೆಗೆ ಹೋಗಲು ಆರಂಭಿಸಿದೊಡನೆ ಅವರ ಮನದಲ್ಲಿ ಪ್ರಶ್ನೆಗಳ ಸರಮಾಲೆ ಏಳಲಾರಂಭಿಸುತ್ತವೆ. ಅವರ ಪ್ರಶ್ನೆಗಳಿಗೆ ಉತ್ತರಿಸಲು ಅವರ ಕಲ್ಪನಾಲೋಕ ವಿಸ್ತರಿಸಲು ಪಠ್ಯಗಳು ಸಾಕಾಗುವುದಿಲ್ಲ. ಅವರ ಆರೋಗ್ಯಕರವಾದ ವ್ಯಕ್ತಿತ್ವವನ್ನು ರೂಪಿಸಲು ಮಕ್ಕಳ ಸಾಹಿತ್ಯ ಅವಶ್ಯ.

ಮಕ್ಕಳ ಸಾಹಿತ್ಯ ಎಂದರೆ ೬ರಿಂದ ೮ ವರ್ಷದವರೆಗೆ ಒಂದು ವಿಧವಾದ ಸಾಹಿತ್ಯ, ೮ರಿಂದ ೧೧ ವರ್ಷದವರೆಗೆ ಇನ್ನೊಂದು ವಿಧದ ಸಾಹಿತ್ಯ ಎಂದು ವಿಂಗಡಿಸಿದರೂ, ಇದು ಮಕ್ಕಳ ಶಿಕ್ಷಣಕ್ಕೆ ಅವಶ್ಯ ಎಂದು ತೋರುತ್ತದೆ. ಮಕ್ಕಳ ಸಾಹಿತ್ಯ ಕೇವಲ ಮಕ್ಕಳಿಗಾಗಿ ಇರದೆ ಕೆಲವೊಮ್ಮೆ ಬೆಳೆದವರಿಗೂ ಸಹ ಅನ್ವಯವಾಗುತ್ತದೆ.

ಮಕ್ಕಳ ಸಾಹಿತ್ಯ ರಚಿಸಿದರೆ ನಾವೂ ಮಕ್ಕಳ ಮಟ್ಟಕ್ಕೆ ಇಳಿದು ಸಣ್ಣವರಾಗುವೆವು ಎಂದು ಭಾವಿಸುವ ಅನೇಕ ಬರಹಗಾರರು ನಮ್ಮ ನಡುವೆ ಇದ್ದಾರೆ, ಹಾಗೆ ನೋಡಿದರೆ ಕುವೆಂಪು, ಕಾರಂತ, ಬೇಂದ್ರೆ, ರಾಜರತ್ನಂ ಇಂಥ ದಿಗ್ಗಜರು ಮಕ್ಕಳ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡು ಅದನ್ನು ಶ್ರೀಮಂತಗೊಳಿಸಿದ್ದಾರೆ. ಪಳಕಳ ಸೀತಾರಾಮ ಭಟ್, ನಾ. ಡಿಸೋಜ, ಎಚ್ಚೆಸ್ವಿ, ಕಣವಿ, ಸಿಸು ಸಂಗಮೇಶ, ಕಂಚ್ಯಾಣಿ ಶರಣಪ್ಪ, ಶಂಗು ಬಿರಾದಾರ ಮುಂತಾದವರಿಗಷ್ಟೇ ಸೀಮಿತ ಎಂಬ ಕಲ್ಪನೆ ನಮ್ಮಲ್ಲಿದೆ. ವೈಚಾರಿಕ, ಬೌದ್ಧಿಕ, ಪ್ರಗತಿಪರ ಲೇಖಕರು ಮಕ್ಕಳ ಮುಗ್ಧ ಮನಸ್ಸಿನ ಕಲ್ಪನೆಗಳನ್ನು ಮೂರ್ತರೂಪವನ್ನಾಗಿ ಮಾಡುವ ಸಾಹಿತ್ಯ ರಚನೆಗೆ ಏಕೆ ಕೈ ಹಾಕುತ್ತಿಲ್ಲ? ಈಗ ಮಕ್ಕಳನ್ನೇ ಕಣ್ಣಲ್ಲಿಟ್ಟುಕೊಂಡು ಮಕ್ಕಳಾಗಿಯೇ ಬರೆಯುವವರ ಸಂಖ್ಯೆ ಕ್ಷೀಣಿಸಿರುವುದು ವಿಷಾದನೀಯ.



**ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರಚನೆ ಸ್ಥಗಿತವಾಗಿದೆ. ಜಾಗತೀಕರಣದ ಭರಾಟೆಯಲ್ಲಿ ಆಂಗ್ಲ ಪ್ರಭಾವ ಉಂಟಾಗಿ ದೃಶ್ಯ ಮಾಧ್ಯಮಗಳ ವಿಪರೀತ ಪರಿಣಾಮದಿಂದ ಇಂಗ್ಲಿಷ್‌ನ ಬಿಕ್ಕಟ್ಟಿನಲ್ಲಿ ಕನ್ನಡ ಬಡವರ ಭಾಷೆಯಾಗಿ ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರಚನೆ ಕುಂಠಿತವಾಗಿದೆ. ಮಾತೃಭಾಷೆ ಎಂಬುದು ಬರಿಯ ಕೂಗಾಗಿದೆ. ಕನ್ನಡದ ಅಕ್ಷರ ಪದಗಳು ಇಂಗ್ಲಿಷ್‌ಗೆ ರೂಪಾಂತರವಾಗಿವೆ. ಕಾಮಿಕ್ಸ್‌ಗಳು, ಜಾಹೀರಾತುಗಳು, ಧಾರಾವಾಹಿಗಳು, ಹಾರರ್ ಶೋಗಳು, ರಿಯಾಲಿಟಿ ಶೋಗಳು, ವಿಡಿಯೋ ಗೇಮ್‌ಗಳು, ಮಕ್ಕಳಿಗೆ ಕುರೂಪ, ವಿರೂಪ ದರ್ಶನ ಮಾಡಿಸಿ ಕನ್ನಡತನ ಮರೆಮಾಡಿ ನಿಜ ಬದುಕಿನಿಂದ ದೂರವಾಗಿಸುತ್ತಿವೆ. ಶಾಲೆಗಳಲ್ಲಿ ಕನ್ನಡದ ಆಳ-ಅಗಲ ಸಹ ಕ್ಷೀಣಿಸುತ್ತಲಿದೆ.**

ಕರ್ನಾಟಕದಲ್ಲಿ ಸಾವಿರಾರು ಓದುಗರಿಗಾಗಿ ಕಥೆ, ಕಾದಂಬರಿ, ಕಾವ್ಯ, ನಾಟಕ ಮುಂತಾದ ಸಾಹಿತ್ಯ ಕೃತಿಗಳನ್ನು ಬರೆಯುವ ಲೇಖಕರ ಸಂಖ್ಯೆ ಸಾಕಷ್ಟಿದೆ. ಆದರೆ ಮಕ್ಕಳಿಗಾಗಿ ಬರೆಯುವವರ ಸಂಖ್ಯೆ ತೀರ ಕಡಿಮೆ. ನಮ್ಮ ಮಕ್ಕಳು ಓದುವ ಮಾಸ ಪತ್ರಿಕೆಗಳು, ಕೆಲವು ಕಥಾ ಪುಸ್ತಕಗಳು ಮುಂಬಯಿ, ಚೆನ್ನೈ ನಗರಗಳಲ್ಲಿ ಪ್ರಕಟವಾಗುವುವು.

ನಮ್ಮ ಬಾಲ್ಯದ ದಿನಗಳು 'ಚಂದಮಾಮ' ಪತ್ರಿಕೆಯೊಂದಿಗೆ ತಳಕು ಹಾಕಿಕೊಂಡಿದ್ದವು. ಈಗಲೂ ಎಷ್ಟೋ ಮನೆಗಳಲ್ಲಿ ಅಟ್ಟದ ಮೇಲಿನ ಟ್ರಂಕುಗಳಲ್ಲಿ ಹಳೇ ಚಂದಮಾಮ ಪ್ರತಿಗಳು ಸಿಗುತ್ತವೆ. 'ಚಂದಮಾಮ' ೧೯೪೭ರಲ್ಲಿ ನಾಗಿರೆಡ್ಡಿ ಅವರಿಂದ ತಮಿಳು-ತೆಲುಗಿನಲ್ಲಿ ಆರಂಭವಾಗಿ ೧೯೪೯ರಿಂದ ಕನ್ನಡದಲ್ಲಿ ಆರಂಭವಾಯಿತು. ವಿಕ್ರಮ-ಬೇತಾಳ, ತೆನಾಲಿರಾಮ, ಅಕಬರ್-ಬೀರಬಲ್ ಕಥೆಗಳು ನಮಗೆ ತಿಳಿದಿವೆ ಎಂದರೆ ಅದಕ್ಕೆ ಚಂದಮಾಮ ಕಾರಣ. ಪುರಾಣಗಳಲ್ಲಿರುವ ನೀತಿ ಕಥೆಗಳು ರಾಮಾಯಣ, ಮಹಾಭಾರತ, ಕೃಷ್ಣನ ಕಥೆ, ಹನುಮಂತನ ಕಥೆ, ಭಾಗವತದ ಕಥೆ ಇವೆಲ್ಲ ಧಾರಾವಾಹಿಯಾಗಿ ಬಂದವು. ಹಾಗೆ ಮಂತ್ರ-ತಂತ್ರದ, ರಾಜ-ರಾಕ್ಷಸ ಕಥೆಗಳೂ ಬಂದವು. ಮನರಂಜನೆ ಜೊತೆಗೆ ಮಕ್ಕಳಿಗೆ ನೀತಿಪಾಠ ಹೇಳುವುದು ಚಂದಮಾಮದ ಉದ್ದೇಶವಾಗಿತ್ತು. ಅನಂತರ ಬೊಂಬೆಮನೆ, ಬಾಲಮಿತ್ರ, ಬಾಲಮಂಗಳ ಬಂದವು. ಬಾಲಮಂಗಳದ 'ಡಿಂಗ' ಮಕ್ಕಳ ಆಕರ್ಷಣೆ ಆಯಿತು. ಈಗ 'ತುಂತುರು' ಜನಪ್ರಿಯವಾಗಿದೆ. ಆದರೂ ಚಂದಮಾಮ ಶಾಶ್ವತ. ಚಂದಮಾಮ ಈಗ ನವೀನ ರೂಪದಲ್ಲಿ ೧೩ ಭಾಷೆಗಳಲ್ಲಿ ಪ್ರಕಟವಾಗಿ ೨೦೦೭ರಿಂದ ವೆಬ್‌ಸೈಟ್‌ನಲ್ಲಿ ಆನ್‌ಲೈನ್‌ನಲ್ಲಿ ದೊರಕುತ್ತದೆ.

ಈಸೋಪನ ನೀತಿ ಕಥೆಗಳು, ಪಂಚತಂತ್ರ ಕಥೆಗಳು, ಸಿಂದಬಾದ್ ನಾವಿಕನ ಕಥೆಗಳು, ಶ್ರವಣಕುಮಾರ, ಕೋಳೂರು ಕೊಡಗೂಸು ಭಕ್ತ ಧ್ರುವನ ಕಥೆ ಮತ್ತು ತಿರುಕನ ಕನಸು, ಪುಣ್ಯಕೋಟಿ ಪದ್ಯ, ಕುವೆಂಪು ಅವರ ಕಿಂದರಿ ಜೋಗಿ, ಪುತಿನ ಅವರ ನಾಗರಹಾವೆ, ಕವನಗಳನ್ನು ಕೇಳುತ್ತ ಬೆಳೆದು ಬಂದವರು ನಾವು.

ಚಿಕ್ಕ ಮಕ್ಕಳ ದೊಡ್ಡ ಕವಿ ಎನಿಸಿದ ಪಳಕಳ ಸೀತಾರಾಮ ಭಟ್ಟರು ೧೯೪೫ರಿಂದ ಮಕ್ಕಳಿಗಾಗಿ ಕಥೆ ಬರೆಯಲು ಆರಂಭಿಸಿದರು. ೧೯೫೨ರಲ್ಲಿ ಶಿಶು ಸಾಹಿತ್ಯ ಮಾಲೆ, ಪ್ರಕಾಶನ ಸಂಸ್ಥೆ ಆರಂಭಿಸಿದರು. ಶಿಶು ಗೀತೆ ಸಹಿತ ಶಿಶು ಸಾಹಿತ್ಯ ಕೃತಿಗಳ ಸಂಖ್ಯೆ ೧೧೪. ಇನ್ನೂ ಬರೆಯುತ್ತಿರುವ ಪಳಕಳಜ್ಜನಿಗೆ ೨೦೧೨ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಾಲ ಸಾಹಿತ್ಯ ಪುರಸ್ಕಾರ ಲಭಿಸಿದೆ. ''ಮಂಗಬುದ್ಧಿ ಸಾಕುಮಾಡು, ಬದಲಬೇಕು ಹಾ-ದಿ; ಬದುಕು ಸಫಲ ಆಗಬೇಕು, ಜಾಣನಾಗು ಓ-ದಿ'' ಎಂಬ ಸಂದೇಶವನ್ನು ಇತ್ತೀಚೆಗೆ

ಕೊಟ್ಟಿದ್ದಾರೆ. ಧಾರವಾಡದ ಮೇವುಂಡಿ ಮಲ್ಲಾರಿ, ಬಿಜಾಪುರದ ಅಜ್ಜ ಕಂಚ್ಯಾಣಿ ಶರಣಪ್ಪ, ಸಿಸು ಸಂಗಮೇಶ, ಬೊಳುವಾರು ಮಹಮ್ಮದ್ ಕುಂಞ (ಪಾಪು ಗಾಂಧಿ ಗಾಂಧಿ ಪಾಪು ಆದ ಕತೆ), ಆನಂದ ಪಾಟೀಲ, ಹೊಯ್ಸಳ, ಭಾಗೀರಥಿ ಹೆಗಡೆ, ಪ. ರಾಮಕೃಷ್ಣ ಶಾಸ್ತ್ರಿ, ಹೆಚ್.ಎಸ್.ವಿ. ಮುಂತಾದವರು ಮಕ್ಕಳ ಕಥೆ, ಕವನ, ನಾಟಕಗಳನ್ನು ಬರೆಯುತ್ತಿದ್ದಾರೆ. ಈಗಿನ ಮಕ್ಕಳಿಗೆ ಅಕ್ಬರ್, ಬೀರಬಲ್, ತೆನಾಲಿರಾಮ ಮಹಾಕಾವ್ಯಗಳ ಕಥೆ ಎಂದರೆ ಅಲರ್ಜಿ. ಅವರ ಇಂಗ್ಲಿಷ್ ಪ್ರೀತಿಯಿಂದ ಮಿಸ್ಟರ್ ಬೀನ್ ಎಂದರೆ ಎನರ್ಜಿ. ಕಾರ್ಟೂನುಗಳು, ಆನಿಮೇಷನ್ ಎಂದರೆ ಸಮಾಧಾನ. ಇಂಥ ವಾತಾವರಣದಲ್ಲಿ ಬೆಂಗಳೂರಿನ 'ರಂಗಪ್ರಿಯ ಸಾಂಸ್ಕೃತಿಕ ವೇದಿಕೆ' ಕೆ. ವಿ. ವೇಣುಗೋಪಾಲ್ ಅವರಿಂದ ಪ್ರಾರಂಭವಾಗಿದೆ. 'ಎಲೆಗೆ ನೀರೆರೆಯುವುದು ಬೇಡ ಬೇರಿಗೆ ನೀರೆರೆಯೋಣ' ಎಂಬ ಉದ್ದೇಶ ಇವರದು. ಸರಕಾರಿ ಶಾಲಾ ಶಿಕ್ಷಕಿ ರಂಗಲಕ್ಷ್ಮಿಯವರು ವೇಣುಗೋಪಾಲ ಅವರ ಪತ್ನಿ. ಇವರ ಸೆಳೆತದಿಂದ ೨೦೦೪ರಲ್ಲಿ ಈ ವೇದಿಕೆ ಆರಂಭವಾಯಿತು. ಈ ದಂಪತಿ ಸ್ವಂತ ಖರ್ಚಿನಿಂದ ೨೦೦೮ರಲ್ಲಿ 'ನೀತಿ ಕಥೆಗಳು' ಎಂಬ 'ನೀತಿ ಕಥಾಮಾಲೆ' ಕೃತಿ ಪ್ರಕಟಿಸಿ ಪ್ರತಿ ಸರಕಾರಿ ಶಾಲೆಗಳಿಗೆ ಉಚಿತವಾಗಿ ಹಂಚುತ್ತಿರುವುದು ವಿಶೇಷ. ಪ್ರತೀ ವರ್ಷ ಒಂದು ತಾಲೂಕನ್ನು ಆಯ್ಕೆ ಮಾಡುತ್ತಾರೆ.

ಡಾ|| ರಹಮತ್ ತರೀಕೆರೆ, ಮಕ್ಕಳು ಈ ಐದು ಪುಸ್ತಕಗಳನ್ನು ಕಡ್ಡಾಯವಾಗಿ ಓದಲು ಸೂಚಿಸುತ್ತಾರೆ. (೧) ಟಾಲ್‌ಸ್ಟಾಯ್ ಕಥೆಗಳು; (೨) ಬೊಳುವಾರು ಅವರ 'ತಟ್ಟು ಚಪ್ಪಾಳೆ ಪುಟ್ಟ ಮಗು'; (೩) ಕಸ್ತೂರಿ ಅವರ 'ಪಾತಾಳದಲ್ಲಿ ಪಾಪಚ್ಚಿ'; (೪) ಜಿ. ಪಿ. ರಾಜರತ್ನಂ ಅವರ 'ಮಕ್ಕಳ ಸಾಹಿತ್ಯ'; (೫) ತೇಜಸ್ವಿ ಅವರ 'ಕನ್ನಡ ನಾಡಿನ ಹಕ್ಕಿಗಳು'. ನನ್ನ ಪ್ರಕಾರ ೫ರಿಂದ ೭ ವರ್ಷದ ಮಕ್ಕಳಿಗೆ ಈಸೋಪನ ನೀತಿ ಕಥೆಗಳು ಮತ್ತು ಪಂಚತಂತ್ರದ ಕಥೆಗಳನ್ನು ಹೇಳಬೇಕು.

ಕೊಟ್ಟ ಭಾಷೆಗೆ ತಪ್ಪಲಾರೆನು
ಕೆಟ್ಟ ಯೋಚನೆ ಮಾಡಲಾರೆನು
ನಿಷ್ಠೆಯಿಂದಲಿ ಪೋಪೆನಲ್ಲಿಗೆ
ಕಟ್ಟಕಡೆಗಿದು ಖಂಡಿತ

– ಈ ಪದ್ಯ ಈಗಿನ ಮಕ್ಕಳ ಪಠ್ಯದಲ್ಲಿ ಇಲ್ಲ. ಗೋವಿನ ಹಾಡಿನ ಸತ್ಯದ ಮಹತ್ವವನ್ನು ಗೋವಿನ ಹಾಡಿನ ಮೂಲಕ ಜೀವನದ ಮೌಲ್ಯವಾಗಿ ಕವಿ ತಿಳಿಸಿದ್ದಾನೆ. ಗೋವಿನ ಸತ್ಯನಿಷ್ಠೆ, ಕಿಂದರಿಜೋಗಿಯ ಮೂಲಕ ಕೊಟ್ಟ ಭಾಷೆ ತಪ್ಪಿದುದರ ದುಷ್ಪರಿಣಾಮ, ಪಂಚತಂತ್ರ ಕಥೆಗಳ ಮೂಲಕ ಬುದ್ಧಿ, ಜಾಣ್ಮೆ, ಪ್ರತಿಭೆಗೆ ಮನ್ನಣೆ ಇವೆಲ್ಲ ಇಂದಿನ ಮಕ್ಕಳ ಗಮನಕ್ಕೆ ಬರುವುದಿಲ್ಲ. ಮೌಲ್ಯವುಳ್ಳ ಪಠ್ಯ ವಿಷಯಗಳು ಮರೆಯಾಗಿವೆ.

'ಮನೆಯೇ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರುವು, ಜನನಿಯಿಂದ ಪಾಠ ಕಲಿತ ಜನರು ಧನ್ಯರು.' ನಾವೆಲ್ಲ ಅಜ್ಜ-ಅಜ್ಜಿ-ತಾಯಿಯರಿಂದ ಅನೇಕ ಜೀವನ ಮೌಲ್ಯದ ಕಥೆ-ಹಾಡು ಕೇಳಿ ಬೆಳೆದು ಬಂದವರು. ಜನಪದ ಕಥೆಗಳನ್ನು ಅಜ್ಜ-ಅಜ್ಜಿ ಹೇಳುತ್ತಿದ್ದರು. ಈಗ ತಂದೆ-ತಾಯಿ ಕೂಡ ಕೆಲಸಕ್ಕೆ ಹೋಗುವುದರಿಂದ ಮಕ್ಕಳನ್ನು ಎಲ್‌ಕೆಜಿ, ಯುಕೆಜಿ ಶಾಲೆಗೆ ಸೇರಿಸುತ್ತಾರೆ. ಮಕ್ಕಳಿಗೆ ಅಜ್ಜ, ಅಜ್ಜಿ ಸಂಪರ್ಕವಿಲ್ಲ, ತಂದೆ-ತಾಯಿ ಸಾನ್ನಿಧ್ಯದ ಅವಕಾಶವಿಲ್ಲ, ಮಕ್ಕಳು ಮೌಲ್ಯರಹಿತವಾಗಿ ಬೆಳೆಯುತ್ತವೆ. ಈಗ ಮಕ್ಕಳ ಸಾಹಿತ್ಯ ರಚನೆ ಪ್ರಧಾನವಾಗಿ ಸೃಷ್ಟಿ ಆಗುತ್ತಿಲ್ಲ. ಮಕ್ಕಳ ಸಾಹಿತ್ಯವನ್ನು ಪಾಠ ಮಾಡುವ ವಿಶೇಷ ಅಧ್ಯಯನ ಇಂದಿನ ಶಿಕ್ಷಕರಲ್ಲಿ, ದೂರದರ್ಶನದಲ್ಲಿ ಸಹ ಮಕ್ಕಳ ಕಥೆಗಳು ಪ್ರಸಾರವಾಗುತ್ತಿಲ್ಲ. ಶಾಲಾ ಕಾಲೇಜುಗಳ ವಾರ್ಷಿಕೋತ್ಸವಗಳಲ್ಲಿ, ಟಿವಿ ಕಾರ್ಯಕ್ರಮಗಳಲ್ಲಿ ಸಿ.ಡಿ. ಹಾಕಿ ಸಿನಿಮಾ ಹಾಡುಗಳಿಗೆ ಹೆಜ್ಜೆ ಹಾಕಿಸುತ್ತಾರೆ. ಮನಸ್ಸು ಹೃದಯ ಅರಳಿಸುವ ವ್ಯಕ್ತಿತ್ವ ವಿಕಾಸಗೊಳಿಸುವ ಕಾರ್ಯಕ್ರಮಗಳು ಇರುವುದಿಲ್ಲ. ಹಿಂದೆ ತರಗತಿಗಳಲ್ಲಿ ಮಾರಲ್ ಎಜುಕೇಷನ್ ಎಂಬ ಪಠ್ಯವಿದ್ದು ಅದರಲ್ಲಿ ಪೌರಾಣಿಕ, ರಾಮಾಯಣ-ಮಹಾಭಾರತ ಕಥೆಗಳು, ರಾಷ್ಟ್ರ ನಾಯಕರ ಜೀವನ ಚರಿತ್ರೆಗಳು ಇದ್ದವು. ಈಗ ಅದನ್ನು ತೆಗೆದಿದ್ದಾರೆ.

## ಅಭಿನಂದನೆಗಳು



'ಹೊಸತು' ಪತ್ರಿಕೆಯ ಹಿತೈಷಿಗಳೂ ಓದುಗರೂ ಮತ್ತು ನವಕರ್ನಾಟಕ ಸಂಸ್ಥೆಯ ಆತ್ಮೀಯರೂ ಆಗಿರುವ ಡಾ|| ಬಿ. ಎ. ಸನದಿ ಅವರಿಗೆ ಕಾವ್ಯ ಪ್ರಕಾರದಲ್ಲಿ ಮಾಡಿರುವ ಸಾಧನೆಯನ್ನು ಪರಿಗಣಿಸಿ ಕರ್ನಾಟಕ ಸಂಘ, ಶಿವಮೊಗ್ಗ ಇವರು ತನ್ನ ೨೦೧೩ನೇ ಸಾಲಿನ ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದಾರೆ. ಪ್ರಶಸ್ತಿ ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ. ಪ್ರಶಸ್ತಿ ಪುರಸ್ಕೃತರನ್ನು 'ನವಕರ್ನಾಟಕ' ಹಾಗೂ 'ಹೊಸತು' ಬಳಗ ಅಭಿನಂದಿಸುತ್ತದೆ.

ನಮ್ಮ ಕನ್ನಡ ಶಾಲೆಗಳಲ್ಲಿ ಜಾನಪದ, ಕಥೆ-ಕವನ-ಹಾಡು, ಶರಣರ ವಚನ, ದಾಸ-ಸಂತರ ಪದಗಳನ್ನು ಕಡ್ಡಾಯ ಪಠಣ ಮಾಡಿಸಬೇಕು. ಮಕ್ಕಳನ್ನು ಸೆಳೆಯಬಲ್ಲ ಸಾಹಿತ್ಯ ಪರಿಕರಗಳನ್ನು ಆಯ್ದು ತಂದು ಮಕ್ಕಳ ಎಳೆ ಮನಸ್ಸುಗಳನ್ನು ಹುರಿಗೊಳಿಸಬೇಕಿದೆ. ಅದ್ಭುತವಾಗಿ ಪಠ್ಯ-ಕಾವ್ಯ ವಾಚಿಸಿ ಮಕ್ಕಳಲ್ಲಿ ಅಳವಡಿಸುತ್ತ ಅಕ್ಷರಾರ್ಪಣೆ ನಡೆಯಬೇಕಾಗಿದೆ. ಅವುಗಳ ಮೂಲಕ ಮಕ್ಕಳಿಗೆ ಜೀವನ ಮೌಲ್ಯದರ್ಶನ ಮಾಡಬೇಕು. ಜೀವನ ಮೌಲ್ಯ ಎಂದರೆ ದೇಶಭಕ್ತಿ, ಮಾತೃಭಕ್ತಿ, ಪಿತೃಭಕ್ತಿ, ಗುರುಭಕ್ತಿ, ಉತ್ತಮ ನಡವಳಿಕೆ ಇತ್ಯಾದಿ.

ಮಕ್ಕಳಿಗಾಗಿ ಅನೇಕ ಕವಿತೆಗಳನ್ನು ಬರೆದ ಎಚ್ಚೆಸ್ವಿ, ನೊಬೆಲ್ ಪ್ರಶಸ್ತಿ ಪುರಸ್ಕೃತ ಲೇಖಕ ಸಿಂಗ್‌ರ ಸಂದರ್ಶನವನ್ನು ಪ್ರಸ್ತಾಪಿಸಿದ್ದರು. ಅದರಲ್ಲಿ ಸಂದರ್ಶಕ ಸಿಂಗ್‌ರನ್ನು ಕುರಿತು, ''ನೀವು ದೊಡ್ಡವರಿಗೂ, ಮಕ್ಕಳಿಗೂ ಬರೆದಿದ್ದೀರಿ. ಅದರಲ್ಲಿ ನಿಮಗೆ ಯಾವುದು ಕಷ್ಟ'' ಎಂದು ಕೇಳಿದಾಗ ಸಿಂಗ್‌ರು ಉತ್ತರಿಸುತ್ತ, ''ಮಕ್ಕಳಿಗಾಗಿ ಬರೆಯುವುದು ತುಂಬ ಕಷ್ಟ. ಏಕೆಂದರೆ ದೊಡ್ಡವರ ಮುಂದೆ ಬರೆದ ಪದ್ಯ ಓದಿದಾಗ ಅವರು ದಾಕ್ಷಿಣ್ಯಕ್ಕೆ ಅಥವಾ ಶಿಷ್ಟಾಚಾರಕ್ಕೆ ತಲೆ ಅಲ್ಲಾಡಿಸಿ ಭೇಷ್ ಎನ್ನುವರು. ಆದರೆ ಮಕ್ಕಳ ಮುಂದೆ ಬರೆದ ಪದ್ಯ ಓದಿದಾಗ ಅವರಿಗೆ ಇಷ್ಟವಾದರೆ ಪೂರ್ತಿ ಕೇಳುತ್ತಾರೆ ಇಲ್ಲವಾದರೆ ಆಕಳಿಸುತ್ತಾರೆ'' ಎಂದರು.

ಮಕ್ಕಳ ಸಾಹಿತ್ಯವೆಂದರೆ ಕೇವಲ ಕಥೆ, ಹಾಡು, ನಾಟಕ ಎಂದಲ್ಲ. ಮಕ್ಕಳಿಗೆ ತಾವು ಓದುತ್ತಿರುವ ಸಾಹಿತ್ಯದ ಮೂಲಕ ಭಾವವಿಕಾಸ, ಜ್ಞಾನವಿಕಾಸ ಆಗಬೇಕು. ಪರಿಸರ, ಪ್ರಾಣಿ-ಪಕ್ಷಿಗಳ ಕುರಿತಾಗಿರಬೇಕು. ಅವು ಸದ್ಭಾವನೆಯನ್ನು ಸಚ್ಚಾರಿತ್ರ್ಯವನ್ನು ಸತ್ಕ್ರಿಯೆಯಲ್ಲಿ ತೊಡಗಿಸಿಕೊಂಡ ಮಹಾಪುರುಷರ ಜೀವನ ಚರಿತ್ರೆಗಳಾಗಿರಬಹುದು. ಮಕ್ಕಳಿಗೆ ಅರ್ಥವಾಗುವ ಭಾಷೆ ಮತ್ತು ಸರಳ ಶೈಲಿಯಲ್ಲಿರುವ ವಿಜ್ಞಾನದ ಬರಹಗಳೂ ವಿಚಾರ ಪ್ರಚೋದಕವಾಗಿ ವೈಜ್ಞಾನಿಕ ಪ್ರೇರಣೆ ನೀಡಬೇಕು. ಜಾನಪದೀಯ ಐತಿಹಾಸಿಕ ಕಥೆಗಳಿರಬಹುದು. ಆದರೆ ಆಕರ್ಷಕ ಶೈಲಿಯಲ್ಲಿರ ಬೇಕು. ಕಲ್ಪಿತವಾದ ಭಯಾನಕ ಹಾರರ್ ಕಥೆಗಳು, ಮಾಟ ಮಂತ್ರ ಕಥೆಗಳು ಇರಬಾರದು. ಮನವರಳಿಸುವ ಕಥೆಗಳು ಹೆಚ್ಚು ಉಪಯುಕ್ತ. ಮಕ್ಕಳ ವಯಸ್ಸಿಗೆ ಮೀರಿದ ಜೀವನ ಮೌಲ್ಯಗಳ ವಿಚಾರ ಅಲ್ಲಿರಬಾರದು. ಮನರಂಜನೆ ಜೊತೆಗೆ ವೈಚಾರಿಕ ಪ್ರಜ್ಞೆ ಮತ್ತು ಸೃಜನಶೀಲತೆ ಹೆಚ್ಚಿಸಬೇಕು.

ನಾವು ನಿತ್ಯ ನೋಡುವ ಘಟನೆಗಳನ್ನೇ ಕಥೆಗಳನ್ನಾಗಿ ಹೇಳಿದರೆ ಅವುಗಳ ಬಗ್ಗೆ ಆಸಕ್ತಿ ಉಂಟಾಗುತ್ತದೆ. ಇಂಥ ಪ್ರಯೋಗಗಳನ್ನು ಪೂರ್ಣಚಂದ್ರ ತೇಜಸ್ವಿ ಮಾಡಿದರು. ಮಕ್ಕಳು ಕೇಳಿದ ಪ್ರಶ್ನೆಗಳನ್ನೇ ಆಧಾರವಾಗಿಟ್ಟುಕೊಂಡು ಅವುಗಳನ್ನು ಕಥಾರೂಪದಲ್ಲಿ ಹೆಣೆದು, ಸೂಕ್ತ ಚಿತ್ರವಿನ್ಯಾಸ ಮಾಡಿ ಆಕರ್ಷಕ ಪುಸ್ತಕಗಳನ್ನು ಸಾಲುಸಾಲಾಗಿ ಕೊಟ್ಟಿದ್ದಾರೆ.

ಮಕ್ಕಳು ಮಕ್ಕಳಿಗಾಗಿ ಬರೆದ ಸಾಹಿತ್ಯವಿದೆ. ಅವರಿಗೆ ಭಾಷೆಯ, ನಿರೂಪಣೆಯ ತಂತ್ರ ವಿಧಾನಗಳು ತಿಳಿಯದಿದ್ದರೂ, ತಮ್ಮದೇ ಶೈಲಿಯಲ್ಲಿ ತಮ್ಮ ಅನುಭವಗಳನ್ನು ತಮಗೆ ತೋಚಿದಂತೆ ಬರೆಯುತ್ತಾರೆ. ಪಾಶ್ಚಾತ್ಯದಲ್ಲಿ ಮುಖ್ಯವಾಹಿನಿಯ ಸಾಹಿತ್ಯದ ಜೊತೆಗೆ ಮಕ್ಕಳಿಂದಲೇ ರಚಿತವಾದ ಸಾಹಿತ್ಯವನ್ನು ಗುರುತಿಸುತ್ತಾರೆ. ಮಕ್ಕಳಲ್ಲಿ ಸೃಜನಶೀಲ ಶಕ್ತಿ ಇರುತ್ತದೆ. ೬ರಿಂದ ೧೦ನೇ ತರಗತಿ ಮಕ್ಕಳಲ್ಲಿ ಅವರ ಸೃಜನಶೀಲತೆಯನ್ನು ಗುರುತಿಸಿ, ಕಥೆ-ಹಾಡು-ನಾಟಕಗಳ ಬಗ್ಗೆ ಓದುವ ಬರೆಯುವ ಕಮ್ಮಟಗಳನ್ನು ನಡೆಸಿದರೆ ಅಲ್ಲಿಯೂ ಮಕ್ಕಳ ಸಾಹಿತ್ಯ ಉದಯವಾಗುತ್ತದೆ. ಮುದ್ದು ತೀರ್ಥಹಳ್ಳಿಯ 'ಒಂದು ಚಂದ್ರನ ತುಂಡು' (ಪ್ರಕಾಶನ : ಗೀತಾಂಜಲಿ ಬುಕ್ ಪಬ್ಲಿಷರ್ಸ್, ಶಿವಮೊಗ್ಗ) ಇತ್ತೀಚೆಗೆ ಮಕ್ಕಳ ಸಾಹಿತ್ಯದಲ್ಲಿ ಸಂಚಲನ ಮೂಡಿಸಿತು. ಈ ಪುಟ್ಟ ಬಾಲೆ ತನ್ನ ಶಾಲೆಯ ಸಹಪಾಠಿಗಳೊಂದಿಗೆ ಪುಟ್ಟ ಪತ್ರಿಕೆಯನ್ನು ಸಹ ಪ್ರಕಟಿಸುತ್ತಿದ್ದಾಳೆ. ಅವಳ ಅನುಭವಗಳ ಕಥನವೇ 'ಒಂದು ಚಂದ್ರನ ತುಂಡು.'

ಮಕ್ಕಳಲ್ಲಿರುವ ವಿಚಾರಶೀಲತೆ, ಸೃಜನಶೀಲತೆ, ಕಲ್ಪನಾಶಕ್ತಿ ಬೆಳೆಯದಿದ್ದರೆ ಅದಕ್ಕೆ ಕಾರಣ ತಂದೆ-ತಾಯಿಯರು ಪ್ರೋತ್ಸಾಹಿಸದೇ ಇದ್ದದ್ದು. ಈಗಿನ ಮಕ್ಕಳು ಟಿವಿಯ ಕಾರ್ಟೂನ್ ಚಿತ್ರಗಳನ್ನು, ಛೋಟಾ ಭೀಮ್‌ಗಳನ್ನು ನೋಡುವುದರಿಂದ ಸೃಜನಶೀಲತೆ ಬೆಳೆಯುವುದಿಲ್ಲ. ಇದು 'ಅಪ್ರಬುದ್ಧ ಮಕ್ಕಳ ದೃಕ್-ಶ್ರಾವ್ಯ ಸಾಹಿತ್ಯ.' ಇದರಿಂದ ಯಾವ ಚಿಂತನೆಯೂ ಮೂಡದು. ಈ ಕಾರ್ಟೂನ್ ಚಿತ್ರಗಳಲ್ಲಿ ಹಿಂಸೆಯೂ ಇರುತ್ತದೆ. ಇದು

ನಕಾರಾತ್ಮಕ ಪರಿಣಾಮವನ್ನು ಉಂಟುಮಾಡುತ್ತದೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರಚನೆ ಸ್ಥಗಿತವಾಗಿದೆ. ಜಾಗತೀಕರಣದ ಭರಾಟೆಯಲ್ಲಿ ಆಂಗ್ಲ ಪ್ರಭಾವ ಉಂಟಾಗಿ ದೃಶ್ಯ ಮಾಧ್ಯಮಗಳ ವಿಪರೀತ ಪರಿಣಾಮದಿಂದ ಇಂಗ್ಲಿಷ್‌ನ ಬಿಕ್ಕಟ್ಟಿನಲ್ಲಿ ಕನ್ನಡ ಬಡವರ ಭಾಷೆಯಾಗಿ ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರಚನೆ ಕುಂಠಿತವಾಗಿದೆ. ಮಾತೃಭಾಷೆ ಎಂಬುದು ಬರಿಯ ಕೂಗಾಗಿದೆ. ಕನ್ನಡದ ಅಕ್ಷರ ಪದಗಳು ಇಂಗ್ಲಿಷ್‌ಗೆ ರೂಪಾಂತರವಾಗಿವೆ. ಕಾಮಿಕ್ಸ್‌ಗಳು, ಜಾಹೀರಾತುಗಳು, ಧಾರಾವಾಹಿಗಳು, ಹಾರರ್ ಶೋಗಳು, ರಿಯಾಲಿಟಿ ಶೋಗಳು, ವಿಡಿಯೋ ಗೇಮ್‌ಗಳು, ಮಕ್ಕಳಿಗೆ ಕುರೂಪ, ವಿರೂಪ ದರ್ಶನ ಮಾಡಿಸಿ ಕನ್ನಡತನ ಮರೆಮಾಡಿ ನಿಜ ಬದುಕಿನಿಂದ ದೂರವಾಗಿಸುತ್ತಿವೆ. ಶಾಲೆಗಳಲ್ಲಿ ಕನ್ನಡದ ಆಳ-ಅಗಲ ಸಹ ಕ್ಷೀಣಿಸುತ್ತಲಿದೆ. ಕನ್ನಡದ ಸರಕಾರ ಶ್ರೀಮಂತಿಕೆ ತೋರಿದರೆ ಕನ್ನಡಕ್ಕೆ ಮಾತ್ರ ಬಡತನವಿದೆ. ಹಳ್ಳಿಗಳಲ್ಲಿಯೂ ಕನ್ನಡ ಕ್ಷೀಣಿಸುತ್ತಲಿದೆ. ಸಾಕ್ಷರತಾ ಆಂದೋಲನಗಳು ಕೇವಲ ಕಾಗದದ ಕುದುರೆಗಳಾಗಿವೆ. ಜ್ಞಾನಪೀಠದ ಪಟ್ಟಿಗಿಂತ, ಶಾಸ್ತ್ರೀಯ ಭಾಷೆಯ ಕೂಗಿಗಿಂತ, ವಿಶ್ವವಿದ್ಯಾಲಯಗಳ ಸ್ಥಾಪನೆಯ ಬಡಿದಾಟಕ್ಕಿಂತ, ರಾಜ್ಯೋತ್ಸವದ ಪ್ರದರ್ಶನಗಳಿಗಿಂತ, ಕನ್ನಡ ಭಾಷೆಯ ಬೇರು ಕೊಳೆಯುತ್ತಿರುವುದರ ಕಡೆಗೆ ಗಮನ ಕೊಡಬೇಕಾಗಿದೆ. ಉತ್ತಮ ಕನ್ನಡ ಮಾದರಿ ಶಾಲೆಗಳು, ಮಕ್ಕಳ ಚಲನಚಿತ್ರ, ಕನ್ನಡ ಸೊಗಡಿನ ಆ್ಯನಿಮೇಷನ್ ಚಿತ್ರಗಳು, ಮಕ್ಕಳಿಗಾಗಿ ಇರುವ ಪತ್ರಿಕೆಗಳು, ಹಿರಿಯ ಸಾಹಿತಿಗಳು ರಚಿಸಿದ ಮಕ್ಕಳ ಸಾಹಿತ್ಯದ ಪ್ರಭಾವ ಇವೆಲ್ಲ ಮಕ್ಕಳ ಸಾಹಿತ್ಯ ರಚನೆಗೆ ಪೂರಕ ಅಂಶಗಳಾಗುವುವು. ವಿಶ್ವವಿದ್ಯಾಲಯದಲ್ಲಿ ಮಕ್ಕಳ ಸಾಹಿತ್ಯದ ಬಗ್ಗೆ ಸಂಶೋಧನೆ ಆಗಬೇಕು.




ಕನ್ನಡ ಭಾಷೆಯಲ್ಲಿ ಮಕ್ಕಳ ಅಕ್ಷರದಾಹ ಇಂಗಿಸುವ ಬದ್ಧತೆ ಬೇಕು. ಇಂದಿನ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗಮನಿಸಿದರೆ, ಮಕ್ಕಳಿಗೂ ಲಘುವಾದ ವೈಚಾರಿಕ ಪ್ರಗತಿಪರ ಪ್ರಜ್ಞೆ ಮೂಡಿಸುವ ಹಾದಿಯಲ್ಲಿ ನಮ್ಮೆಲ್ಲ ಅಹಂಗಳನ್ನು ಬದಿಗಿಟ್ಟು ಮಕ್ಕಳ ಶ್ರೇಯೋಭಿವೃದ್ಧಿಗಾಗಿ, ಮಾನಸಿಕ ವಿಕಸನಕ್ಕಾಗಿ ಅಕ್ಷರ ಕ್ರಾಂತಿಯ ಮಕ್ಕಳ ಸಾಹಿತ್ಯ ರಚನೆ ಆಗುವುದು ಅವಶ್ಯಕವಾಗಿದೆ.

**ಯು. ಎನ್. ಸಂಗನಾಳಮಠ**
ವಿಶ್ರಾಂತ ಉಪನ್ಯಾಸಕರು-ಲೇಖಕರು, 'ಜ್ಯೋತಿರ್ಲಿಂಗ'
೧ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ
ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ

# ಸಿರಿಸಂಪಿಗೆಯ ಹಿರಿಗುವರ



ತಾಯ ಜೋಗುಳದಲ್ಲಿ
ಹಾಡ ಹದ ಹಿಡಿದು
ಹೆಜ್ಜೆ ಹಾಕುತ್ತ ತಂದೆ ಸೂತ್ರಕ್ಕೆ
ಬೆಳುವೊಲದ ಬಿರುಬಿಸಿಲು
ಮಲೆನಾಡ ಚಳಿಗಾಳಿ
ಉಂಡುಟ್ಟು ಬೆಳೆದವರು

ಸಾವಳಗಿ ಶಿವಲಿಂಗ
ಭೂಸನೂರಮಠದಯ್ಯಗಳ
ಗುರುಕರುಣೆ ಹೊದ್ದು ಉದ್ದಕ್ಕು
ಸಿರಿಗನ್ನಡ ಕುಲುಮೆಯಲ್ಲಿ
ಬೆಂದು ಹದಗೊಂಡವರು

ಬಾಲ್ಯ ಯೌವನ ಆಟ
ನೆಲದ ಮಕ್ಕಳ ಕೂಟ
ಏಳುಕೊಳ್ಳದ ಯಲ್ಲಮ್ಮ
ಮೈಲಾರ ಗೊರವ
ಬೀರಲಿಂಗನ ಕುವರ

ಗೊಂದಲಿಗ ಬುಡಬುಡಕಿ ನಾದ
ಮೈದುಂಬಿ ಹರಿದಿತ್ತು
ಲಾವಣಿಯ ಝರಿ

ದೇಸಿಗರ ಹಾಡುಕತೆ
ರಂಗುರಂಗಿನ ಸಣ್ಣದೊಡ್ಡಾಟ
ನುಡಿಯ ಹಬ್ಬದ ಬೆಡಗು
ಸುಗ್ಗಿ ನಡೆದಿತ್ತು ನಿರಂತರ
ಹುಟ್ಟುಕಲೆಗಾರನೆದೆಯ ರಂಗಸಜ್ಜಿಕೆಯಲ್ಲಿ

ಘೋಡಗೇರಿಯ ಹೈದ
ಛಲದಂಕ ಮಲ್ಲ
ಹತ್ತಿಕ್ಕಿ ಬಡತನ, ಹಸಿವು ಅವಮಾನ
ನೆಲದ ಸತ್ವವ ಹೀರಿ ಬೆಳೆದ ಹೆಜ್ಜಾಲ
ಏರಿ ಎತ್ತರೆತ್ತರ ಶಿಖರ
ಸಾಧಿಸಿ ಷಿಕಾಗೊ ಶಿಕ್ಷಕ
ಸ್ವ ಪ್ರಭೆಯ ಪವಾಡದಮೃತಬಳ್ಳಿ
ಕುಡಿಯೊಡೆದು ಬೆಳೆದಿತ್ತು.

ಏರುಜವ್ವನದಲ್ಲೆ ತರಿದು ಬೇರಿಟ್ಟು
ರುಂಡ ಮುಂಡ
ಭೋಗ ಯೋಗದ ನಡಿಗೆ ಬೆಸುಗೆಗೊಂಡಿತ್ತು
ಉಪ್ಪು ಜೀರಿಗೆ ಮೆಣಸು
ಹುಣಿಸೆಹುಳಿ ಮುಂದಾಗಿ
ತೀರ್ಥ ರಂಗಭೋಗದೋಕುಳಿ
ಹರಿದಾಡಿತ್ತು ಪುಟದ ತುಂಬ
ಆದರೆಲ್ಲ ಅರ್ಪಣೆಯಾಗಿತ್ತು
ಕರ್ತಾರ ಕಮ್ಮಟಕೆ
ಅಂತಾಗಿ ತಡೆಯಲಿಲ್ಲ ಯಾವ ಭೂತ ಪಿಶಾಚಿ
ದೇಸಿಸರಸತಿಯ ಸಿರಿಕಂಠದುಲಿಯ

ಮಿಥ್‌ಗಳ ಒಡನಾಡಿ ಸದಾ
ಕಟ್ಟಿಕಲೆಯ ಅದ್ಭುತ ಲೋಕ
ಕನ್ನಡಮ್ಮನ ಕುಲಕ್ಕೆ ಹೆಸರು ತಂದವರು
ಇದು ಕನ್ನಡದ ಭಾಗ್ಯ
ಸಿರಿಸಂಪಿಗೆಯ ಹಿರಿಗುವರ

**ಡಾ॥ ನೀಲಗಿರಿ ತಳವಾರ**
ನಂ. ಪಿ-೭, ಪ್ರಾಧ್ಯಾಪಕರ ನಿವಾಸ, ಎರಡನೇ ಕ್ರಾಸ್, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

❖ ಕುಮುದಾ ಪುರುಷೋತ್ತಮ್ ❖

# ಪವಾಡ ಪುರುಷ

ಅದೊಂದು ಸರ್ಕಾರಿ ಪ್ರಾಥಮಿಕ ಶಾಲೆ. ಕಡೆಯ ಪೀರಿಯಡ್ ಮುಗಿದು ಶಾಲೆಯ ಜವಾನ ಗಂಟೆ ಬಾರಿಸುತ್ತಲೇ ತೂಬು ಒಡೆದ ಕೆರೆಯ ನೀರು ಭೋರ್ಗರೆಯುವಂತೆ ಮಕ್ಕಳು ಹರ್ಷದಿಂದ ಕೇಕೆ ಹಾಕುತ್ತಾ ಕೂಗುತ್ತಾ ಹೊರ ನುಗ್ಗಿದರು. ಒಮ್ಮೆ ಸ್ವಾತಂತ್ರ್ಯದ ಸಂಭ್ರಮ ಅಡಗುತ್ತಿದ್ದಂತೆ ಶಾಂತರಾಗಿ ಗುಂಪುಗುಂಪಾಗಿ ಹರಟುತ್ತಾ ಮನೆಯತ್ತ ಮುಖ ಮಾಡಿದರು.

ಮೂರನೇ ತರಗತಿಯಲ್ಲಿ ಓದುತ್ತಿದ್ದ ನೀಲಿಯೂ ಅಂಜಲಿಯೊಡನೆ ಮನೆಯ ಹಾದಿ ಹಿಡಿದಳು. ಮುಖ್ಯರಸ್ತೆ ಸಮೀಪಿಸುತ್ತಿದ್ದಂತೆ ನೀಲಿ ಮನೆಯ ಹಾದಿ ಬಿಟ್ಟು ಅತ್ತ ತಿರುಗಿದಳು.

''ಏ ನೀಲಿ, ಅಲ್ಯಾಕೇ ಹೋಗ್ತೀಯ ? ನಿಂಗೆ ಮನೆ ರಸ್ತೆ ಮರೆತುಹೋಯ್ತಾ ?''

''ಥತ್ತೇರೀ. ಎಲ್ಲಿ ಹೋಗ್ತೀಯ ಅಂತ ಕೇಳ್ಬಾರ್ದೂಂತ ಗೊತ್ತಿಲ್ವೇನೇ ? ಹಾಗೆ ಕೇಳಿದ್ರೆ ಹೋಗ್ತಿರೋ ಕೆಲ್ಸ ಆಗೋದಿಲ್ವಂತೆ. ನಮ್ಮಮ್ಮ ಹೇಳಿದ್ದಾರೆ.''

''ಆದ್ರೆ ನಮ್ಮಮ್ಮ ಹೇಳಿಲ್ವಲ್ಲಾ, ಅದಕ್ಕೆ ಕೇಳಿದೆ. ಅಲ್ಲಿ ನಿಂಗೇನು ಕೆಲ್ಸ ?''

ಅಂಜಲಿಯ ಮೇಲೆ ರೇಗುವಂತೆ ಮನಸ್ಸಾದರೂ ಮರುಕ್ಷಣವೇ ಅವಳ ಸಹಕಾರ ವಿರದಿದ್ದಲ್ಲಿ ಅಮ್ಮನಿಂದ ಬೆನ್ನಿನ ಮೇಲೆ ಗುದ್ದುಗಳು ಖಚಿತ ಎಂದು ಧ್ವನಿ ಮೃದುಗೊಳಿಸಿದಳು.

''ಒಂದು ಮುಖ್ಯವಾದ ಕೆಲಸ ಇದೆ. ಅದಕ್ಕೇ ಹೋಗ್ತಿದ್ದೀನಿ. ನಮ್ಮಮ್ಮ ಕೇಳಿದ್ರೆ ನನಗೇನೂ ಗೊತ್ತಿಲ್ಲಾಂತ ಹೇಳ್ಬಿಡೇ.'' ಅಂಜಲಿ ಇದಕ್ಕೆ ಉತ್ತರಿಸದಿದ್ದಾಗ ಅವಳ ಕೈ ಹಿಡಿದು ಗೋಗರೆದಳು.

''ಪ್ಲೀಸ್ ಅಂಜ್ಲೀ ! ನಮ್ಮಮ್ಮಂಗೆ ಗೊತ್ತಿಲ್ಲಾಂತ ಹೇಳ್ತೀಯಾ ? ಬೇಕಾದ್ರೆ ನಾನೆಲ್ಲಿ ಹೋಗಿದ್ದೇಂತ ನಾಳೆ ನಿನಗೊಬ್ಬಳಿಗೆ ಮಾತ್ರ ಹೇಳ್ತೀನಿ.''

''ಖಂಡಿತಾ ಹೇಳ್ತೀಯಾ ? ಪ್ರಾಮಿಸ್ ? ಹೇಳೋದಾದ್ರೆ ಇವತ್ತು ನಿಮ್ಮಮ್ಮಂಗೆ ಗೊತ್ತಿಲ್ಲಾಂತ ಹೇಳ್ತೀನಿ.''

ಗೆಳತಿಯರಿಬ್ಬರೂ ತಮ್ಮ ತಮ್ಮ ಪ್ರತ್ಯೇಕ ದಾರಿ ಹಿಡಿದರು.

ಅದು ಪಟ್ಟಣದ ಮುಖ್ಯರಸ್ತೆ. ಸಂಜೆಯ ಸಮಯವಾಗಿದ್ದರಿಂದ ವಾಹನಗಳ, ಜನಗಳ ದಟ್ಟಣೆ ಸಾಕಷ್ಟಿತ್ತು. ಹಿಂದೊಮ್ಮೆ ತಂದೆಯೊಡನೆ ಬಂದಿದ್ದ ಔಷಧಿ ಅಂಗಡಿ ಅರಸುತ್ತಾ ಜನಸಾಗರದ ಮಧ್ಯೆ ದಾರಿ ಮಾಡಿಕೊಂಡು ಸಾಗಿದಳು ನೀಲಿ. ಆ ಅಂಗಡಿಯಲ್ಲೂ ಜನ ತುಂಬಿ ಔಷಧಿ ಖರೀದಿಸುತ್ತಿದ್ದರು. ಹೇಗೋ ದಾರಿ ಮಾಡಿಕೊಂಡು ಔಷಧಿಗಳನ್ನು ಪ್ರದರ್ಶಿಸಿದ್ದ ಗಾಜಿನ ಶೆಲ್ಫ್ ಮುಂದೆ ಬಂದು ನಿಂತಳು. ಆ ಶೆಲ್ಫ್ ಅವಳಿಗಿಂತ ಆರು ಇಂಚು ಎತ್ತರಕ್ಕಿದ್ದು ಅಂಗಡಿಯವನ ಕಣ್ಣಿಗೆ ಬೀಳದೆ ಅವನು ಅವಳತ್ತ ಗಮನ ಹರಿಸಲಿಲ್ಲ. ಎಷ್ಟೋ ಹೊತ್ತು ಕಾದ ನೀಲಿ ಕಡೆಗೂ ಧೈರ್ಯಮಾಡಿ ಬಾಯ್ತೆರೆದಳು.

''ರೀ''

ಅಂಗಡಿಯವ ಅವಳತ್ತ ತಿರುಗಿ ನೋಡದಿದ್ದಾಗ ಬಳಿಯಿದ್ದ ಹೆಂಗಸೊಬ್ಬಳು ಅವನ ಗಮನ ನೀಲಿಯತ್ತ ಸೆಳೆದಳು.

''ಪಾಪ, ಈ ಹುಡ್ಗಿ ಅಷ್ಟೊತ್ತಿನಿಂದ ಕಾಯ್ತಿದೆ. ಅದೇನು ಬೇಕೊ ಕೊಟ್ಟು ಕಳಿಸಪ್ಪ.''

ಅಂಗಡಿಯವ ತುಸು ಮುಂದೆ ಬಗ್ಗಿ ಕೇಳಿದ :

''ಏನ್ಬೇಕು ಮರೀ ?''

''ಒಂದು ಬಾಟ್ಲಿ ಪವಾಡ ಕೊಡ್ರೀ''

''ಏನಂದೆ ? ಇನ್ನೊಮ್ಮೆ ಹೇಳು''

''ಪವಾಡ''

''ಅದೇನು ಔಷಧಾನಾ ? ಡಾಕ್ಟ್ರು ಹೇಳಿದ್ರಾ ?''

''ಹುಂ. ನಮ್ಮಪ್ಪಯ್ಯಂಗೆ ಹೇಳಿದ್ರಂತೆ.''

''ಹಾಗೆಲ್ಲಾ ಬಾಯ್ನಲ್ಲಿ ತಪ್ಪು ತಪ್ಪಾಗಿ ಹೇಳಿದ್ರೆ ಕೊಡೋಕ್ಕಾಗೊಲ್ಲ. ಚೀಟೀಲಿ ಬರಸ್ಕೊಂಡು ಬಾ'' ಎನ್ನುತ್ತ ಬೇರೆ ಗಿರಾಕಿಗಳತ್ತ ಗಮನ ಹರಿಸಿದ.

ನೀಲಿ ಮಾತ್ರ ನಿಂತೇ ಇದ್ದಳು.

''ಇವನು ಮೊದಲಿನಂತೆ ಗುಣಮುಖನಾಗೋದು ಬಹಳ ಕಷ್ಟವಂತೆ. ಏನಾದ್ರೂ ಪವಾಡ ನಡದ್ರೆ ಅವನು ಉಳಿಯಬಹುದು ಅಂದ್ರು ಡಾಕ್ಟರು'' ಎಂದು ಅಮ್ಮನಿಗೆ ಹೇಳಿದ್ದರು ಅಪ್ಪ. ಈ ಮಾತು ನೀಲಿಯ ಕಿವಿಗೆ ಬಿದ್ದು ನಿದ್ದೆ ಹಾರಿ ಹೋಗಿತ್ತು. ಪವಾಡ ! ಹಾಗಂದ್ರೇನು ? ಈ ಮೊದಲು ಅವಳು ಈ ಮಾತನ್ನು ಕೇಳಿರಲಿಲ್ಲ. ಯಾರನ್ನು ಇದರ ಬಗ್ಗೆ ಕೇಳುವುದು ? ಅಂಜಲಿಯನ್ನೇ ? ಅವಳು ಮೊದಲೇ ಶತ ಪೆದ್ದು, ಕ್ಲಾಸಿನಲ್ಲಿ ಟೀಚರ್ ಲೆಕ್ಕ ಕೊಟ್ಟಾಗಲೆಲ್ಲಾ ನೀಲಿಯ ಪುಸ್ತಕದತ್ತ ಇಣುಕಿ ಇಣುಕಿ ಕಾಪಿ ಮಾಡುವವಳು. ಅಂತಹವಳಿಗೆ ಇದರ ಬಗ್ಗೆ ತಿಳಿದಿರುತ್ತಾ ? ಇನ್ನು ಟೀಚರ್ ? ಪಾಠದ ಬಗ್ಗೆ ಕೇಳಿದರೇ ಸಿಡುಕುತ್ತಾ ಸ್ಕೇಲ್ ಝಳಪಿಸುವವರು, ಅಂತಹವರು ಈ ಸಂದೇಹ ಪರಿಹರಿಸುತ್ತಾರಾ ?



ಕಳೆದ ರಾತ್ರಿ ನೀಲಿಗೆ ನಿದ್ರೆ ಬಂದಿರಲಿಲ್ಲ. ಪಕ್ಕದ ಕೋಣೆಯಲ್ಲಿ ಮಲಗಿದ್ದ ಅವಳ ಪ್ರೀತಿಯ ತಮ್ಮಯ್ಯನಿಗೆ ಕೆಂಡದಂತಹ ಜ್ವರ. ಅಪ್ಪ ಅಮ್ಮ ಇಬ್ಬರೂ ಅವನ ಎಡಬಲದಲ್ಲಿ ಅವನ ಕೈಗಳನ್ನು ಹಿಡಿದುಕೊಂಡು ಜಾಗರಣೆ ಮಾಡಿದ್ದರು. ಅಳುತ್ತಿದ್ದ ಅಮ್ಮನನ್ನು ಅಪ್ಪ ಸಮಾಧಾನಿಸುವುದು ನಿದ್ರೆ-ಎಚ್ಚರದ ನಡುವೆ ತೂಗಾಡುತ್ತಿದ್ದ ನೀಲಿಯ ಕಿವಿಗೆ ಬಿದ್ದಿತ್ತು. ಚೆನ್ನಾಗಿ, ಆರೋಗ್ಯವಾಗಿ ಆಡಿಕೊಂಡಿದ್ದ ತಮ್ಮಯ್ಯ ಈಗೆರಡು ತಿಂಗಳಿನಿಂದ ಖಾಯಿಲೆ ಬಿದ್ದಿದ್ದ. ಒಂದು ಸಂಜೆ ಅಕ್ಕನೊಡನೆ ಆಡುತ್ತಿದ್ದವ ಇದ್ದಕ್ಕಿದ್ದಂತೆ ಕೈಕಾಲು ಸೆಟೆದುಕೊಂಡು ಬಿದ್ದುಬಿಟ್ಟಿದ್ದ. ಸೋಪು ಪುಡಿ ನುಂಗಿದವನಂತೆ ಬಾಯಿಂದ ದ್ರವ ನೊರೆನೊರೆಯಾಗಿ ಹರಿದಿತ್ತು. ನೀಲಿಯ ಆಕ್ರಂದನ ಕೇಳಿದ ಅಮ್ಮ ಸೊಂಟದಲ್ಲಿ ತೂಗಾಡುತ್ತಿದ್ದ ಬೀಗದ ಕೈ ತೆಗೆದು ಮಗುವಿನ ಕೈಗೆ ಕೊಟ್ಟಿದ್ದರು. ಆ ಕ್ಷಣಕ್ಕೆ ತಮ್ಮಯ್ಯ ಸುಧಾರಿಸಿ ಕಣ್ಬಿಟ್ಟಿದ್ದರೂ ಮತ್ತೆ ಪದೇ ಪದೇ ಹೀಗಾದಾಗ ಹೆತ್ತವರು ಅವನನ್ನೆತ್ತಿ ಡಾಕ್ಟರ ಷಾಪು, ಆಸ್ಪತ್ರೆ, ಟೆಸ್ಟುಗಳು ಎಂದು ಅಲೆದಾಡಿದ್ದರು. ಕೈಯ್ಯಲ್ಲಿದ್ದ ಹಣ ಖರ್ಚಾಗಿ ಅವರಿವರಿಂದ ಕೈಗಡ ತಂದು ಚಿಕಿತ್ಸೆ ಕೊಡಿಸಿದ್ದರೂ ಆರೋಗ್ಯ ಮಾತ್ರ ತುಸುವೂ ಸುಧಾರಿಸಿರಲಿಲ್ಲ.

''ಇವನು ಮೊದಲಿನಂತೆ ಗುಣಮುಖನಾಗೋದು ಬಹಳ ಕಷ್ಟವಂತೆ. ಏನಾದ್ರೂ ಪವಾಡ ನಡದ್ರೆ ಅವನು ಉಳಿಯಬಹುದು ಅಂದ್ರು ಡಾಕ್ಟರು'' ಎಂದು ಅಮ್ಮನಿಗೆ ಹೇಳಿದ್ದರು ಅಪ್ಪ. ಈ ಮಾತು ನೀಲಿಯ ಕಿವಿಗೆ ಬಿದ್ದು ನಿದ್ದೆ ಹಾರಿ ಹೋಗಿತ್ತು. ಪವಾಡ! ಹಾಗಂದ್ರೇನು? ಈ ಮೊದಲು ಅವಳು ಈ ಮಾತನ್ನು ಕೇಳಿರಲಿಲ್ಲ. ಯಾರನ್ನು ಇದರ ಬಗ್ಗೆ ಕೇಳುವುದು? ಅಂಜಲಿಯನ್ನೇ? ಅವಳು ಮೊದಲೇ ಶತ ಪೆದ್ದು, ಕ್ಲಾಸಿನಲ್ಲಿ ಟೀಚರ್ ಲೆಕ್ಕ ಕೊಟ್ಟಾಗಲೆಲ್ಲಾ ನೀಲಿಯ ಪುಸ್ತಕದತ್ತ ಇಣುಕಿ ಇಣುಕಿ ಕಾಪಿ ಮಾಡುವವಳು. ಅಂತಹವಳಿಗೆ ಇದರ ಬಗ್ಗೆ ತಿಳಿದಿರುತ್ತಾ? ಇನ್ನು ಟೀಚರ್? ಪಾಠದ ಬಗ್ಗೆ ಕೇಳಿದರೇ ಸಿಡುಕುತ್ತಾ ಸ್ಕೇಲ್ ಝಳಪಿಸುವವರು, ಅಂತಹವರು ಈ ಸಂದೇಹ ಪರಿಹರಿಸುತ್ತಾರಾ? ಅಥವಾ ಅಪ್ಪ ಅಮ್ಮನನ್ನೇ ಕೇಳಿದರೆ? ತಮ್ಮಯ್ಯ ಹಾಸಿಗೆ ಹಿಡಿದಂದಿನಿಂದ ಚಿಂತೆಯಿಂದ, ಹಣದ ಅಡಚಣೆಯಿಂದ ಕುಗ್ಗಿಹೋಗಿರುವ ಅವರು ಸಹನೆಯಿಂದ ಹೇಳಿಯಾರೇ? ಅದಾವುದೂ ಸಾಧ್ಯವಿಲ್ಲ ಎನಿಸಿತು. ಡಾಕ್ಟರು ಹೇಳಿದ್ದಾರೆ ಎಂದಮೇಲೆ ಅದು ಔಷಧಿಯ ಹೆಸರೇ ಇರಬೇಕು. ಪಾಪ! ಅಪ್ಪನಂತೂ ಈಚೀಚೆಗೆ ಕೆಲಸಕ್ಕೂ ಹೋಗದೆ ಸದಾ ತಮ್ಮನ ಆರೈಕೆಯಲ್ಲೇ ದಿನಪೂರ್ತಿ ದೂಡುವರು. ತಾನೇ ಹೋಗಿ ಆ ಔಷಧಿ ತಂದು ಅಪ್ಪನ ಕೈಗಿಡಬೇಕು. ತನ್ನ ಪ್ರೀತಿಯ ತಮ್ಮಯ್ಯ ಮೊದಲಿನಂತಾದರೆ ಸಾಕು. ನೀಲಿ ತನ್ನ ಹಾಸಿಗೆಯಿಂದ ಮೇಲೆದ್ದು ಕತ್ತಲಿನಲ್ಲಿಯೇ ತಡಕಾಡುತ್ತಾ ಕೊಕ್ಕೆಗೆ ಸಿಕ್ಕಿಸಿದ್ದ ಅಪ್ಪನ ಷರ್ಟಿನ ಜೇಬಿನಿಂದ ನಾಣ್ಯವೊಂದನ್ನು ತೆಗೆದು ತನ್ನ ಶಾಲೆಯ ಚೀಲದೊಳಕ್ಕಿಳಿಸಿದಳು.

''ನನ್ನ ಷರ್ಟಿಂದ ಏನಾದ್ರೂ ಚಿಲ್ರೆ ತೆಗೆದ್ಯೇನೇ?'' ಹೊರ ಹೊರಡಲು ಸಿದ್ಧವಾಗುತ್ತಿದ್ದ ಅಪ್ಪ ಅಮ್ಮನನ್ನು ಕೇಳುತ್ತಿದ್ದಾಗ ನೀಲಿ ಕಣ್ಬಿಟ್ಟಳು. ಒಂದು ಕ್ಷಣ ಹೇಳಲೋ ಬೇಡವೋ ಎಂಬ ಸಂದಿಗ್ಧ ಕಾಡಿತು. ಹೇಳಿದರೆ, ''ನೀನೇನೂ ಹೋಗಿ ಔಷಧಿ ತರಬೇಕಿಲ್ಲ'' ಎಂದು ಬಿಟ್ಟರೆ? ಅಲುಗಾಡದೆ ನಿದ್ದೆ ಬಂದವಳಂತೆ ಇದ್ದುಬಿಟ್ಟಿದ್ದಳು.

''ರೀ, ನಾ ಕೇಳಿದ ಔಷಧಿ ಕೊಡ್ರೀ. ನನ್ನ ಹತ್ರ ಅದಕ್ಕೆ ಕಾಸು ಇದೆ. ಇಲ್ನೋಡಿ'' ಎಂದು ಕೈಯೆತ್ತಿ ಕಾಸನ್ನು ತೋರಿಸಿದಳು. ಅಂಗಡಿಯವನಿಗೆ ಸಿಟ್ಟು ಮೇರೆ ಮೀರಿತು. ಏನೋ ಹೇಳಲು ಬಾಯ್ತೆರೆದವನು ಅಂಗಡಿಯ ಮುಂದೆ ಬಂದು ನಿಂತ ಮಿರಮಿರ ಮಿಂಚುವ ಭವ್ಯವಾದ ಕಾರನ್ನು ಕಂಡು ಬಾಯ್ಮುಚ್ಚಿದ. ಅದರಿಂದಿಳಿದ ವ್ಯಕ್ತಿಯನ್ನು ಕಂಡಮೇಲಂತೂ ವ್ಯಾಪಾರವನ್ನಲ್ಲಿಗೇ ಬಿಟ್ಟು ರಸ್ತೆಗಿಳಿದು ಅವನನ್ನು ಅಪ್ಪಿದ.

''ಹಲೋ ಗೋಪು! ಎಷ್ಟು ವರ್ಷಗಳಾಗಿತ್ತಯ್ಯ ನಿನ್ನನ್ನು ನೋಡಿ? ಈಗ ನಿನ್ನ ಶಾಲಾ ಗೆಳೆಯನ ನೆನಪು ಬಂತಾ?''

''ನೆನಪು ಬರೋಕ್ಕೆ ಮರೆತಿದ್ರೆ ತಾನೇ? ಅಮೆರಿಕದಲ್ಲಿದ್ದ ಹದಿನೈದು ವರ್ಷಗಳಲ್ಲಿ ಅದೆಷ್ಟು ಸಾವಿರ ಬಾರಿ ನಿನ್ನನ್ನು ನೆನಪಿಸಿಕೊಂಡೆ ಗೊತ್ತಾ? ಇಷ್ಟು ವರ್ಷ ಹೆರವರ ಸೇವೆ ಮಾಡಿದ್ದು ಸಾಕು. ಇನ್ನು ನನ್ನ ಹುಟ್ಟೂರಿನ ಜನಕ್ಕೂ ನಾ ಗಳಿಸಿದ ವಿದ್ಯೆಯ ಫಲ ದೊರಕಲಿ ಅಂತ ವಾಪಸ್ಸು ಬಂದ್ಬಿಟ್ಟೆ. ಈಗ ಇಲ್ಲಿಯೇ ಒಂದು ಆಸ್ಪತ್ರೆ ತೆರೆದಿದ್ದೇನೆ.''

''ಹೌದಾ ಗುರೂ! ಹಾಗಾದ್ರೆ ಈ ಬಡ ಸ್ನೇಹಿತನನ್ನ ಮರೀಬೇಡ. ನಿನ್ನ ಪೇಷಂಟುಗಳಿಗೆಲ್ಲಾ ಔಷಧಿಗೆ ಇಲ್ಲಿಗೇ ಕಳಿಸು. ನಾನೂ ಬದಕ್ಕೋತೀನಿ.''

''ಅದಕ್ಕಿಂತ ಒಳ್ಳೇ ಐಡಿಯಾ ಹೇಳ್ತೀನಿ ಕೇಳು. ನೀನು ನಮ್ಮ ಆಸ್ಪತ್ರೇಲಿ ಇದರ ಒಂದು ಬ್ರ್ಯಾಂಚ್ ತೆಗೆದ್ಬಿಡು. ಆಗ ಇಬ್ರೂ ಒಂದೇ ಕಡೆ ಬದುಕಬಹುದು.'' ಅವರಿಬ್ಬರ ಮಾತು ಮುಂದುವರಿಯುತ್ತಿದ್ದಂತೆ ನೀಲಿ ಮತ್ತೊಮ್ಮೆ ಧ್ವನಿ ಏರಿಸಿ ಕರೆದಳು :

''ರೀ, ನಾ ಕೇಳಿದ ಔಷಧಿ ಕೊಡ್ರೀ... ಪ್ಲೀಸ್.''

''ಏ ಹುಡ್ಗೀ, ಒಂದ್ಸಲ ಹೇಳಿದ್ದು ಕಿವಿಗೆ ಬೀಳಲಿಲ್ವಾ? ಡಾಕ್ಟ್ರ ಹತ್ರ ಚೀಟಿ ತೊಗೊಂಡು ಬಾ ಅಂತ ಹೇಳಿದ್ರೆ ತಿಳ್ಯೋದಿಲ್ವಾ?'' ಈಗ ಗೆಳೆಯನತ್ತ ತಿರುಗಿದ.

''ಎಂತೆಂಥಾ ತಿಕ್ಕಲು ಗಿರಾಕಿಗ್ಳು ಬರ್ತಾರೇಂತ. ಅದೆಂಥದ್ದೋ 'ಪವಾಡ' ಬೇಕಂತೆ. ಇಲ್ಲ ಅಂತಂದ್ರೆ ಪಟ್ಟು ಹಿಡಿದಿದ್ದಾಳೆ. ಅಂತಹ ಹೆಸರಿನ ಔಷಧ ಇದ್ಯಾ? ನೀನು ಡಾಕ್ಟ್ರು. ನೀನೇ ಹೇಳು.''

''ಪವಾಡಾನಾ? ಅಂತಹ ಔಷಧ ಇಲ್ವಲ್ಲಾ ಪುಟ್ಟಿ. ಯಾರು ತರೋಕ್ಕೆ ಹೇಳಿದ್ದು?''

''ಡಾಕ್ಟ್ರು ನಮ್ಮಪ್ಪಯ್ಯಂಗೆ ಹೇಳಿದ್ರಂತೆ. ನನ್ನ ತಮ್ಮಯ್ಯಂಗೆ ಶಾನೆ ದಿನದಿಂದ ಜ್ವರ. ಎಲ್ಲೆಂದ್ರಲ್ಲಿ ಪ್ರಜ್ಞೆ ತಪ್ಪಿ ಬಿದ್ದುಬಿಡ್ತಾನೆ. ಪವಾಡ ಏನಾರಾ ಇದ್ರೆ ಬದಕ್ತಾನಂತೆ. ಇಲ್ದಿದ್ರೆ... ಇಲ್ದಿದ್ರೆ...'' ಹೇಳುತ್ತಾ ದುಃಖ ಉಮ್ಮಳಿಸಿತು.

ಆತ ಅವಳ ಸಮೀಪ ಬಂದು ತಲೆ ಸವರಿ ಸ್ನೇಹದಿಂದ ಹೇಳಿದ.

''ಇಲ್ನೋಡು ಪುಟ್ಟಿ. ನನ್ನ ಹತ್ರ ನೀ ಕೇಳಿದ ಪವಾಡ ಇದ್ರೂ ಇರಬಹುದು. ಆದ್ರೆ ಅದಕ್ಕೆ ಮುಂಚೆ ನಾನವ್ನನ್ನು ನೋಡ್ಬೇಕಲ್ಲಾ.'' ಆತ ಹಾಗೆ ಹೇಳಿದ್ದೇ ತಡ ನೀಲಿ ಚೀಲಕ್ಕೆ ಕೈಹಾಕಿ ನಾಣ್ಯ ತೆಗೆದು ಅವನ ಕೈಯ್ಯಲ್ಲಿಟ್ಟಳು. ''ಮೊದ್ಲು ಈ ಕಾಸನ್ನಿಟ್ಕೊಳ್ಳಿ. ತಮ್ಮಯ್ಯನ್ನ ನೋಡಿ ಪವಾಡ ಇಲ್ಲಾಂತ ಹೇಳ್ಬಾರ್ದು. ಕೊಟ್ಟೇ ಕೊಡ್ಬೇಕು.''

ನೀಲಿಯೊಡನೆ ಬಂದ ಆ ದೊಡ್ಡ ಮನುಷ್ಯನನ್ನು ಅವಳ ಅಪ್ಪ ಅಮ್ಮ ತುಸು ಭಯ-ಭಕ್ತಿಯಿಂದಲೇ ಸ್ವಾಗತಿಸಿದರು. ಆತನೊಬ್ಬ ವೈದ್ಯನೆಂದು ತಿಳಿದ ಮೇಲಂತೂ ಗೌರವ ಇನ್ನೂ ಹೆಚ್ಚಿತು. ತಮ್ಮಯ್ಯನನ್ನು ಕೂಲಂಕಶವಾಗಿ ಪರಿಶೀಲಿಸಿ ಅವರೆಗೆ ನೀಡಿದ ಚಿಕಿತ್ಸೆಯ ವಿವರ ತಿಳಿದುಕೊಂಡು ಮರುದಿನವೇ ಹೆಚ್ಚಿನ ಪರೀಕ್ಷೆಗಾಗಿ ತನ್ನ ಆಸ್ಪತ್ರೆಗೆ ಕರೆತರಲು ಹೇಳಿ ತನ್ನ ಕಾರ್ಡ್ ನೀಡಿದ.

ಮಗುವಿನ ಚಿಕಿತ್ಸೆಗಾಗಿ ಸಾಕಷ್ಟು ಖರ್ಚು ಮಾಡಿ ಕೈ ಖಾಲಿ ಮಾಡಿಕೊಂಡಿದ್ದ ನೀಲಿಯ ತಂದೆ ಹಿಂಜರಿದರು : ''ಡಾಕ್ಟ್ರೇ, ಈಗಾಗ್ಲೇ ಇವನ ಚಿಕಿತ್ಸೆಗೆ ಸಾವಿರಾರು ರೂಪಾಯಿ ಕೈಬಿಟ್ಟಿದೆ. ವೃತ್ತಿಯಲ್ಲಿ ನಾನೊಬ್ಬ ಟೈಲರ್. ದಿನಕೂಲಿ ಮೇಲೆ ಕೆಲಸ ಮಾಡುವವ. ಈಗ ಕೆಲಸಕ್ಕೆ ಹೋಗಿ ಎರಡು ತಿಂಗಳಾಗಿವೆ. ಇನ್ನು ಹೆಚ್ಚಿನ

## ಮಡೆ ಸ್ನಾನ

ಉಂಡೆಲೆ ಮೇಲೆ
ಉರುಳಿ
ಮಡೆ ಸ್ನಾನ ಮಾಡುವ
ಪದ್ಧತಿ ಇಲ್ಲಿ
ಸರ್ವ ಸಾಮಾನ್ಯ;
ಮೂಕ ವೀಕ್ಷಕನಾಗಿ
ಮುಗುಳು ನಗೆ
ಬೀರುವನು
ಕುಕ್ಕೆ ಸುಬ್ರಹ್ಮಣ್ಯ।

ಡಾ॥ ವಿ. ಪುಗಳೇಂದಿ
ಬಳ್ಳಾರಿ



ಪರೀಕ್ಷೆಗಾಗಲಿ, ಚಿಕಿತ್ಸೆಗಾಗಲಿ ವೆಚ್ಚ ಮಾಡುವಷ್ಟು ಹಣ ನಮ್ಮಲ್ಲಿಲ್ಲ. ಇನ್ನು ಮುಂದೆ ದೇವರು ನಡೆಸಿದಂತಾಗಲಿ.''

''ಈಗ ನಿಮ್ಮ ಮಗೂಗೆ ಚಿಕಿತ್ಸೆ ಮುಖ್ಯ. ಹಣದ ವಿಚಾರ ಆಮೇಲೆ ನೋಡೋಣ. ನಾಳೆ ತಪ್ಪದೆ ಬೆಳಗ್ಗೆ ಒಂಬತ್ತಕ್ಕೆ ನನ್ನನ್ನು ಬಂದು ನೋಡ್ತೀರ, ಅಷ್ಟೆ. ಮಿಕ್ಕ ವಿಷ್ಯ ನನಗೆ ಬಿಡಿ'' ಎಂದು ಆಜ್ಞೆಯ ಧಾಟಿಯಲ್ಲಿ ಹೇಳಿ ಹೋಗಿಬಿಟ್ಟ ಆ ವ್ಯಕ್ತಿ!

ಒಂದು ವಾರದಿಂದ ನೀಲಿಯ ವಾಸ್ತವ್ಯ ಅವಳಜ್ಜಿಯ ಮನೆಯಲ್ಲಾಗಿತ್ತು. ಅಪ್ಪ ಅಮ್ಮ ತಮ್ಮಯ್ಯನೊಡನೆ ಆ ಡಾಕ್ಟರರ ಆಸ್ಪತ್ರೆಗೆ ತಪಾಸಣೆಗೆಂದು ಹೋದವರು ಅಲ್ಲಿಯೇ ಉಳಿದುಬಿಟ್ಟಿದ್ದರು. ಅನೇಕ ಪರೀಕ್ಷೆಗಳು, ಟೆಸ್ಟುಗಳು ಮಾಡುವುದಿದೆ. ದಿನವೂ ಹೋಗಿ ಬರುವುದು ವೃಥಾ ಶ್ರಮ ಹಾಗೂ ಖರ್ಚು. ಇಲ್ಲಿಯೇ ಉಳಿದುಬಿಡಿ ಎಂದ ಡಾಕ್ಟರು ಅವರಿಗೆ ಅನುಕೂಲಗಳನ್ನೂ ಒದಗಿಸಿದ್ದರಂತೆ. ಪರೀಕ್ಷೆಯ ಫಲಿತಾಂಶ ತಿಳಿದಾಗ ತಮ್ಮಯ್ಯನ ಮೆದುಳಿನಲ್ಲಿ ಪುಟ್ಟ ಗಡ್ಡೆ ಬೆಳೆದದ್ದು ಕಂಡುಬಂದಿತಂತೆ, ಅದನ್ನು ಆಪರೇಷನ್ ಮಾಡಿ ತೆಗೆಯುವುದು ಜೀವ ಉಳಿಸುವ ಏಕೈಕ ಮಾರ್ಗ ಎಂದು ಅಭಿಪ್ರಾಯಪಟ್ಟ ಡಾಕ್ಟರು ಅದಕ್ಕಾಗಿ ದಿನವೂ ನಿಗದಿ ಮಾಡಿದ್ದರು. ವಿಷಯ ತಿಳಿದ ನೀಲಿ ತಾನೂ ತಮ್ಮಯ್ಯನ ಬಳಿ ಹೋಗುವುದಾಗಿ ಅಜ್ಜಿಯ ಬಳಿ ಅತ್ತುಕೊಂಡಳು.

''ನೋಡು ನೀಲಿ, ಆಪರೇಷನ್ ಆದ ಒಂದು ವಾರ ಯಾರನ್ನೂ ತಮ್ಮಯ್ಯನ ಬಳಿ ಬಿಡುವುದಿಲ್ಲ. ನಿನ್ನ ಅಪ್ಪ ಅಮ್ಮನನ್ನೂ ಸಹ. ಅವರೂ ದೂರದಿಂದ ಗಾಜಿನ ಬಾಗಿಲ ಮೂಲಕ ನೋಡಬಹುದಂತೆ, ಅಷ್ಟೆ. ನೀನೀಗ ಹೋದರೂ ಏನೇನೂ ಪ್ರಯೋಜನವಿಲ್ಲ. ವಾರದ ಬಳಿಕ ತಮ್ಮಯ್ಯನನ್ನು ವಾರ್ಡಿಗೆ ಕರೆತಂದಾಗ ನಾನೇ ನಿನ್ನನ್ನು ಕರೆದುಕೊಂಡು ಹೋಗ್ತೀನಿ'' ಎಂದು ಅಜ್ಜಿ ವಾಗ್ದಾನ ಮಾಡಿದಾಗ ನೀಲಿಯ ಅಳು ನಿಂತಿತು.

''ನೀಲಿ, ಇವತ್ತು ಸ್ಕೂಲಿಗೆ ಹೋಗ್ಬೇಡ. ನಿನ್ನ ಅಮ್ಮನ ಫೋನ್ ಬಂದಿತ್ತು. ನಿನ್ನ ತಮ್ಮನನ್ನು ನಿನ್ನೆ ವಾರ್ಡಿಗೆ ಹಾಕಿದ್ದಾರಂತೆ. ಯಾರು ಬೇಕಾದರೂ ಬಂದು ನೋಡಬಹುದಂತೆ. ಇವತ್ತು ಹೋಗೋಣ್ವಾ ?''

ಇದಕ್ಕೇ ಕಾದಿದ್ದ ನೀಲಿ ಕುಣಿಯುತ್ತಾ ಹೋಗಿ ಎರಡೇ ನಿಮಿಷದಲ್ಲಿ ಸ್ನಾನ ಮುಗಿಸಿ, ಅಪ್ಪ ಇವಳ ಹುಟ್ಟಿದ ಹಬ್ಬಕ್ಕೆ ತಾನೇ ಹೊಲಿದು ತಂದಿದ್ದ ಫ್ರಾಕ್ ಧರಿಸಿ ಅಜ್ಜಿಯೊಡನೆ ಖುಷಿಯಿಂದ ಹೊರಟಳು. ಎರಡು ಬಸ್ ಬದಲಾಯಿಸಿ ಯಾರ್‍ಯಾರನ್ನೋ ವಿಳಾಸ ಕೇಳಿ ಆಸ್ಪತ್ರೆ ತಲುಪಿದಾಗ ಸಂಜೆ ನಾಲ್ಕು ಗಂಟೆಯಾಗಿತ್ತು. ತಮ್ಮಯ್ಯನ ತಲೆಗೆ ಪಟ್ಟಿ ಕಟ್ಟಿದ್ದರು. ಹಾಸಿಗೆ ಮೇಲೆ ಕುಳಿತು ಐಸ್ ಕ್ರೀಮ್ ತಿನ್ನುತ್ತಿದ್ದವ, ''ನಿಂಗೂ ಬೇಕಾ ?'' ಎಂದು ತನ್ನ ಅಕ್ಕನನ್ನು ಕೇಳಿದ. ಅವಳು ಬೇಕೆಂದು ತಲೆಯಾಡಿಸಿದಾಗ, ''ನಿಂಗೆ ಐಸ್ ಕ್ರೀಮ್ ಬೇಕಾದ್ರೆ ನೀನೂ ಆಪರೇಷನ್ ಮಾಡಿಸಿಕೋ. ಇಲ್ದಿದ್ರೆ ಇವ್ರು ಕೊಡೋಲ್ಲ'' ಎಂದು ನಗೆಯಾಡಿದ. ಅವನು ಹೀಗೆ ಮಾತನಾಡಿ ಅದೆಷ್ಟು ತಿಂಗಳುಗಳಾಗಿದ್ದುವೋ. ಅಲ್ಲಾ, ಆಪರೇಷನ್ ಆದ ಮಗೂಗೆ ಗಂಜಿ ಕೊಡೋದು ಬಿಟ್ಟು ಐಸ್ ಕ್ರೀಮಾ ? ಅಜ್ಜಿಗೆ ಆಘಾತ. ಮಗಳನ್ನು ತರಾಟೆಗೆ ತೆಗೆದುಕೊಂಡರು : ''ಇದೇನೇ ಇದು ? ರೋಗಿಗೆ ಐಸ್ ಕ್ರೀಮ್ ಕೊಡೋದಾ ? ಶೀತ ಆಗೋದಿಲ್ವೇ ? ಅವರಿಗೆ ತಿಳಿಯೋದಿಲ್ಲಾಂದ್ರೆ ನಿನಗೂ ತಿಳಿಯೋದಿಲ್ವೇ ?''

''ಉಶ್ ! ಸುಮ್ನಿರು. ನಿನ್ನ ಮಾತನ್ನು ಯಾರಾದ್ರೂ ಕೇಳಿಸಿಕೊಂಡಾರು. ಇಲ್ಲೆಲ್ಲಾ ಆಹಾರ ತಜ್ಞರು ಬಂದು ಯಾವ ಯಾವ ರೋಗಿಗೆ ಯಾವ್ಯಾವ ಊಟ ಕೊಡ್ಬೇಕು ಅಂತ ನಿರ್ಧರಿಸೇ ಕೊಡ್ತಾರೆ. ಏನೂ ಭಯ ಇಲ್ಲ''

''ಅದ್ಸರಿ ಕಣೆ. ಅರಮನೆಯಂತಹ ಆಸ್ಪತ್ರೆ. ಈ ಪಾಟಿ ಸವಲತ್ತುಗಳು. ಇಲ್ಲಿ ಅದೆಷ್ಟು ಹಣ ಸುಲೀತಾರೋ ? ನೀವೆಲ್ಲಿಂದ ತರ್ತೀರ ? ಮೊದ್ಲೇ ಮೈಯೆಲ್ಲಾ ಸಾಲ ಮಾಡ್ಕೊಂಡಿದ್ದೀರ.'' ಧ್ವನಿ ತಗ್ಗಿಸಿ ಕೇಳಿದರು.

''ಅದೇ ನಮ್ಗೂ ಯೋಚ್ನೇಮ್ಮಾ. ಮಗು ಏನೋ ಹುಷಾರಾಯ್ತು. ಇದುವರೆಗೂ ಡಾಕ್ಟ್ರು ಹಣದ ಮಾತನ್ನೇ ಆಡಿಲ್ಲ. ಮುಂದೆ ದೊಡ್ಡ ಮೊತ್ತದ ಬಿಲ್ ಕೊಟ್ರೆ ಏನ್ಗತಿ ಅಂತ ಆತಂಕವಾಗ್ತಿದೆ...'' ಮುಂದೇನೋ ಹೇಳಬೇಕೆಂದಿದ್ದವರು ಡಾಕ್ಟರು ಒಳಬರುತ್ತಿದ್ದುದನ್ನು ಕಂಡು ಅರ್ಧದಲ್ಲಿಯೇ ಮಾತು ತುಂಡರಿಸಿದರು.

''ಹಲೋ ಪುಟ್ಟಿ, ನಿನ್ನ ತಮ್ಮನನ್ನು ನೋಡೋಕ್ಕೆ ಬಂದ್ಯಾ ?'' ನೀಲಿಯ ಕೆನ್ನೆ ನವಿರಾಗಿ ಹಿಂಡಿ ಮಗುವನ್ನು ಕೂಲಂಕಶವಾಗಿ ಪರೀಕ್ಷೆ ನಡೆಸಿದರು.

''ನಿಮ್ಮ ಮಗು ಈಗ ಸಂಪೂರ್ಣ ಚೇತರಿಸಿಕೊಂಡಿದ್ದಾನೆ. ಇನ್ನೇನೂ ಭಯವಿಲ್ಲ. ನಾಳೆ ಮುಂಜಾನೆ ಡಿಸ್‌ಚಾರ್ಜ್ ಮಾಡ್ತೀನಿ. ನೀವು ಮನೆಗೆ ಕರೆದುಕೊಂಡು ಹೋಗಬಹುದು.'' ಈ ಮಾತುಗಳನ್ನು ಕೇಳುತ್ತಲೇ ಅಪ್ಪನ ಕಣ್ತುಂಬಿ ಬಂತು.

''ಡಾಕ್ಟ್ರೇ, ನೀವು ಪವಾಡ ಮಾಡಿ ನನ್ನ ಮಗನಿಗೆ ಮರುಜೀವ ಕೊಟ್ಟು ಉಳಿಸಿದ್ರಿ.'' ಅಪ್ಪ ಅಮ್ಮ ಇಬ್ಬರೂ ಕೃತಜ್ಞತೆಯಿಂದ ಕೈಮುಗಿದರು.

''ಪವಾಡ ಮಾಡ್ಬೇಕು ಅಂತ ಹೇಳಿದ್ದೇ ನಿಮ್ಮ ಮಗ್ಳು. ಅದ್ರಂತೆ ನಡೆದಿದ್ದೇನೆ. ಇದ್ರಲ್ಲಿ ನನ್ನದೇನೂ ಇಲ್ಲ. ಅಲ್ವೇನೇ ಪುಟ್ಟಿ?'' ಎಂದು ಕೇಳಿದಾಗ ನೀಲಿಗೆ ಕೋಡು ಮೂಡಿತ್ತು! ಏಕೆಂದರೆ ಎಲ್ಲಾ ತನ್ನಿಂದಲೇ ಆದದ್ದು ಎಂಬ ಹೆಮ್ಮೆ ಕೋಡು ಮೂಡಿಸಿತ್ತಲ್ಲಾ!

''ಡಾಕ್ಟ್ರೇ, ನಿಮ್ಮ ಫೀಸು ?'' ಅಮ್ಮ ಹಿಂಜರಿಯುತ್ತಲೇ ಕೇಳಿದರು.

''ಫೀಸಾ ? ಅದು ಆಗ್ಲೇ ಸಂದಾಯವಾಗಿದೆ.'' ಜೇಬಿನಿಂದ ಎರಡು ರೂಪಾಯಿ ನಾಣ್ಯ ತೆಗೆದು ಎಲ್ಲರಿಗೂ ತೋರಿಸಿದರು.

''ಇದೇನು ಡಾಕ್ಟ್ರೇ ಹೀಗೆ ಹೇಳ್ತೀರಾ ? ನಾವ್ಯಾವಾಗ ನಿಮಗೆ ಫೀಸು ಕೊಟ್ವಿ ?''

ಡಾಕ್ಟರು ನೀಲಿಯತ್ತ ನೋಡಿ ಕಿರುನಗೆ ಚೆಲ್ಲಿದರು.

''ಇದು ನನಗೂ ನಿಮ್ಮ ಮಗಳಿಗೂ ಮಾತ್ರ ಗೊತ್ತಿರುವ ಗುಟ್ಟಿನ ವಿಚಾರ. ನಾನಂತೂ ಯಾರಿಗೂ ಗುಟ್ಟು ಬಿಟ್ಟುಕೊಡೊಲ್ಲ. ನೀನೂ ಯಾರ ಹತ್ರಾನೂ ಬಾಯಿ ಬಿಡೋಲ್ಲ ಅಂತ ಪ್ರಾಮಿಸ್ ಮಾಡ್ತೀಯಾ ?'' ಬಲಗೈ ಮುಂದೆ ಚಾಚಿದರು.

ನೀಲಿ ತನ್ನ ಬಲ ಹಸ್ತ ಅದಕ್ಕೆ ಜೋಡಿಸಿ 'ಪ್ರಾಮಿಸ್' ಎಂದಳು !

(ಪ್ರೇರಣೆ - ಇಂಟರ್‌ನೆಟ್)



**ಕುಮುದಾ ಪುರುಷೋತ್ತಮ್**
ನಂ. ೭೮೨, ೧೨ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ಎಚ್.ಎ.ಎಲ್. ೨ನೇ ಹಂತ
ಬೆಂಗಳೂರು - ೫೬೦ ೦೦೮



# ನೈಜ ಚಿತ್ರಕಲೆಯ ಶಿಕ್ಷಕಿ ಶ್ರೀಮತಿ ಜಯಲಕ್ಷ್ಮಿ



ಚಿತ್ರಕಲಾ ಕ್ಷೇತ್ರದಲ್ಲಿ ಸಮಕಾಲೀನ ಮತ್ತು ಅಮೂರ್ತ ಕಲೆಗಳಿಗಿಂತ ಭಿನ್ನವಾಗಿ ಯೋಚಿಸುವ ಕಲಾವಿದರು ನೈಜ ಹಾಗೂ ಸಾಂಪ್ರದಾಯಿಕ ಚಿತ್ರಗಳನ್ನು ರಚಿಸುವುದರಲ್ಲಿ ಆಸಕ್ತಿ ವಹಿಸುತ್ತಾರೆ. ಇಂತಹ ಸಾಲಿನಲ್ಲಿ ನಿಲ್ಲುವವರು ಶ್ರೀಮತಿ ಜಯಲಕ್ಷ್ಮಿ (ಜಯ ಅರಸು).

ಇವರು ನೈಜ, ಸಾಂಪ್ರದಾಯಿಕ ಚಿತ್ರಗಳನ್ನು ರಚಿಸುವುದರೊಂದಿಗೆ ಕರಕುಶಲ ಕಲೆಗಳನ್ನು ಆಸಕ್ತಿಯಿಂದ ರಚಿಸುತ್ತಾ ಪ್ರಸ್ತುತ ಶ್ರೀ ಶಾರದಾ ವಿದ್ಯಾನಿಕೇತನ ಶಾಲೆಯ ಚಿತ್ರಕಲಾ ಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಬಿಡುವಿನ ವೇಳೆಯಲ್ಲಿ ಮಕ್ಕಳಿಗೆ ಚಿತ್ರಕಲೆ, ಕರಕುಶಲ ಕಲೆಗಳನ್ನು ಕಲಿಸುತ್ತಿದ್ದಾರೆ.









Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / MAY 2013 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)